# ನವಕರ್ನಾಟಕ ೫೦ರ ಸಂಭ್ರಮದಲ್ಲಿ

## ಚಿನ್ನದ ಹಬ್ಬಕ್ಕೆ ಚಂದದ ಕೊಡುಗೆ

ಆಗಸ್ಟ್ 2010ರಲ್ಲಿ ಲೋಕಾರ್ಪಣೆ * ಪ್ರಕಟಣಪೂರ್ವ ರಿಯಾಯಿತಿ ರೂ. 1000/-




1200 ಪುಟಗಳು. ಆಕಾರ : ಡೆಮಿ ¼ (22 x 28 ಸೆಂಮೀ). ಎರಡು ಸಂಪುಟಗಳು. ರಟ್ಟಿನ ಪೆಟ್ಟಿಗೆಯಲ್ಲಿ.

ಆರ್ಟ್ ಕಾಗದದ ಮೇಲೆ ಬಹುವರ್ಣದಲ್ಲಿ ಮುದ್ರಣವಾಗುವ ಮಹತ್ವದ ಕೃತಿ. ಸುಮಾರು 5000 ಅಪೂರ್ವ ವರ್ಣ ಹಾಗೂ ಕಪ್ಪುಬಿಳುಪು ಚಿತ್ರಗಳು. ಪ್ರೊ|| ಎಂ. ಎಚ್. ಕೃಷ್ಣಯ್ಯ, ಡಾ|| ವಿಜಯಾ ಮತ್ತು ಶ್ರೀ ಸಿ. ಆರ್. ಕೃಷ್ಣರಾವ್ ಅವರ ನೇತೃತ್ವದಲ್ಲಿ ಕರ್ನಾಟಕ ಕಲಾ ಪರಂಪರೆಯನ್ನು ಅನಾವರಣಗೊಳಿಸುವ ಮಹಾಪ್ರಯತ್ನ. 9 ಅಧ್ಯಾಯಗಳು, 51 ಪರಿಣತರ 50 ಲೇಖನಗಳ ಈ ಗ್ರಂಥ ಸಿದ್ಧಗೊಳಿಸಲು ತೆಗೆದುಕೊಂಡ ಕಾಲ ನಾಲ್ಕು ವರ್ಷ.

*ನವಕರ್ನಾಟಕದ ಈ ವಿಶಿಷ್ಟ ಯೋಜನೆ ಸಾಂಸ್ಕೃತಿಕ ರಂಗದಲ್ಲಿ ಅದ್ಭುತ ಸಾಧನೆ. ನಾಡು ನುಡಿಗೆ ವಿಶೇಷ ಕಾಣಿಕೆ*

ಮೊದಲೇ ಕಾದಿರಿಸುವವರಿಗೆ ಕೃತಿಯ ಸಿಡಿ/ಡಿವಿಡಿ ಉಚಿತ. ತ್ವರೆ ಮಾಡಿ !

ರಿಯಾಯಿತಿ ಪಡೆಯಲು ಮುಂಗಡ 500 ರೂಪಾಯಿಗಳನ್ನು ಇಂದೇ ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್ ವಿಳಾಸಕ್ಕೆ ಕಳಿಸಿ ನಿಮ್ಮ ಹೆಸರನ್ನು ನೋಂದಣಿ ಮಾಡಿಕೊಳ್ಳಿ. ಹಣವನ್ನು ಬ್ಯಾಂಕ್ ಡ್ರಾಫ್ಟ್ ಅಥವಾ ಮನಿ ಆರ್ಡರ್ ಮೂಲಕ ಕಳಿಸಬೇಕು. ಉಳಿದ ಹಣವನ್ನು (ರೂ. 1500) ಒಟ್ಟಿಗೆ ಅಥವಾ ಕಂತುಗಳಲ್ಲಿ ಆಗಸ್ಟ್ ತಿಂಗಳೊಳಗೆ ಪಾವತಿಸಲು ಅವಕಾಶವಿರುತ್ತದೆ.

ಕೃತಿಯ ಮುಖ ಬೆಲೆ
ರೂ. 3000
ಪ್ರಕಟಣಪೂರ್ವ
ರಿಯಾಯಿತಿ ರೂ. 1000
ಪ್ರಕಟಣಪೂರ್ವ ಬೆಲೆ
ರೂ. 2000




*ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ :*


**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001.
ದೂರವಾಣಿ : 30578022, 22203580. ಫ್ಯಾಕ್ಸ್ : 30578023.
e-mail : navakarnataka@gmail.com. URL : www.navakarnataka.com blog : http://navakarnataka.blogspot.com

# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಕಮಲಂ ಅರಸು, ಶ್ರೀಹರಿ, ಆಚಾರ್ಯ, ರಾಂಚಂದ್ರ ಕೊಪ್ಪಲು

ಮುಖಪುಟ : ಸಂಗಾತಿ ಜ್ಯೋತಿ ಬಸು

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ಜನವರಿ ೧೫ರಂದು ಸೂರ್ಯಗ್ರಹಣ ನೋಡಲೆಂದು ಕನ್ಯಾಕುಮಾರಿಗೆ ಯಾರಾದರೂ ಹೋಗಿದ್ದರೆ ಅವರಿಗೆ ಕಾಣುತ್ತಿದ್ದುದು ಗ್ರಹಣವಲ್ಲ, ಬದಲಾಗಿ ಸ್ವತಃ ಕನ್ಯಾಕುಮಾರಿಗೇ ಹಿಡಿದಿರುವ 'ಕ್ರೂರ' ಗ್ರಹಣ. ಎಲ್ಲೆಲ್ಲೂ ಕಪ್ಪುಬಟ್ಟೆಯ ಮತ್ತು ಬರಿಮೈಯ ಅಯ್ಯಪ್ಪ 'ಭಕ್ತ'ರು ಮತ್ತು ಅವರಿಗಾಗಿ ತೆರೆದಿಟ್ಟಿರುವ ನೂರಾರು ಅಂಗಡಿಗಳು. ಸೂರ್ಯಗ್ರಹಣವನ್ನು ಶಾಂತವಾಗಿ ವೀಕ್ಷಿಸಲು ಅಲ್ಲಿ ಒಂದಡಿ ಜಾಗವೂ ಸಿಕ್ಕುವಂತಿರಲಿಲ್ಲ. ನಲವತ್ತು ವರ್ಷಗಳ ಹಿಂದಿನ ಮನಮೋಹಕ ಕನ್ಯಾಕುಮಾರಿ, ವಿವೇಕಾನಂದ ಬಂಡೆ, ಸಮುದ್ರದ ಮರಳು ತೀರ, ಎಲ್ಲಾ ನಾಶವಾಗಿ ಹೋಗಿದೆ. ನಮ್ಮ ದೇಶದಲ್ಲಿ ಯಾವುದಕ್ಕೂ ಗೌರವವೇ ಉಳಿದಿಲ್ಲವೆಂಬ ಹತಾಶೆಯು ಮನಸ್ಸನ್ನು ಘೋರವಾಗಿ ಆಕ್ರಮಿಸುತ್ತದೆ. ಬೆಂಗಳೂರಿನ ದೇವಸ್ಥಾನಗಳ ಮುಂದೆ ಅರ್ಚಕರು ಈ ಬಾರಿಯ ಗ್ರಹಣವನ್ನು 'ಕ್ರೂರ'ವೆಂದು ಬಣ್ಣಿಸಿ ಉಪಶಮನಕ್ಕಾಗಿ ಇಂತಿಷ್ಟು ಹಣ ಕಕ್ಕಬೇಕೆಂದು ಸೂಚಿಸುವ ದೊಡ್ಡ ದೊಡ್ಡ ಫಲಕಗಳನ್ನು ತೂಗುಹಾಕಿದ್ದರು. ನಿಜಕ್ಕೂ ಕ್ರೂರವಾಗಿದ್ದುದು ಗ್ರಹಣವಲ್ಲ; ಬದಲಾಗಿ, ಅದರ ಹೆಸರಲ್ಲಿ ಭೀತಿ ಹುಟ್ಟಿಸಿದ ಪಂಡರು ಕ್ರೂರಿಗಳು, ಕನ್ಯಾಕುಮಾರಿಯನ್ನು ಹಾಳುಗೆಡಹಿರುವವರು ಪರಮ ಕ್ರೂರಿಗಳು. ಅಲ್ಲಿ ಕೇವಲ ವಿವೇಕಾನಂದ ಬಂಡೆ ಇದ್ದಾಗ ಚಿಕ್ಕ ದೋಣಿಯೊಂದು ಆಸಕ್ತರನ್ನು ಬಂಡೆಯ ಬಳಿಗೆ ಪುಕ್ಕಟೆಯಾಗಿ ಸಾಗಿಸುತ್ತಿತ್ತು, ಹಿಂದಕ್ಕೆ ಕರೆದೊಯ್ಯುತ್ತಿತ್ತು. ಬಂಡೆಯ ಮೇಲೆ ಶಾಂತವಾಗಿ ಕುಳಿತು ವಿವೇಕಾನಂದರ ಕನಸಿನ ಭಾರತದ ಬಗ್ಗೆ ಧ್ಯಾನಿಸಲು ಅದೊಂದು ಪ್ರಶಸ್ತವಾದ ಜಾಗವಾಗಿತ್ತು, ಸಮಯವೂ ಇರುತ್ತಿತ್ತು. ಏಕನಾಥರು ವಿವೇಕಾನಂದರಿಗೆ ಮರ್ಯಾದೆ ಮಾಡಹೋಗಿ ಇಡೀ ಸ್ಥಳವನ್ನು ವ್ಯಾಪಾರೀಕೇಂದ್ರವಾಗಿಸಿಬಿಟ್ಟರು, ಮತೀಯ ಅಟ್ಟಹಾಸದ ಬಿಂದುವಾಗಿಸಿಬಿಟ್ಟರು, ನೂಕುನುಗ್ಗಲಿನ ಕುಸ್ತಿ ಅಖಾಡವಾಗಿಸಿಬಿಟ್ಟರು. ಏನಾದರೂ ದಾರಿ ತಪ್ಪಿ ವಿವೇಕಾನಂದರು ಅಲ್ಲಿಗೆ ಬಂದುಬಿಟ್ಟರೆ ಕುಯ್ಯೋ, ಮರ್ರೋ, ಎಂದು ಓಡಿಹೋಗಲು ತವಕಿಸಿಯಾರು! ಹಿಂದು ಸಂಸ್ಕೃತಿಯೆಂದು ಯಾವುದನ್ನು ಹೆಸರಿಸುತ್ತಾರೋ ಅದರ ಔನ್ನತ್ಯವನ್ನು ಖಂಡಿತ ಕನ್ಯಾಕುಮಾರಿಯಲ್ಲಿ ಕಾಣಲಾಗುತ್ತಿಲ್ಲ; ಅಲ್ಲಿ ಕಾಣಸಿಗುವುದು ದುಃಖಿತಪ್ತರನ್ನಾಗಿಸುವ ಅವನತಿ, ಅಷ್ಟೆ! ಅದರಿಂದ ರಾಜಕೀಯವಾಗಿ ಯಾರಿಗೋ ಲಾಭವಾಗಿರಬಹುದು, ವ್ಯಾಪಾರಸ್ಥರಿಗೆ ಗಿರಾಕಿಗಳು ಸಿಕ್ಕಿರಬಹುದು, ಆದರೆ ಕುಮಾರಿ ಎಲ್ಲಿಗೋ ಪರಾರಿಯಾಗಿಬಿಟ್ಟಿದ್ದಾಳೆ ಮತ್ತು ವಿವೇಕಾನಂದರು ಪ್ರತಿದಿನ ಮುಳುಗುವ ಸೂರ್ಯನೊಡನೆ ತಾವೂ ಮುಳುಗಿಹೋಗಿದ್ದಾರೆ. ಅಂದು ವಿವೇಕಾನಂದರು ಬಂಡೆಯ ಬಳಿಗೆ ಈಜಿಹೋಗಿ ಕುಳಿತು 'ಅಯ್ಯೋ, ನನ್ನ ದೇಶವೇ' ಎಂದು ಕೊರಗಿ ಕ್ರಿಯಾಶೀಲತೆಯ ತಪಸ್ಸಿಗೆ ಶರಣಾದರಂತೆ; ಇಂದು ಬಂಡೆಯ ಮೇಲೆ ಕ್ಷಣಕಾಲ ಕುಳ್ಳಿರಲು ವ್ಯವಧಾನವಿದ್ದರೂ ಅವಕಾಶವಿಲ್ಲ, ನಾವೂ 'ಅಯ್ಯೋ, ನನ್ನ ದೇಶವೇ' ಎಂದು ಮರುಗಲಡ್ಡಿಯಿಲ್ಲ; ಕನ್ಯಾಕುಮಾರಿಯು ಕ್ರಿಯಾಶೀಲತೆಗೆ ಪ್ರೇರೇಪಣೆ ನೀಡಬಹುದೇ ಎಂಬುದು ಮಾತ್ರ ಅನುಮಾನ. ಕಲ್ಕತ್ತೆಯ 'ಬೇಲೂರು ಮಠ' ಇನ್ನೂ ಆ ಹಂತವನ್ನು ಮುಟ್ಟಿಲ್ಲವಲ್ಲಾ ಎಂದು ಸಮಾಧಾನ ತಾಳಬಹುದೇನೋ. ಅಲ್ಲಿಗೂ ಏಕನಾಥರೋ, ದ್ವಿನಾಥರೋ ಲಗ್ಗೆಯಿಟ್ಟರೆ ಅದರ ಕತೆಯೂ ಮುಗಿದಂತೆಯೇ ಸರಿ. ಬೆಂಗಳೂರಿನ ರಾಮಕೃಷ್ಣ ಮಠವು ಈಗಾಗಲೆ ಆ ಹಾದಿಯಲ್ಲಿ ಬಹುದೂರ ಸಾಗಿಹೋಗಿದೆ!

ಕನ್ಯಾಕುಮಾರಿಯಿಂದ ಸುಮಾರು ಅರವತ್ತು ಕಿಲೋಮೀಟರ್ ದೂರದ ಊವಾರಿ ಎಂಬ ಊರಿನಲ್ಲಿ ಗ್ರಹಣ ವೀಕ್ಷಿಸಲು ಸಾಧ್ಯವಾದದ್ದು ಸಾಗರದ ಶ್ರೀ. ವಿಜಯವಾಮನ ಮುಂತಾದವರ ಸಲಹೆಯಿಂದಾಗಿ. ಅಲ್ಲಿ ಒಂದು ದೊಡ್ಡ ಚರ್ಚ್ ಮತ್ತು ಅಷ್ಟು ದೊಡ್ಡದಲ್ಲದ ಶಿವಾಲಯ ಇವೆ. ಸಮುದ್ರತಟದಲ್ಲಿ ಗ್ರಹಣ ವೀಕ್ಷಿಸುತ್ತಿದ್ದವರ ಬಳಿ ಬಂದು ಅಲ್ಲಿಯ ಸಾಮಾನ್ಯ ಜನರೂ ಗ್ರಹಣದ ಅದ್ಭುತ ಸವಿದರು, ಸಂತೋಷಿಸಿದರು. ಆದರೆ ''ಐ.ಟಿ.-ಬಿ.ಟಿ. ಕೇಂದ್ರ''ವೆನ್ನಲಾಗುವ ಬೆಂಗಳೂರಿನಲ್ಲಿ ರಸ್ತೆಗಳು ಬಿಕೋ ಎನ್ನುತ್ತಿದ್ದುವಂತೆ! ಉನ್ನತ ಪದವಿಗಳನ್ನಲಂಕರಿಸಿರುವ ಅನೇಕ ಬೆಂಗಳೂರಿಗರು ಮನೆಗಳ ಬಾಗಿಲು ಬಡಿದು ಒಳಗೆ ಅಡಗಿ ಕೂತಿದ್ದರಂತೆ. ಅವರ ಜ್ಞಾನಕ್ಕೆ, ತಿಳುವಳಿಕೆಗೆ ಒಂದಷ್ಟು ಮಣ್ಣು ಹಾಕಬೇಕು, ಅಷ್ಟೆ! ಇಸ್ರೋ ಅಧ್ಯಕ್ಷ ಶ್ರೀ ರಾಧಾಕೃಷ್ಣನ್ ಅವರ ಮೂಢನಂಬಿಕೆಯನ್ನು 'ಹೊಸತು' ಟೀಕಿಸಿದ್ದಕ್ಕೆ ಕೆಲವರು ತೀವ್ರವಾಗಿ ಪ್ರತಿಕ್ರಿಯಿಸಿದ್ದರು. ರಾಧಾಕೃಷ್ಣನ್ ಅಂಥವರು ವಿಜ್ಞಾನದ ವಿಗತಿಗೆ ಹೇಗೆ ಕಾರಣರಾಗುತ್ತಾರೆಂಬುದಕ್ಕೆ ಜನವರಿ ೧೫ರ ಗ್ರಹಣ ಮತ್ತೊಮ್ಮೆ ಒಂದು ನಿದರ್ಶನವನ್ನೊದಗಿಸಿಕೊಟ್ಟಿದೆ. ಪ್ರಾಚೀನ ಭಾರತದ ಖಗೋಳಶಾಸ್ತ್ರಜ್ಞರು ಇಂದಿನ ವೈಜ್ಞಾನಿಕ ಪರಿಕರಗಳೇನೂ ಇಲ್ಲದಿದ್ದಾಗ ಗ್ರಹಗತಿಗಳ ಸೂಕ್ಷ್ಮವನ್ನು ಅದೆಷ್ಟು ನಿಖರವಾಗಿ ಅವಲೋಕಿಸಿ ದಾಖಲಿಸಿದರೆಂದು ಹೆಮ್ಮೆಯಿಂದ ಹೇಳಿಕೊಳ್ಳುವ ಬದಲು ''ಕೇತುಗ್ರಹಣದ

(೭ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆನ್ನೆಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೧ ಸಂಚಿಕೆ - ೭ ಫೆಬ್ರವರಿ ೨೦೧೦

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@gmail.com
hosathu@gmail.com
URL : www.navakarnataka.com
http://navakarnataka.blogspot.com
http://hosathu.blogspot.com

# ಅಗಲಿದ ಜ್ಯೋತಿ ಬಾಬು

**ಸಂಪಾದಕೀಯ**

**ಬಂ**ಗಾಳದ 'ಭದ್ರಾಲೋಕ್' ಎನ್ನಬಹುದಾದ ಮನೆತನದಲ್ಲಿ ಜನಿಸಿ, ಅದು ಪ್ರತಿನಿಧಿಸುವ ಎಲ್ಲ ಅಪಮೌಲ್ಯಗಳನ್ನೂ ಮೀರಿ ನಿಲ್ಲುವಂತಹ ಅಸಾಧಾರಣ ವರ್ಗಪ್ರಜ್ಞೆಯನ್ನು ಜೀವನದ ಎಲ್ಲ ವಿಭಾಗಗಳಲ್ಲೂ ಪ್ರಕಟಿಸಿದ ಮಹೋನ್ನತ ಜ್ಯೋತಿ ಬಸು ಜನವರಿ ೧೭ರಂದು ತಮ್ಮ ೯೫ನೆಯ ವಯಸ್ಸಿನಲ್ಲಿ ಅಸ್ತಮಿಸಿದ್ದಾರೆ. ಸಾರ್ಥಕ ಜೀವನ ನಡೆಸಿದ ಯಾರ ಮರಣವೂ ಅತಿಹೆಚ್ಚಿನ ದುಃಖ ಮತ್ತು ಅಸಹಾಯಕತೆಯನ್ನು ತರಬಾರದು; ವಿಶೇಷತಃ ೯೫ ವರ್ಷಗಳ ಅವಿರತ ಚಟುವಟಿಕೆಗಳ ಜೀವನ ಜೀವಿಸಿದ ಜ್ಯೋತಿ ಬಸು ಅವರ ದೇಹಾಂತ್ಯವು ನಮ್ಮನ್ನು ಅನ್ಯಮನಸ್ಕರನ್ನಾಗಿಸುವುದಿಲ್ಲ. ಅವರ ಸ್ಮೃತಿ ಗಾಢವಾದ್ದು, ಚಿರಂತನವಾದ್ದು. 'ಹೊಸತು' ಅವರಿಗೆ ಶ್ರದ್ಧಾಪೂರ್ವಕ ನಮನವನ್ನು ವಿನಮ್ರವಾಗಿ ಸಲ್ಲಿಸುತ್ತದೆ.

ಆಕಾಶವಾಣಿಯು ಸಾಮಾನ್ಯವಾಗಿ ಇಂಥವರ ನಿಧನ ವಾರ್ತೆಯನ್ನು ಪ್ರಕಟಿಸುವಾಗ ಅದನ್ನು ಪ್ರಕಟಿಸಲು ಖೇದಗೊಳ್ಳುತ್ತದೆಂದು ಹೇಳುವುದು ಸಂಪ್ರದಾಯ. ಜನವರಿ ೧೭ರಂದು ಮಧ್ಯಾಹ್ನ ೧.೧೦ರ ವಾರ್ತೆಯಲ್ಲಿ ಆಕಾಶವಾಣಿ ಹಾಗೆ ಹೇಳಲಿಲ್ಲ, ಬಂಗ್ಲಾದೇಶದಲ್ಲಿ ನಡೆಯುತ್ತಿದ್ದ ಕ್ರಿಕೆಟ್ ಪಂದ್ಯದ ನೀರಸ ವೀಕ್ಷಕ ವಿವರಣೆಯನ್ನು ನಿಲ್ಲಿಸಲೂ ಇಲ್ಲ. ರಾಜಕೀಯ ಗುಬ್ಬಚ್ಚಿಯೊಂದು ನಿಷ್ಕ್ರಮಿಸಿತೆಂಬಂತೆ ಎರಡು ವಾಕ್ಯಗಳಲ್ಲಿ ವರದಿಯನ್ನು ಮುಗಿಸಿಬಿಟ್ಟಿತು. ಮನಮೋಹನ ಸಿಂಗ್ ಸರ್ಕಾರದ ರಾಜಕೀಯ ಅನಾಗರಿಕತೆಗೆ ಅದೂ ಒಂದು ಅವ್ಯಕ್ತ ಸಾಕ್ಷಿಯಾಯಿತು. ನಂತರ ಅದನ್ನು ಭಾಗಶಃ ಸರಿಪಡಿಸಿಕೊಂಡಿದ್ದು ಸ್ವಾಗತಾರ್ಹ. ಸರ್ಕಾರದ ಮಾಧ್ಯಮವಷ್ಟೇ ಜನಮನದ ಮಾಪನ ಸಾಧನವಲ್ಲದ್ದರಿಂದ ಜ್ಯೋತಿ ಬಸು ಸದಾ ನಮ್ಮ ದೇಶದ ಆದರ್ಶ ನಾಯಕರ ಸಾಲಿನಲ್ಲಿ ಕಂಗೊಳಿಸುತ್ತಲೇ ಇರುತ್ತಾರೆ. ಅವರು ಎಷ್ಟು ಬಾರಿ ಶಾಸಕರಾಗಿ ಚುನಾಯಿತರಾದರು ಹಾಗೂ ಎಷ್ಟು ವರ್ಷ ಮುಖ್ಯಮಂತ್ರಿಯಾಗಿದ್ದರು ಎಂಬುದು ಮಹತ್ವದ ಸಾಧನೆಯ ಸೂಚಕವಾದರೂ ಅದು ಗೌಣ; ಪ್ರಮುಖವಾದ ಅಂಶವೇನೆಂದರೆ ಅವರು ಹೇಗೆ ರಾಜಕೀಯದಲ್ಲಿ ಸ್ವಚ್ಛತೆಯನ್ನು ಕಾಪಾಡಿಕೊಂಡರು ಮತ್ತು ರಾಜ್ಯದ ಜನತೆಯನ್ನು ಹೇಗೆ ಪೋಷಿಸಿ ಬೆಳೆಸಿದರು ಎಂಬುದು. ಆ ನಿಟ್ಟಿನಿಂದ ನೋಡಿದರೆ ಜ್ಯೋತಿ ಬಸು ನಿಜಕ್ಕೂ ಆರದ ಜ್ಯೋತಿಯೇ. ವಿದ್ಯುತ್ಕಡಿತದ ಅವಧಿಗಳು ಬಹಳ ಹೆಚ್ಚಾಗಿರುತ್ತಿದ್ದ ೧೯೮೦ರ ದಶಕದಲ್ಲಿ ಕಲ್ಕತ್ತೆಯಲ್ಲಿ ಕೆಲವರು ಹೇಳಿಕೊಳ್ಳುತ್ತಿದ್ದುದು ಉಂಟು, 'ಈ ಜ್ಯೋತಿ ಸ್ವಲ್ಪಕಾಲ ಹೋದರೇನಂತೆ, ನಮ್ಮ ಆ ಜ್ಯೋತಿ ಪ್ರಖರವಾಗಿ ಬೆಳಗುತ್ತಲೇ ಇದೆ', ಎಂದು. ೧೯೭೦ರ ದಶಕದಲ್ಲಿ ಔದ್ಯಮಿಕ ಕ್ಷೇತ್ರದ ಕಾರ್ಮಿಕರ 'ಕ್ರಾಂತಿಕಾರಿ' ಹೋರಾಟಗಳು ಪಶ್ಚಿಮ ಬಂಗಾಳದ ಅನೇಕ ಕಾರ್ಖಾನೆಗಳನ್ನು ಮುಚ್ಚಿಸಿದುವು. 'ಘೇರಾವ್' ಎಂಬ ಕಲ್ಪನೆಯು ಕ್ರಿಯಾತ್ಮಕವಾಗಿ ಹುಟ್ಟಿಕೊಂಡಿದ್ದು ಆಗಲೇ. ಅದರ ತರುವಾಯದಲ್ಲಿ ರಾಜ್ಯದ ಔದ್ಯಮಿಕ ಪರಂಪರೆಯನ್ನು ಗಟ್ಟಿಗೊಳಿಸುವುದರಲ್ಲಿ ಜ್ಯೋತಿ ಬಸು ಅವರು ತಮ್ಮೆಲ್ಲ ಚಿಂತನೆಗಳನ್ನೂ ಕ್ರೋಡೀಕರಿಸಿ ಮುನ್ನಡೆಸಿದರು. ಹಾಲ್ದಿಯ ಬಂದರು ಮತ್ತು ಸಂಸ್ಕರಣಾ ಕೇಂದ್ರ ಆ ದಿಕ್ಕಿನಲ್ಲಿ ಬಸು ಅವರ ಚಿರಸ್ಥಾಯಿ ಸ್ಮಾರಕವೆಂದು ಹೇಳಬಹುದು. ಕೇಂದ್ರ ಸರ್ಕಾರ ಮತ್ತು ಖಾಸಗಿ ಉದ್ಯಮಿಗಳು ಸಂಪೂರ್ಣ ಸಹಕಾರ ನೀಡದಿದ್ದುದರ ರಾಜಕೀಯವು ಬಸು ಅವರನ್ನು ವಿಚಲಿತರನ್ನಾಗಿಸಲಿಲ್ಲ. 'ಹೊಟ್ಟೆಗೆ ಸಾಕಷ್ಟಿದೆ, ಆದರೆ ಜೇಬುಗಳು ತುಂಬಿಲ್ಲ' ಎಂಬುದು ಪಶ್ಚಿಮ ಬಂಗಾಳದ ಆರ್ಥಿಕತೆಗೆ ಹಿಡಿದ ಒಂದು ಕನ್ನಡಿ. ಹಳ್ಳಿಗಳಲ್ಲಿ ವಸತಿ - ವಿದ್ಯಾಭ್ಯಾಸ - ವೈದ್ಯಕೀಯ ಸೌಕರ್ಯಗಳು ಬಸು ಅವರು ಆಶಿಸಿದ ಮಟ್ಟದಲ್ಲಿ ಬೆಳೆಯಲಿಲ್ಲ. ಆ ಕೊರಗನ್ನು ನಿವಾರಿಸುವ ಜವಾಬ್ದಾರಿಯು ಪಶ್ಚಿಮ ಬಂಗಾಳದ ಸರ್ಕಾರದ್ದು. ಜ್ಯೋತಿ ಬಸು ಅವರಿಗೆ ನೀಡಬೇಕಾದ ಕನಿಷ್ಠಮಟ್ಟದ ಗೌರವ ಅದು.

ಭಾರತದಲ್ಲಿ ಕೇಂದ್ರ ಸರ್ಕಾರವು ಎಲ್ಲವನ್ನೂ ನಿಯಂತ್ರಿಸುತ್ತದೆ, ಎಲ್ಲ ಆದಾಯವನ್ನೂ ತನ್ನದಾಗಿಸಿಕೊಳ್ಳುತ್ತದೆ. ಆದರೆ ಅದರ ವಿತರಣೆಯಲ್ಲಿ ಅಸಮಾನತೆಯು ತಲೆಹಾಕುವಂತೆ ಮಾಡುವ ಪ್ರಕ್ರಿಯೆ ಅನೂಚಾನವಾಗಿ ನಡೆದು ಬಂದಿದೆ. ನಮ್ಮ ದೇಶದ ಸಂವಿಧಾನದಂತೆ ನಮ್ಮದು ''ಸಮಾನೋದ್ದೇಶದಿಂದ ಒಂದುಗೂಡಿದ ಸಂಯುಕ್ತ ರಾಷ್ಟ್ರ''. ಅದನ್ನೇ ''ಫೆಡರಲ್ ಸ್ಟೇಟ್'' ಎನ್ನುತ್ತಾರೆ. ಉದ್ದೇಶಿತ ತತ್ತ್ವವು ಇದಾದರೂ ಅದರ ಉಲ್ಲಂಘನೆಯು ವ್ಯಾಪಕವಾಗಿದೆ. ಅನೇಕ ವಿಷಮ ಪರಿಸ್ಥಿತಿಗಳಿಗೆ ಅದೂ ಒಂದು ಕಾರಣ. ಜ್ಯೋತಿ ಬಸು ತಮ್ಮ ರಾಜಕೀಯ ಜೀವನದಲ್ಲಿ ಇದಕ್ಕೆ ಒತ್ತುಕೊಡುತ್ತಿದ್ದುದಕ್ಕೆ ದೇಶದ ಐಕ್ಯತೆಯ ಪರಮ ಕಾಳಜಿಯೇ ಕಾರಣ. ಅಂತೆಯೇ ಹೀನ ಮತೀಯ ರಾಜಕಾರಣವನ್ನು ಅವರು ಸರ್ವಥಾ ಅಪಥ್ಯವೆಂದು ಅದರ ವಿರುದ್ಧ ಎಡೆಬಿಡದೆ ಹೋರಾಡಿದರು. ಈ ರಾಜಕೀಯ ಮೌಲ್ಯಗಳು ಅವರನ್ನು ಬೇರೆಯವರಿಂದ ಭಿನ್ನೈಸಿತು, ಎತ್ತರದ ವ್ಯಕ್ತಿತ್ವವನ್ನು ಅವರಿಗೆ ತಂದುಕೊಟ್ಟಿತು. ಬಸು ಅವರ ನಿಧನದ ಸಂದರ್ಭದಲ್ಲಿ ಅವರನ್ನು ಶ್ಲಾಘಿಸುವ ಹೇಳಿಕೆಗಳನ್ನು ನೀಡಿದವರೆಲ್ಲಾ ಈ ಬಗ್ಗೆ ಆಲೋಚನೆ ಮಾಡುವುದು ಆರೋಗ್ಯಕರ, ಅವಶ್ಯಕ.

ಬಸು ಅವರು ಕಟ್ಟಾ ಸಿದ್ಧಾಂತಿಯಲ್ಲ. ಮಾರ್ಕ್ಸ್‌ವಾದಕ್ಕೆ ಪುಟಗಟ್ಟಲೆ ವ್ಯಾಖ್ಯಾನಗಳನ್ನು ಅವರು ಬರೆಯಲಿಲ್ಲ. ಆದರೆ ಮಾರ್ಕ್ಸ್‌ವಾದದ ಅಡಿಗೋಲಾದ ಜನರ ಪ್ರಜ್ಞೆಯನ್ನು ರೂಪಿಸುವ ಕರ್ತವ್ಯದಿಂದ ಅವರೆಂದೂ ವಿಮುಖರಾಗಿರಲಿಲ್ಲ. ಕೇವಲ ಅಧ್ಯಯನದಲ್ಲೇ ಮುಳುಗಿಹೋಗುವುದು ''ಮಾರ್ಕ್ಸಿಸಂ'' ಆಗುವ ಬದಲು ಅದು ''ಫಾರ್ಕ್ಸಿಸಂ'' ಆಗಿಹೋಗುತ್ತದೆಂದು ಅವರು ತಮಾಷೆ ಮಾಡುತ್ತಿದ್ದರಂತೆ. ಎಷ್ಟೇ ದೊಡ್ಡಣ್ಣನ ಛಾಯೆ ಇದ್ದಾಗ್ಯೂ ಪಶ್ಚಿಮ ಬಂಗಾಳದಲ್ಲಿ ಸುಮಾರು ಮೂರು ದಶಕಗಳ ಕಾಲ ''ಎಡ ಸಂಯುಕ್ತ ರಂಗ ಸರ್ಕಾರ''ವನ್ನು ನಡೆಸಲು ಸಾಧ್ಯವಾದದ್ದು ಅವರ ದೂರದೃಷ್ಟಿ ನಾಯಕತ್ವದ ಪ್ರತೀಕ. ಅಂತರರಾಷ್ಟ್ರೀಯವಾಗಿ ಅವರು ಕಮ್ಯುನಿಸ್ಟ್ ಚಳುವಳಿಯ ಮುಂಚೂಣಿಯಲ್ಲಿದ್ದರು. ಕ್ಯೂಬಾಕ್ಕೆ ಹೋಗಿದ್ದಾಗ ಅವರನ್ನು ವಿಮಾನ ನಿಲ್ದಾಣಕ್ಕೆ ಕೊಂಡೊಯ್ದು ವಿದಾಯ ಹೇಳಲು ಸ್ವತಃ ಫಿಡೆಲ್ ಕ್ಯಾಸ್ಟ್ರೋ ಆಗಮಿಸಿದ್ದರೆಂಬುದು ಸಾಮಾನ್ಯ ವಿಷಯವಲ್ಲ. ಚೀಣಾದ ಪ್ರಸ್ತುತ ಆರ್ಥಿಕ-ರಾಜಕೀಯ

ವಿದ್ಯಮಾನಗಳನ್ನು ಕುರಿತಂತೆ ಜ್ಯೋತಿ ಬಸು ಅವರ ಒಲವು-ನಿಲುವುಗಳೇನಾಗಿತ್ತೆಂಬುದು ಕುತೂಹಲದ ಸಂಗತಿಯಾಗುತ್ತದೆ. ವಿಯೆಟ್ನಾಂಗೆ ಸೋವಿಯೆತ್ ದೇಶದ ಸರ್ಕಾರವು ಸಾಕಷ್ಟು ಸಮಗ್ರವಾದ ಸಹಾಯ ನೀಡುತ್ತಿಲ್ಲವೆಂದು ೧೯೭೦ರ ದಶಕದಾದಿಯಲ್ಲಿ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷವು ಪೊಳ್ಳಾಗಿ ಮತ್ತು ಬಹಿರಂಗವಾಗಿ ಆಪಾದಿಸುತ್ತಿದ್ದುದುಂಟು. ಅಂತಹ ಸಂದರ್ಭದಲ್ಲೂ ಸೋವಿಯೆತ್ ಒಕ್ಕೂಟದ ಸಮರ್ಥನೆ ಮಾಡಿ, ಪಕ್ಷದ ಆಂತರಿಕ ವ್ಯವಹಾರಗಳಲ್ಲಿ ಜ್ಯೋತಿಯನ್ನು ಬೆಳಗಿದ ಕೀರ್ತಿ ಜ್ಯೋತಿ ಬಸು ಅವರದು. ರಣದಿವೆ, ಬಸವಪುನ್ನಯ್ಯ, ಮುಂತಾದವರಂತೆ ಭಾರತ ಕಮ್ಯುನಿಸ್ಟ್ ಪಕ್ಷವನ್ನು ''ಪರಿಷ್ಕರಣವಾದಿ ಪಕ್ಷ''ವೆಂದು ಜ್ಯೋತಿ ಬಸು ಸಹ ಟೀಕಿಸುತ್ತಿದ್ದುದುಂಟು. ಆದರೆ ಫ್ಯಾಸಿಸ್ಟ್ ದಬ್ಬಾಳಿಕೆಗೆ ಅವಕಾಶ ನೀಡದಿರಬೇಕಾದರೆ ಯಾವ ಎಡಪಕ್ಷವನ್ನೂ ದೂರಕ್ಕೆ ಸರಿಸುವುದು ಯುಕ್ತವಲ್ಲವೆಂಬ ತಿಳುವಳಿಕೆ ಅವರದು. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ಮೊದಲಿನ ವಿರಸವನ್ನು ದೊಡ್ಡದು ಮಾಡದೆ, ರಾಷ್ಟ್ರಮಟ್ಟದಲ್ಲಿ ಕೆಲವು ನಿರ್ದಿಷ್ಟ ವಿಷಯಗಳಿಗೆ ಸಂಬಂಧಿಸಿದಂತೆ ಕಾಂಗ್ರೆಸ್ಸನ್ನು ಕೂಡ ಕೂಡಿಕೊಳ್ಳಲು ಅವರು ಹಿಂದೇಟು ಹಾಕಲಿಲ್ಲ. ಎಡ ಸಂಯುಕ್ತರಂಗವನ್ನು ಸುಭದ್ರಗೊಳಿಸುವುದು, ವಿಸ್ತರಿಸುವುದು ಆ ದೃಷ್ಟಿಯಿಂದ ಇಂದಿನ ಕಾರ್ಯಕ್ರಮವಾಗಬೇಕಾಗಿದೆ. ಆಂತರಿಕ ಭಿನ್ನತೆಗಳನ್ನು ಸೈದ್ಧಾಂತಿಕ ಅನಿವಾರ್ಯತೆಯೆಂಬಂತೆ ತೋರಿಸಿಕೊಳ್ಳುವುದನ್ನು ಎಡಪಕ್ಷಗಳು ಇನ್ನಾದರೂ ಸಾಕುಮಾಡಬೇಕು. ಜ್ಯೋತಿ ಬಸು ಅವರ ಹೆಗ್ಗಳಿಕೆಗಳನ್ನು ಗುರುತಿಸುವುದಷ್ಟೇ ಪ್ರಜಾಪ್ರಭುತ್ವವಾದಿಗಳ ಕೆಲಸವಲ್ಲ. ಅವರ ಮೂಲಭೂತ ಜನಪರ ಕಾಳಜಿಗಳು ಸಿದ್ಧಿಸಬೇಕಾದರೆ ಬದಲಾದ ಸನ್ನಿವೇಶದಲ್ಲಿ ಯಾವ ಐಕ್ಯ ಕಾರ್ಯಕ್ರಮ ರೂಪಿಸಬೇಕೆಂಬ ತಿಳುವಳಿಕೆ ಪಡೆಯದಿದ್ದರೆ ಮಾರ್ಕ್ಸ್‌ವಾದವೆಂಬ ವಿಶ್ಲೇಷಣಾ ಸಾಧನವು ನಿಷ್ಪ್ರಯೋಜಕವಾಗಿಬಿಡುತ್ತದೆ. ಜ್ಯೋತಿ ಬಸು ಅವರೊಂದಿಗೆ ಕಮ್ಯುನಿಸ್ಟ್ ಚಳುವಳಿ ಅಸ್ತಮಿಸಬಾರದಲ್ಲವೆ ? ಅದು ಎಲ್ಲರ ಜವಾಬ್ದಾರಿ.

ಪಶ್ಚಿಮ ಬಂಗಾಳದಲ್ಲಿಂದು ಮಮತಾ ಬಿರುಗಾಳಿ ಬೀಸುತ್ತಿದೆ. ಅಧಿಕಾರ ದಕ್ಕಿಸಿಕೊಳ್ಳಲು ಆಕೆಗೆ ಯಾವ ಹಾದಿಯೂ ತ್ಯಾಜ್ಯವಲ್ಲ. ರಾಜಕೀಯ ಮೌಲ್ಯವೆಂಬುದು ಆಕೆಯ ಅನಾದರಕ್ಕೆ ಪಾತ್ರವಾಗಿರುವ ವಿಷಯವೆಂಬುದಕ್ಕೆ ಈಗ ಪುರಾವೆಯ ಅವಶ್ಯಕತೆ ಉಳಿದಿಲ್ಲ. ಮಾವೋವಾದಿಗಳೆನ್ನಲಾದವರ ಬೆಂಬಲ ಪಡೆದ ಈಕೆ ಈಗ ಮಾವೋವಾದಿಗಳನ್ನು ಬೆಳೆಸಿದ್ದು ಪಶ್ಚಿಮ ಬಂಗಾಳದ ಎಡರಂಗವೆಂದು ತುತ್ತೂರಿ ಊದುತ್ತಿದ್ದಾರೆ. ಅರಾಜಕತೆಯಿಂದ ಅಭದ್ರತೆಯ ಬೆಳೆ ಅನಿವಾರ್ಯವೆಂದು ಆಕೆಗಿನ್ನೂ ಮನದಟ್ಟಾಗಿಲ್ಲ. ಅಭಿವೃದ್ಧಿ ಮೀಮಾಂಸೆಯನ್ನು ಪಶ್ಚಿಮ ಬಂಗಾಳದ ಸಂದರ್ಭದಲ್ಲಿ ಸರಿಯಾಗಿ ವ್ಯಾಖ್ಯಾನಿಸಿಕೊಳ್ಳಬೇಕಾದ ಪರ್ವಕಾಲ ಇದು. ಜ್ಯೋತಿ ಬಸು ಅವರ ಸರ್ಕಾರ ಬೇರೆ ಸರ್ಕಾರಗಳಿಗಿಂತಲೂ ಭಿನ್ನವೆಂಬ ಲಾಂಛನ ಧರಿಸಿದ್ದು ಹೇಗೆ ? ಜನಪರ ನೀತಿಗಳು, ಪ್ರಜಾಪ್ರಭುತ್ವವಾದಿ ಕ್ರಮಗಳು, ಪಂಚಾಯಿತಿ ವ್ಯವಸ್ಥೆ, ಮತೀಯ ರಾಜಕಾರಣವು ಸೊಲ್ಲೆತ್ತದಂತೆ ಮಾಡುವುದು, ರೈತ-ಕಾರ್ಮಿಕರ ಹಿತರಕ್ಷಣೆ, ಜನಸಂಸ್ಕೃತಿಯನ್ನು ಆದರಿಸುವುದು, ಇತ್ಯಾದಿ ಕಾರ್ಯಕ್ರಮಗಳ ಮೂಲಕ. ಇವನ್ನು ಕೈಬಿಡದೆ ಮುಂದುವರಿಸುವುದು ಜ್ಯೋತಿ ಬಸು ಅವರ ಪರಂಪರೆಗೆ ಯೋಗ್ಯ ಸ್ಮಾರಕವಾಗುತ್ತದೆ. ಅವರ ನಾಯಕತ್ವದ ಕಾಲದಲ್ಲಿ ಇರದಿದ್ದ ವಿರೋಧಿ ಸಂಘಟನೆ ಈಗ ಪ್ರಬಲವಾಗುತ್ತಿದೆ. ಆದ್ದರಿಂದ ಸವಾಲು ಕಠಿಣವಾಗಿದೆ. ಇಂದು ಪಶ್ಚಿಮ ಬಂಗಾಳದ ಆದಿವಾಸಿಗಳು ಸರ್ಕಾರದ ವಿರುದ್ಧ ರೊಚ್ಚಿಗೆದ್ದಿರುವಂತೆ ತೋರುತ್ತಿದೆ. ಮೂರು ದಶಕಗಳ ಎಡ ಸರ್ಕಾರದ ಫಲಶ್ರುತಿ ಹೀಗಾಗಬಾರದಿತ್ತು. ಸ್ವಾತಂತ್ರ್ಯ ಸಂಗ್ರಾಮ, ರೈತ ಹೋರಾಟ, ಎಲ್ಲದರಲ್ಲೂ ಅಗ್ರಸ್ಥಾನದಲ್ಲಿದ್ದ ಆದಿವಾಸಿಗಳು ಇಂದೇಕೆ ಭ್ರಮನಿರಸನ ಅನುಭವಿಸುತ್ತಿರುವಂತೆ ಕಾಣುತ್ತಿದೆ? ಮಾವೋವಾದಿಗಳು ಜನರ ಮನಸ್ಸನ್ನು ಆಕ್ರಮಿಸುವಂತಹ ಪರಿಸ್ಥಿತಿ ಏಕೆ ನಿರ್ಮಾಣವಾಯಿತು ? ಎಲ್ಲ ಹಳ್ಳಿಗಳಲ್ಲೂ ಪ್ರಾಥಮಿಕ ಶಾಲೆಗಳು ಏಕಿಲ್ಲ? ಮಾನವ ಅಭಿವೃದ್ಧಿ ಸೂಚ್ಯಂಕದ ಪಟ್ಟಿಯಲ್ಲಿ ಪಶ್ಚಿಮ ಬಂಗಾಳ ಏಕೆ ಸೊರಗಿದೆ? ಬೇರೆ ರಾಜ್ಯಗಳಲ್ಲಿದ್ದಂತೆ ಪಶ್ಚಿಮ ಬಂಗಾಳದಲ್ಲೂ ಅಸಮಾನ ಅಭಿವೃದ್ಧಿಗೆ ಮಾನ್ಯತೆ ದೊರಕಿದ್ದಾದರೂ ಹೇಗೆ? ಕೇಂದ್ರ ಸರ್ಕಾರವನ್ನೋ ಬಂಡವಾಳಶಾಹಿಯನ್ನೋ ದೂಷಿಸಿದರೆ ಕೆಲಸ ಮುಗಿಯಿತೆ? ಸಂಯುಕ್ತ ರಂಗದ ಎಲ್ಲ ಪಕ್ಷಗಳಿಗೂ ಸಮಾನ ಆದರ ಇರದಿದ್ದರೆ ನಾಳೆ ಅದು ಉಳಿಯುವುದು ಹೇಗೆ ? – ಇಂತಹ ಪ್ರಶ್ನೆಗಳನ್ನು ಹಾಕಿಕೊಂಡು, ಸೂಕ್ತ ಮಾರ್ಕ್ಸ್‌ವಾದಿ ಉತ್ತರಗಳನ್ನು ಪಡೆದು, ಅದಕ್ಕೆ ತಕ್ಕಂತೆ ನೀತಿಗಳನ್ನು ಕಾರ್ಯಗತಗೊಳಿಸುವುದು ಜ್ಯೋತಿ ಬಸು ಅವರ ಸಂಸ್ಮರಣೆಗೆ ಉದಾತ್ತ ಸ್ವರೂಪವನ್ನು ನೀಡಿದಂತಾಗುತ್ತದೆ.

ಮತ್ತೊಮ್ಮೆ 'ಹೊಸತು' ಜ್ಯೋತಿ ಬಸು ಅವರಿಗೆ ತಲೆಬಾಗುತ್ತದೆ.

## 'ಅಮರ ಸಿಂಗ್' ರಾಜಕೀಯ

**ಹ**ಣವನ್ನು ಹೇಗೆ ಕೂಡಿಹಾಕಿಕೊಂಡರೂ ಸರಿ, ಅದನ್ನು ಯಾವ ರೀತಿಯಲ್ಲಿ ಬಂಡವಾಳ ಮಾಡಿಕೊಂಡರೂ ಸರಿ, ಎಂಬ ಇಂದಿನ ಕೆಲವರ ರಾಜಕೀಯ ನೀತಿಗೆ ಅಮರ ಸಿಂಗ್ ಘನವಾದ ಉದಾಹರಣೆ. ೧೯೮೦ರ ದಶಕದಲ್ಲಿ ಈತ ಗ್ವಾಲಿಯರ್‌ನ ಮಾಧವರಾವ್ ಸಿಂಧ್ಯನ ಬಲಗೈ ಭಂಟ. ನವೆಂಬರ್ ೧೯೯೩ರಲ್ಲಿ ಮಧ್ಯಪ್ರದೇಶ ಶಾಸನ ಸಭೆಗೆ ಚುನಾವಣೆ ನಡೆದು ದಿಗ್ವಿಜಯ ಸಿಂಗ್ ಮುಖ್ಯಮಂತ್ರಿಯಾದಾಗ ಮಾಧವರಾವ್ ಸಿಂಧ್ಯನಿಗೆ 'ಟಾಟಾ' ಹೇಳಿ ಸಿಂಗ್ ದೆಹಲಿಗೆ ತೆರಳಿ ಬಿರ್ಲಾ ಕಂಪನಿಗೆ ಸಲಹಾಗಾರನಾದ. ಆಗ್ಗೆ 'ಹಿಂದುಸ್ತಾನ್ ಟೈಂಸ್'ನ ಕಡಿವಾಣ ಬಿರ್ಲಾ ಕುಟುಂಬದ ಶೋಭನಾ ಭಾರ್ತಿಯ ಎಂಬುವರ ಕೈಲಿತ್ತು. ಶೋಭನಾ ಸಹ ಸಿಂಧ್ಯನ ಆಪ್ತವಲಯಕ್ಕೆ ಸೇರಿದ್ದವರೇ. ಸ್ವಾರಸ್ಯವೆಂದರೆ, ಆಗ್ಗೆ ಅಮರ್ ಸಿಂಗ್ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯನಾಗಿದ್ದುದು. ಮಧ್ಯಪ್ರದೇಶದಿಂದ ಈತ ಉತ್ತರಪ್ರದೇಶಕ್ಕೆ ಲಗ್ಗೆ ಇಟ್ಟಾಗಿತ್ತು. ಅಧಿಕಾರಸ್ಥಾನದಲ್ಲಿರುವವರ

ತಿಂಗಳ ಪತ್ರಿಕೆ
ಹೊಸತು
ವೈಜ್ಞಾನಿಕ, ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು
ಬಿಡಿ ಸಂಚಿಕೆ ರೂ. ೧೨/-
ವಾರ್ಷಿಕ ಚಂದಾ ರೂ. ೧೫೦/-
ಮೂರು ವರ್ಷಕ್ಕೆ ರೂ. ೩೫೦/-

ನವಕರ್ನಾಟಕ ಶಾಖೆಗಳು
೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಸಂಪರ್ಕ ಈತನಿಗೆ ಭಾರಿ ರಹದಾರಿ; ಸಮೂಹ ಮಾಧ್ಯಮಗಳವರಾದರೆ ಇನ್ನೂ ಹೆಚ್ಚು ಲಾಭ ! ಕೆಲವು ತಿಂಗಳುಗಳ ಬಳಿಕ ಈತ ದಿಢೀರನೆ ಸಮಾಜವಾದಿಯಾದ; ಏಕೆಂದರೆ ಮುಲಾಯಂ ಸಿಂಗ್ ಯಾದವ್ ಸಮಾಜವಾದಿ 'ನಾಯಕ'ನಾಗಿ ಮುಖ್ಯಮಂತ್ರಿಯಾಗಿದ್ದ. ಆ ಪಕ್ಷದ ಪ್ರಧಾನ ಕಾರ್ಯದರ್ಶಿ ರಘು ಠಾಕೂರ್ ನಿಷ್ಠಾವಂತ ಸಮಾಜವಾದಿ. ಆತ ರಜಪೂತ ಜಾತಿಯವರು. ಅದನ್ನು ಬಂಡವಾಳವಾಗಿಸಿಕೊಳ್ಳುವುದು ಮುಲಾಯಂ ಹುನ್ನಾರ. ಯಾದವ-ರಜಪೂತ ಸಂಮಿಶ್ರ ಸಾಮಾಜಿಕ ಸಂಘಟನೆಯು ಲಾಭದಾಯಕವೆಂದು ಮುಲಾಯಂಗೆ ತಿಳಿದಿತ್ತು. ಆದರೆ ರಘು ಠಾಕೂರ್ ಮುಲಾಯಂ ಜೊತೆ ಹೆಚ್ಚುಕಾಲ ಉಳಿಯಲಿಲ್ಲ; ಏಕೆಂದರೆ ಕೆಲವು ಉದ್ಯಮಿಗಳನ್ನು ಪೋಷಿಸುವುದು ಮುಲಾಯಂ 'ನೀತಿ' ಮತ್ತು ರಘು ಪ್ರಕಾರ ಅದು ಖಂಡನೀಯ ಅನೀತಿ. ಹೀಗೆ ಮುಲಾಯಂ ಕೃಪಾ ಪೋಷಿತ ಉದ್ಯಮಿಗಳಲ್ಲಿ ಸಂಜಯ ದಾಲ್ಮಿಯ ಒಬ್ಬ. 'ದಲ್ಲಾ ಸಿಮೆಂಟ್ಸ್' ಎಂಬ ಸಾರ್ವಜನಿಕ ಉದ್ಯಮವನ್ನು ಮುಲಾಯಂ ಈತನಿಗೆ ಹಸ್ತಾಂತರಿಸಿದ್ದ; ಏಕೆಂದರೆ, ಚುನಾವಣೆಯ ಸಂದರ್ಭದಲ್ಲಿ ಆತನಿಂದ ಮುಲಾಯಂ ಏನೇನೋ ಪಡೆದಿದ್ದುದು ಬಹಿರಂಗವಾಗಿತ್ತು. ಸಂಜಯ್‌ನ ಚಿಕ್ಕ ವಿಮಾನವನ್ನು ಮುಲಾಯಂ ೧೯೯೧ರಿಂದಲೂ ಬಳಸುತ್ತಿದ್ದುದುಂಟು. ಹೀಗಾಗಿ ರಘು ಠಾಕೂರ್ ಮುಲಾಯಂಗೆ ಅಪಥ್ಯವಾದ ಹೊರೆ ಎನಿಸಿದ್ದು ಸಹಜ. ಆದ್ದರಿಂದ ಅವರನ್ನು ಪಕ್ಷದಿಂದ ಹೊರಹಾಕಿ ಮುಲಾಯಂ ತೃಪ್ತಿ ಪಡೆದುಕೊಂಡರು. ಅವರ ಜಾಗಕ್ಕೆ ಸಂಜಯ್ ದಾಲ್ಮಿಯ ಬರಬಹುದೆಂಬ ಎಲ್ಲರ ಊಹೆಯನ್ನೂ ಸುಳ್ಳಾಗಿಸಿ ಅಮರ ಸಿಂಗ್ ಸಮಾಜವಾದಿ ಪಕ್ಷದ ಪ್ರಧಾನ ಕಾರ್ಯದರ್ಶಿಯಾದರು. ಈತ ಕಾಂಗ್ರೆಸ್‌ನಲ್ಲಿ ಉನ್ನತ ಹುದ್ದೆ ಹೊಂದಿದ್ದನೆಂಬುದು ಯಾರಿಗೂ ಕಸಿವಿಸಿ ಉಂಟು ಮಾಡಲಿಲ್ಲ. ಅದು ನಮ್ಮ ದೇಶದ ರಾಜಕೀಯದ ವಿಶಿಷ್ಟಮರ್ಮ ಮತ್ತು ಕಪ್ಪು ಚುಕ್ಕೆ.

ಅಮರ ಸಿಂಗ್ ಮಧ್ಯಮ ವರ್ಗದ ಕುಟುಂಬವೊಂದಕ್ಕೆ ಸೇರಿದ್ದ ವ್ಯಕ್ತಿ, ಮೂಲತಃ ಆಜ಼ಮ್‌ಗಢದವರು. ವ್ಯಾಸಂಗ ಕಲ್ಕತ್ತಾದಲ್ಲಿ, ಅದು ಹೆಸರಿಗೆ ಮಾತ್ರ, ಏಕೆಂದರೆ ಈತ ವ್ಯಾಸಂಗ ಮಾಡಿದ್ದು ಅಷ್ಟರಲ್ಲೇ ಇದೆ ! ಅಲ್ಲಿಂದ ಗೋರಖಪುರಕ್ಕೆ ತೆರಳಿ ಕಾಂಗ್ರೆಸ್ಸಿನ ವೀರ ಬಹಾದೂರ್ ಸಿಂಗ್ ಬಳಿ ರಾಜಕೀಯ ಪ್ರವೇಶ. ಆತ ಉತ್ತರಪ್ರದೇಶದ ಪಿಡಬ್ಲ್ಯುಡಿ ಮಂತ್ರಿಯಾಗಿದ್ದು ನಂತರ ೧೯೮೫ರಲ್ಲಿ ಮುಖ್ಯಮಂತ್ರಿಯಾದ ಧೀರ. ಸರ್ಕಾರಿ ಬೊಕ್ಕಸದಿಂದ ಚೆನ್ನಾಗಿ ಉಣ್ಣುವುದು ಮತ್ತು ಬೇರೆಯವರಿಗೆ ಉಣಬಡಿಸುವುದು ಆತನ ಮಹಾನ್ ಪ್ರತಿಭೆ. ಆತ ಮರಣ ಹೊಂದುವವರೆಗೆ ಅಮರ ಸಿಂಗ್ ಅವರಲ್ಲಿ ಕೈಂಕರ್ಯ ಸಲ್ಲಿಸುತ್ತಾ ಅತಿದೊಡ್ಡ ಶ್ರೀಮಂತನಾದ್ದು ಉತ್ತರಪ್ರದೇಶದ ಚಿಕ್ಕ ಬಾಲಕರಿಗೂ ಗೊತ್ತಿದೆ. ಹೆಚ್ಚು ಮಂದಿಗೆ ತಿಳಿಯದಿರುವ ವಿಷಯ ಬೇರೊಂದಿದೆ: ವೀರ ಬಹಾದೂರ್ ಸಿಂಗ್‌ರ ಮಗ ಸಂತ್ ಬಕ್ಸ್ ಸಿಂಗ್ ಅಷ್ಟೇನೂ ಶ್ರೀಮಂತನಾಗಲಿಲ್ಲ; ತಂದೆಯ ಚೂರುಪಾರು ಆಸ್ತಿಯಷ್ಟೇ ಆತನಿಗೆ ಸಿಕ್ಕಿದ್ದು. ಅದೇನು ಕಾಕತಾಳೀಯವೋ, ಅಂತೂ ವೀರ ಬಹಾದೂರ್ ಸಿಂಗ್ ಗತಿಸಿದ ತರುವಾಯದಲ್ಲಿ ಅಮರ ಸಿಂಗ್ ಆಗರ್ಭ ಶ್ರೀಮಂತನಂತೆ ವಿಜೃಂಭಿಸಿದ. ಇದೇ ವೇಳೆಗೆ ಈತ ದೆಹಲಿಗೆ ಹೋಗಿ ಬೇರುಬಿಡಲು ಆರಂಭಿಸಿದ ಕೂಡ. ಆಗಲೇ ಬಿರ್ಲಾ ಕುಟುಂಬದೊಡನೆ ಸಂಬಂಧ ಕುದುರಿದ್ದು. ಯಾವ ರೂಪದಲ್ಲಿ ಎಂಬುದು ಮುಖ್ಯ; 'ರಾಜಕೀಯ ಸಲಹೆಗಾರ' ಎಂಬ ಪಟ್ಟ ದೊರಕಿಸಿಕೊಳ್ಳುವ ಮೂಲಕ. ನಮ್ಮ ದೇಶದ ಬಹುತೇಕ ಬಂಡವಳಿಗರಿಗೆ, ಉದ್ಯಮಿಗಳಿಗೆ, ಷೇರು ಮಾರುಕಟ್ಟೆಯ ಹುಲಿಗಳಿಗೆ, ಅಂತಹ ಸಲಹೆಗಾರರಿರುತ್ತಾರೆಂಬುದು ಸಾಮಾನ್ಯ ಜ್ಞಾನ. ಬಿರ್ಲಾ ಕುಟುಂಬದೊಡನೆ ಸಂಪರ್ಕ ಫಲಪ್ರದವಾಯಿತು. ಎಷ್ಟರಮಟ್ಟಿಗೆಂದರೆ, ಮುಲಾಯಂ ಜೊತೆ ಸೇರುವ ವೇಳೆಗಾಗಲೆ ಅಮರ ಸಿಂಗ್ ಹಲವರಿಗೆ 'ಅಣ್ಣ', 'ತಮ್ಮ', 'ಬಂಧು' ಹೀಗೆ ಏನೇನೋ ಆಗಿಹೋಗಿದ್ದ. ಅಮಿತಾಭ ಬಚ್ಚನ್, ಜಯಾ ಬಚ್ಚನ್, ಜಯಪ್ರದಾ, ಇಂಥವರೆಲ್ಲಾ 'ಸಮಾಜವಾದಿ'ಗಳಾಗಿದ್ದು ಈತನ ಮಹತ್ವದ ಉಪದೇಶದಿಂದಲೇ ತಾನೆ !

ಅಮರ ಸಿಂಗ್‌ಗೆ ಇನ್ನೊಂದು 'ಲಕ್' ಹೊಡೆದದ್ದು ಅನಿಲ ಅಂಬಾನಿಯ ಸಂಪರ್ಕದಿಂದ. ಉತ್ತರ ಪ್ರದೇಶದಲ್ಲಿ ಆತ ಬಂಡವಾಳ ಹೂಡಲು ಅಮರ ಸಿಂಗ್‌ದೇ ಪ್ರೇರಣೆ. 'ಸಹಾರಾ' ಆಗ ಅಮರ ಸಿಂಗ್‌ಗೆ ಚಿನ್ನದ ಏಣಿಯಾಗಿ ಪರಿಣಮಿಸಿತು. ಅದು ಲಕ್ನೋವನ್ನು ತನ್ನ ಕೇಂದ್ರಸ್ಥಾನವನ್ನಾಗಿ ಮಾಡಿಕೊಂಡಿದ್ದು ಕೆಲವರಿಗೆ ಆಶ್ಚರ್ಯ. ಸಹಾರಾದ ಸುಬ್ರತೋ ರಾಯ್ ಲಕ್ನೋ ಹೊರವಲಯದಲ್ಲಿ ದೊಡ್ಡ ಅರಮನೆ ಕಟ್ಟಿಕೊಂಡಾಗ ಜನ ಕಣ್ಣುಬಿಟ್ಟು ತತ್ತರಿಸಿಹೋದರು. ಮುಲಾಯಂ ಜೊತೆ ಸ್ನೇಹವೆಂದರೇನು ಸಾಮಾನ್ಯವೇ ಎಂಬುದು ಆಗ ತಿಳಿಯಿತು. ಇದರಲ್ಲಿ ಇನ್ನೂ ಎಷ್ಟೋ ನಿಗೂಢ ಸಂಗತಿಗಳಿವೆ ಎನ್ನುತ್ತಾರೆ. ಉದಾಹರಣೆಗೆ, ಸಹಾರಾದ ಶ್ರೀಮಂತಿಕೆಗೆ ಮೂಲವೆಲ್ಲಿಯದು ? ಕರಾಚಿಯಲ್ಲಿ ವಾಸವಾಗಿರುವ ಒಬ್ಬ ಭೂಗತ ದೊರೆ ಸಹ ಇದರಲ್ಲಿ ಬೇಕಾದಷ್ಟು ಹಣ ತೊಡಗಿಸಿದ್ದಾನೆ ಎಂಬ ಮಾತು ಆಗಾಗ ಕೇಳಿಬರುತ್ತದೆ. ಆತನದು ದುಬೈನಲ್ಲಿ ಕೂಡ ಹೇರಳವಾದ ವ್ಯವಹಾರ, ಬಂಡವಾಳ ಹೂಡಿಕೆ ಇದೆಯಂತೆ. ಶಾರ್ಜಾದಲ್ಲಿ ನಡೆಯುತ್ತಿದ್ದ ಕ್ರಿಕೆಟ್ ಆಟದ ಪ್ರೇಕ್ಷಕರಲ್ಲಿ ಅವನು ಸದಾ ಸೇರಿಕೊಂಡಿರುತ್ತಿದ್ದನೆಂಬ ಪ್ರತೀತಿ ಇದೆ. ಅಂತೆಯೇ, ಕೆಲವು ಚಲನಚಿತ್ರ ತಾರಾಮಣಿಗಳು ನಮ್ಮ ದೇಶದಿಂದ ಲಂಡನ್ ಮೂಲಕ ದುಬೈಗೆ ಹೋಗಿ ಅಲ್ಲಿ ಭೂಗತ ದೊರೆಯೆದುರು ಕುಣಿದುಬರುತ್ತಿದ್ದರೆಂಬ ಊಹೆಯೂ ಇದೆ. ಸಂಜಯ ದತ್‌ನ ನೆಂಟಸ್ತನವೂ ಹೀಗೇ ಕೂಡಿಬಂದಿರಬೇಕೆಂದು ಹೇಳಲಾಗುತ್ತದೆ. ಎಲ್ಲರೂ ಗಮನಿಸದಿರದ ಒಂದು ವಿಶೇಷವೇನು ಗೊತ್ತೆ? ತಾನು ಇನ್ನು ಮುಂದೆ ಸಮಾಜವಾದಿ ಪಕ್ಷದ ಜವಾಬ್ದಾರಿಯ ಹೊರೆಯನ್ನು ಹೊರಲಾರೆನೆಂದು ಅಮರ ಸಿಂಗ್ ಹೇಳಿಕೆ ನೀಡಿದ್ದು ದುಬೈನಿಂದ. ಅದೂ ಒಂದು ಅಮೋಘ ಕಾಕತಾಳೀಯವೇ ಇರಬೇಕು !

ಇನ್ನು ಮುಂದಿನ ಹಾದಿ ಏನು ? ಅಮರ ಸಿಂಗ್‌ಗೆ ಹಾದಿಗಳು ಯಾವಾಗಲೂ ಬೇಕಾದಷ್ಟಿರುತ್ತವೆ : ತನ್ನ ಹಳೆಯ ಮನೆ ಕಾಂಗ್ರೆಸ್‌ಗೆ ಹೋಗಿ ಅಂಬಾನಿ ಸೋದರರ 'ಜಗಳ' ಪರಿಹರಿಸಬಹುದು. ''ಕುಟುಂಬದೊಳಗಿನ ಕಲಹ ದೇಶದ ಹಿತಕ್ಕೆ ಒಳ್ಳೆಯದಲ್ಲ''ವೆಂದು ಮನಮೋಹನ ಸಿಂಗ್‌ರೇ ಹೇಳಿದ್ದರಲ್ಲ. ಜಗಳ ಅಂತ್ಯವಾದರೆ ಕಾಂಗ್ರೆಸ್‌ಗೂ ಲಾಭ. ನಾಳೆ ಉತ್ತರ ಪ್ರದೇಶದಲ್ಲಿ ಮಾಯಾವತಿಯವರ ಕಾಲು ಕೆಳಗಿನ ಚಾಪೆ ಎಳೆದು ಆಕೆಯನ್ನು ಬೀಳಿಸಬಹುದು. ''ದೇಶಕ್ಕೋಸ್ಕರವೇ ನಾನು ಸಮಾಜವಾದಿ ಪಕ್ಷ ಬಿಟ್ಟೆ''ನೆಂದು ಅಮರ ಸಿಂಗ್ ಹೂಂಕರಿಸಬಹುದು. ಇಲ್ಲ, ಮಾಯಾವತಿಯವರ ಜೊತೆ ಸೇರಿ ತನ್ನ ಅಪಾರ ಹಣವನ್ನು ಖರ್ಚು ಮಾಡಿ ಒಂದಷ್ಟು ಪ್ರತಿಮೆಗಳನ್ನು ನಿಲ್ಲಿಸಬಹುದು. ಸರ್ಕಾರಿ ಹಣ ವ್ಯಯ ಮಾಡುತ್ತಾರೆ ಎಂಬ ಆಪಾದನೆಯು ಆಕೆಗೂ ಒತ್ತಡ ತಂದಿದೆ. ಕಾರ್ಪೊರೇಟ್ ಸಂಸ್ಥೆಗಳು ಅಮರ ಸಿಂಗ್ ಮೂಲಕ ಮಾಯಾವತಿಯವರ ''ಸಾಮಾಜಿಕ ಕಾರ್ಯಕ್ರಮ''ಗಳ ಒತ್ತಾಸೆಗೆ ನಿಲ್ಲುವ ಪ್ರಹಸನವನ್ನು ನಾವು ವೀಕ್ಷಿಸಬಹುದು. ಇನ್ನೊಂದು ಸಾಧ್ಯತೆ ಗುಜರಾತಿಗೆ ಹೋಗಿ ನೆಲೆಸಿ ಮೋದಿ ಪಕ್ಷ ಸೇರುವುದು. ಆಗ ಗುಜರಾತಿನ ಪ್ರಮೋದ ಮಹಾಜನ್ ಎಂಬ ಖ್ಯಾತಿ ಗಳಿಸಿ ಮೆರೆಯಬಹುದು. ಅದಕ್ಕೆ ಪೂರ್ವಭಾವಿಯಾಗಿ ಅಮಿತಾಭ ಬಚ್ಚನ್ ಈಗಾಗಲೆ ಗುಜರಾತಿನ ''ಸಾಧನೆ''ಗಳ ಜಾಹಿರಾತುಗಳಲ್ಲಿ ಕಾಣಿಸಿಕೊಂಡಿದ್ದಾನೆ. ತನ್ನ ಬಂಡವಾಳ ಹೂಡಲು ಅಮರ ಸಿಂಗ್‌ಗೆ ಗುಜರಾತ್ ಪ್ರಶಸ್ತವಾದ ರಾಜ್ಯ, ಅಲ್ಲವೆ ?

ಒಟ್ಟಿನಲ್ಲಿ ಹೇಳಬೇಕೆಂದರೆ, ಈತನ ರಾಜಕೀಯಕ್ಕೆ ಯಾವ ಅಡ್ಡಿಯೂ ಇಲ್ಲ, ಬದ್ಧತೆಯೂ ಇಲ್ಲ. ರಾಜಕೀಯದಲ್ಲಿರುವ ಕ್ರಿಮಿ-ಕೀಟಗಳ ಪೈಕಿ ಈತ ಅತ್ಯಂತ ಅಸಹ್ಯವಾದಂಥ ವ್ಯಕ್ತಿ. ನಮ್ಮ ದೇಶದ ರಾಜಕೀಯ ಅಧಃಪತನಕ್ಕೆ, ಅಪಖ್ಯಾತಿಗೆ, ಇಂಥವರ ''ಕಾಣಿಕೆ'' ಬಹಳ ಹೆಚ್ಚಿನದು. ಎಲ್ಲೆಯಿಲ್ಲದ ಸ್ವಾರ್ಥ, ಮೂಟೆಗಟ್ಟಲೆ ಹಣ ತುಂಬಿಕೊಳ್ಳುವ ಕ್ಷುದ್ರತನ, ಯಾವ ಮೌಲ್ಯದ ಲವಲೇಶವೂ ಇಲ್ಲದ ಜೀವನ, ದೇಶದ ವಿಪತ್ತುಗಳಿಗೆ ಕಾರಣರಾಗುವಂಥವರೊಡನೆ ನೀಚ ಸಂಬಂಧಗಳು, ಇವೆಲ್ಲವನ್ನೂ ಮೂರ್ತಿಭವಿಸಿಕೊಂಡಿರುವ ರಾಜಕಾರಣಿಗಳಲ್ಲಿ ಅಮರ ಸಿಂಗ್ ಸಹ ಒಬ್ಬರು. ಆತ ಹೋದರೆ ಯಾವ ಪಕ್ಷಕ್ಕೂ ನಷ್ಟವಿಲ್ಲ. ಭಂಡತನದ ರಾಜಕೀಯವನ್ನು ಪ್ರತಿನಿಧಿಸುವವರ ಮುಂದಾಳು ಅಮರ ಸಿಂಗ್ ನಿವೃತ್ತಿ ಹೊಂದಿ ಸ್ವಂತದ ಆಜ಼ಮ್‌ಗಢಕ್ಕೆ ಹಿಂದಿರುಗಿದರೆ ರಾಜಕೀಯದಲ್ಲಿ ಒಂದು ಪಾಪಿ ಜೀವ ಕಡಿಮೆಯಾದಂತೆಯೇ ಸರಿ. ಹಾಗಾಗುತ್ತದೆ ಎಂದು ನಿರೀಕ್ಷಿಸಿದರೆ ನಿರಾಶೆಯೂ ಸಾಧ್ಯ !!

ಕ್ರೌರ್ಯ''ವನ್ನು ಹಿಮ್ಮೆಟ್ಟಿಸಲು ನಿರರ್ಥಕ ಹೋಮ ಮಾಡುವ ಜನರಿಗೇನೆನ್ನೋಣ! ಕಡೇ ಪಕ್ಷ ಅವರೆಲ್ಲರ ''ಡಿಗ್ರಿ''ಗಳನ್ನು ಹಿಂದಕ್ಕೆ ಪಡೆಯಲು ಸಂಬಂಧಿತ ವಿಶ್ವವಿದ್ಯಾನಿಲಯಗಳಿಗೆ ಹಕ್ಕನ್ನಾದರೂ ನೀಡಬೇಕು. ಕಾನೂನುತಜ್ಞರು ಅದನ್ನು ಸಂವಿಧಾನ-ಬಾಹಿರ ವಾದದ್ದೆಂದು ಅಸಿಂಧುಗೊಳಿಸಿಬಿಡುತ್ತಾರೋ ಏನೋ! ಅವರಿಗೂ ಡಿಗ್ರಿಗಳಿವೆಯಲ್ಲ!

* * *

ಗ್ರಹಣದ ಸಂಬಂಧದಲ್ಲಿ ಹೇಳಿದ್ದೋ ಅಥವಾ ಸುಳ್ಳು ಸುಳ್ಳೇ ಪ್ರಚಾರ ಮಾಡಲಾಗುವ ಶಬರಿಮಲೈ ಅಯ್ಯಪ್ಪನ ಕೃತ್ರಿಮದಿಂದ ಕಾಣಬರುವ ಮಕರಜ್ಯೋತಿಯ ಸಂದರ್ಭದಲ್ಲಿ ಹೇಳಿದ್ದೋ ತಿಳಿಯದು, ಆದರೆ ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದ ಕಾರ್ಯದರ್ಶಿ ಶ್ರೀ. ಪ್ರಕಾಶ್ ಕಾರಟ್ ಹೇಳಿದ್ದೆಂದು ತಿರುವನಂತಪುರದಿಂದ ಪ್ರಕಟವಾದ 'ಇಂಡಿಯನ್ ಎಕ್ಸ್‌ಪ್ರೆಸ್'ನ ಜನವರಿ ೧೫ರ ಸಂಚಿಕೆಯಲ್ಲಿ ಒಂದು ಸುದ್ದಿ ಪ್ರಕಟವಾಗಿತ್ತು. ಇಂಗ್ಲಿಷ್‌ನಲ್ಲಿ ಶೀರ್ಷಿಕೆ ಹೀಗಿತ್ತು: ''ಪಕ್ಷದ ನಾಯಕ-ಕಾರ್ಯಕರ್ತರು ಮತಧರ್ಮವನ್ನು ವರ್ಜಿಸಬೇಕೆಂದು ಪ್ರಕಾಶ್ ಕಾರಟ್ ನಿರ್ದೇಶನ ನೀಡಿದ್ದಾರೆ.'' ಈ ವರದಿಯ ಸತ್ಯಾಸತ್ಯತೆಯನ್ನರಿಯಲು ನಮಗೆ ಮಾರ್ಗವಿಲ್ಲ. ಅವರು ಹೇಳಿದ್ದು ನಿಜವಾದರೆ, ಆ ಹೇಳಿಕೆಯ ಅರ್ಥವೇನು? ನಾಯಕರಲ್ಲದವರಿಗೆ ಮಾರ್ಕ್ಸ್‌ವಾದದ ಸಿದ್ಧಾಂತ ಒಂದು, ನಾಯಕರಾದವರಿಗೆ ಬೇರೆ, ಎಂದೆ? ಮತಧರ್ಮದ ಸಾರವು ಕೆಲವರಿಗೆ ಪಕ್ವ ಮತ್ತು ಬೇರೆ ಕೆಲವರಿಗೆ ಅಪಕ್ವ ಎಂದೆ? ಏನೇ ಇರಲಿ, ಯಾವುದೇ ಪಕ್ಷದ ಸದಸ್ಯರಿಗೆ ಮತ್ತು ಬೆಂಬಲಿಗರಿಗೆ ಸಿದ್ಧಾಂತವು ಒಂದೇ ಆಗಿರುತ್ತದಲ್ಲವೆ? ಆ ಸಿದ್ಧಾಂತವನ್ನು ನಿಜಜೀವನದಲ್ಲಿ ಅಳವಡಿಸಿಕೊಳ್ಳಲು ಹೆಣಗಾಡುವುದು ಪ್ರತಿಯೊಬ್ಬ ವ್ಯಕ್ತಿಯ ಬೆಳವಣಿಗೆಯ ಸೂಚನೆಯಲ್ಲವೆ?

ಮೂಲತಃ ಪಕ್ಷದ ಕಾರ್ಯದರ್ಶಿಗಳು ಮತಧರ್ಮದ ಬಗೆಗಿನ ಪ್ರಜ್ಞೆಯ ಬಗ್ಗೆ ನಿರ್ದೇಶನ ನೀಡಬಾರದು, ತಿಳುವಳಿಕೆ ನೀಡಬೇಕು. ಪ್ರಜ್ಞೆ ಹೇಗೇ ಇರಲಿ, ಪಕ್ಷದ ಕಾರ್ಯಕರ್ತರು ಇಂತಿಂತಹ ನಿಲುವು ತಾಳಬೇಕೆಂದು ಹೇಳುವುದು ಪ್ರಾಯೋಗಿಕವಲ್ಲ; ಬದಲಾಗಿ, ಮಾರ್ಕ್ಸ್‌ವಾದಿ ವಿಶ್ಲೇಷಣೆಯಲ್ಲಿ ಮತಧರ್ಮದ ಲಕ್ಷಣ ಇಂಥದು ಎಂದು ವಿವರಿಸುವುದು ಆರೋಗ್ಯಕರ. ಬೇರೆಯವರು ಬೇಕಾದರೆ ಮೂಢನಂಬಿಕೆಗಳನ್ನು ಆತುಕೊಳ್ಳಲಿ, ಆ ಜಾಡ್ಯ ನಮಗಂಟದಿದ್ದರೆ ಸಾಕು, ಎಂದು ಹೇಳಲಾಗುವುದಿಲ್ಲ. ಬದಲಾಗಿ, ಬಹುಶಃ ಹೀಗೆ ಹೇಳಬಹುದು: ದಿನನಿತ್ಯದ ಕಷ್ಟ-ಕಾರ್ಪಣ್ಯಗಳು, ಜಂಜಾಟಗಳು, ಇವೆಲ್ಲಾ ಸಹನೀಯ ಹಂತವನ್ನು ದಾಟಿದಾಗ ಪ್ರಕ್ಷುಬ್ಧ ಮನಸ್ಸು ಅಂತಹ ಆತಂಕಗಳಿರದ ಸ್ಫುಟವಾದ ರಮ್ಯತೆಯೊಂದನ್ನು ಕಲ್ಪಿಸಿಕೊಳ್ಳುತ್ತದೆ. ಅದು ಪರಿಹಾರವಲ್ಲ, ಆದರೆ ಸದ್ಯದ ಪರಿಹಾರವೆಂಬಂತೆ ತೋರುತ್ತದೆ. ಕಾಲ್ಪನಿಕ ಸುಖವು ಬಹುಕಾಲ ಉಳಿಯುವುದಿಲ್ಲ, ಮತ್ತೆ ನಾವು ಯಥಾಸ್ಥಿತಿಗೆ ಮರಳುತ್ತೇವೆ. ಆದ್ದರಿಂದ ಸಮಸ್ಯೆಗಳಿಗೆ ಪರಿಹಾರವಿರುವುದು ಕಾರ್ಯ-ಕಾರಣಗಳ ತಿಳುವಳಿಕೆ ಪಡೆದು ಅದರಂತೆ ಕ್ರಿಯಾಶೀಲರಾಗುವುದರಲ್ಲಿ. ವಿಜ್ಞಾನವು ಪರಿಪೂರ್ಣವಲ್ಲದಿದ್ದರೂ ಆ ದಿಕ್ಕಿನಲ್ಲಿ ಮುನ್ನಡೆಸುತ್ತದೆ. ಆಕಾಶಕಾಯಗಳನ್ನು ನೋಡಿ, ಎಲ್ಲ ದೇಶಗಳವರೂ ಅವನ್ನು ಅವವನ್ನಾಗಿಯೇ ಗುರುತಿಸಿದ್ದಾರೆ. ಉದಾಹರಣೆಗೆ, ಧ್ರುವ ನಕ್ಷತ್ರವು ಎಲ್ಲರಿಗೂ ಧ್ರುವವೇ; ಸಪ್ತರ್ಷಿ ಮಂಡಲವು ಎಲ್ಲರಿಗೂ ಅದೇ. ಆದರೆ ನಮ್ಮ ಶಿವ ಇದ್ದಾನಲ್ಲ, ಅವನ ಸೀಮಿತತೆಯನ್ನು ನೋಡಿ. ಕೈಲಾಸದಾಚೆಗೆ ಅವನಿಗೆ ಅಸ್ತಿತ್ವವಿಲ್ಲ. ಮೆಕ್ಸಿಕೋ ಜನರಿಗೆ ಶಿವನಿಲ್ಲವಲ್ಲ! ಹೋಗಲಿ, ಅಯ್ಯಪ್ಪನ ಕುಬ್ಜತೆಯನ್ನು ನೋಡಿ; ರಾಜ ಮಹೇಂದ್ರಿಯ ಉತ್ತರಕ್ಕೆ ಅವನಿಗೆ ಯಾವ ಗೌರವವೂ ಇಲ್ಲ. ಅಂಥವರನ್ನು ಕಟ್ಟಿಕೊಂಡು ಏನು ಮಾಡುತ್ತೀರಿ? ಶಿವ-ಅಯ್ಯಪ್ಪರ ಗತಿಗೆ ಸಮನಾದ್ದು ಜೀಸಸ್, ಮೋಸೆಸ್ ಮತ್ತು ಮಹಮ್ಮದರ ಗತಿ. ಮತಧರ್ಮಗಳ ದೇವರುಗಳೆಲ್ಲಾ ಕಲ್ಪಿತ ''ಶಕ್ತಿಗಳು''.

ಈ ತಿಳುವಳಿಕೆಯು ಯಾವುದೇ ಪಕ್ಷದ ನಾಯಕರಿಗೆ ಮಾತ್ರ ಶೋಭಿಸುವಂಥದಲ್ಲ. ಎಲ್ಲರೂ ಅದರತ್ತ ಕ್ರಮಿಸಬೇಕಾದವರೆ. ಬಹಳ ಹಿಂದೆ ಶ್ರೀ ಬಿ. ಟಿ. ರಣದಿವೆ ಎಂಬ ನಾಯಕರು ಕಲ್ಕತ್ತೆಗೆ ಹೋಗಿದ್ದಾಗ ಒಂದು ಪ್ರಸಂಗ ಜರುಗಿತು. ಪಶ್ಚಿಮ ಬಂಗಾಳದಲ್ಲಿ ಒಬ್ಬ ತಾರಕೇಶ್ವರ ಇದ್ದಾನೆ. ಕಲ್ಕತ್ತ ಮತ್ತು ರಾಮಕೃಷ್ಣ ಪರಮಹಂಸರ ಜನ್ಮಸ್ಥಳ ಕಾಮಾರ್‌ಪುಕುರ್ ನಡುವೆ ಇರುವ ಒಂದು ಊರಿನ ಶಿವ ಅವನು. ದೂರದೂರುಗಳಿಂದ ಸಹಸ್ರಾರು ಜನ ನೀರು ತಂದು ತಾರಕೇಶ್ವರನಿಗೆ ಸ್ನಾನ ಮಾಡಿಸುವುದು ರೂಢಿ. ಅವರು ದೊಡ್ಡ ಮೆರವಣಿಗೆಗಳಲ್ಲಿ ನೀರು ಹೊತ್ತು ತರುತ್ತಾರೆ. ಅಂಥದೊಂದು ಜನಜಂಗುಳಿಯನ್ನು ಸ್ನೇಹಿತರೊಬ್ಬರು ರಣದಿವೆಗೆ ತೋರಿಸಿ ಹೇಳಿದರು, ''ನೋಡಿ, ಇಲ್ಲಿದ್ದಾರೆ ನಿಮ್ಮ ಪಕ್ಷದ ಮತದಾರರು'' ಎಂದು. ತಮ್ಮನ್ನು ಈತ ಹಂಗಿಸುತ್ತಿದ್ದಾನೆಂದು ರಣದಿವೆ ಕ್ರುದ್ಧರಾದರು. ಸ್ನೇಹಿತರು ಹೇಳಿದರು, ''ನೋಡಿ, ವಿಷಯ ಅದಲ್ಲ; ಇವರೆಲ್ಲಾ ನಿಜಜೀವನದಲ್ಲಿ ಏನೇನೋ ಆಗಿರುತ್ತಾರೆ. ಪಕ್ಷದ ಕಾರ್ಯಕರ್ತರೂ ಆಗಿರಬಹುದು. ಆದರೆ ಹಿಂದಿನ ಮಂಕು ನಂಬಿಕೆ ಹೋಗಿಲ್ಲ. ಅವರೊಡನೆ ಬೆರೆತು ಹೋರಾಟ ನಡೆಸುತ್ತಲೇ ನಾವು ಅವರನ್ನು ಬೇರೆಯ ಪ್ರಜ್ಞೆಯತ್ತ ಕೊಂಡೊಯ್ಯಬೇಕಲ್ಲವೆ?'' ಎಂದು. ಅಥವಾ ಶ್ರೀ ಎ. ಕೆ. ಗೋಪಾಲನ್ ದೇವಸ್ಥಾನದ ಪ್ರವೇಶದ ಬಗ್ಗೆ ಹೋರಾಟ ನಡೆಸಿದ್ದುದನ್ನು ನೆನೆಸಿಕೊಳ್ಳೋಣ. ಅವರಿಗೆ ದೇವಸ್ಥಾನ ಅಷ್ಟೇನೂ ಮುಖ್ಯ ಸಂಗತಿಯಾಗಿರಲಿಲ್ಲ, ಆದರೆ ದೇವಸ್ಥಾನದೊಳಕ್ಕೆ ಎಲ್ಲರಿಗೂ ಪ್ರವೇಶಿಸುವ ಹಕ್ಕು ಇರಲೇಬೇಕೆಂಬ ಧೋರಣೆ ಅವರದು. ಆ ಹಕ್ಕಿಗಾಗಿ ಹೋರಾಡುತ್ತಲೇ ಮತಧರ್ಮದ ಆಯಾಮಗಳನ್ನು ಕುರಿತು ದುಡಿಯುವ ಜನರಿಗೆ ನೂತನ ಪ್ರಜ್ಞೆ ಮೂಡಿಸುವುದು ಅವರ ಪದ್ಧತಿಯಾಗಿತ್ತು. ಇಂದೂ ಅಷ್ಟೆ, ಮಾರ್ಕ್ಸ್‌ವಾದಿಗಳಿಗಿರಬಹುದಾದ ಪದ್ಧತಿ ಅದೇ. ''ನಾಯಕರು ಅದರಿಂದ ದೂರವಿರಿ'' ಎಂದು ''ನಿರ್ದೇಶಿಸುವುದು'' ಅನಗತ್ಯವಾದ ಹೊಂದಾಣಿಕೆ.

ಕೇರಳದ ಅಯ್ಯಪ್ಪನ ದರ್ಶನಕ್ಕೆ ಬರುವವರಿಂದಾಗಿ ರಾಜ್ಯಕ್ಕೆ ಈ ವರ್ಷ ೧೧೬ ಕೋಟಿ ರೂಪಾಯಿಗಳ ವ್ಯವಹಾರ ಕೂಡಿಬಂದಿದೆಯೆಂದು ಕೇರಳ ಸರ್ಕಾರವು ಅಧಿಕೃತವಾಗಿ ಪ್ರಕಟಿಸಿದೆ. ಅಂದರೇನರ್ಥ? ಅದನ್ನು ಹೆಚ್ಚಿಸಿಕೊಳ್ಳಲು ವರ್ಷಕ್ಕೆ ಒಂದು ಬಾರಿಯ ಬದಲು ಎರಡು ಬಾರಿ ಮಕರಜ್ಯೋತಿಯನ್ನು ತೋರಿಸಬಹುದೆ? ಸರ್ಕಾರದ ಗಮನಕ್ಕೆ ಬಾರದೆ ನಾಲ್ಕೈದು ಮೂಟೆ ಕರ್ಪೂರವನ್ನು ಅಯ್ಯಪ್ಪನ ಶಬರಿಮಲೈಗೆ ಯಾರೂ ತೆಗೆದುಕೊಂಡು ಹೋಗಲಾಗುವುದಿಲ್ಲ. ಅಥವಾ, ಹೋಗುವಂತಿರಬಾರದು. ಕಾಡಿನಲ್ಲಿ ಬೆಂಕಿ ಏಕೆ ಹೊತ್ತಿಸಬೇಕು? ಅಯ್ಯಪ್ಪನ ದರ್ಶನ ಪಡೆದು ಕೃತಾರ್ಥರಾಗಿ, ಅಡ್ಡಿಯಿಲ್ಲ; ಆದರೆ ಮೋಸದ ಜ್ಯೋತಿ ಕೂಡದು ಎಂದು ಕೇರಳ ಸರ್ಕಾರ ಕಟ್ಟುನಿಟ್ಟಾಗಿ ಅದನ್ನು ತಡೆಯಬಾರದೆ? ಮತಧರ್ಮಗಳ ಆಚರಣೆಗಳನ್ನು ಅಡಚಣೆಗಳಿಲ್ಲದೆ ನಡೆಸಿಕೊಳ್ಳುವುದೇ ಬೇರೆ, ಅವುಗಳನ್ನು ಸಮರ್ಥಿಸುವುದೇ ಬೇರೆ.

* * *

ನ್ಯಾಯಮೂರ್ತಿ ದಿನಕರನ್ ಇಲ್ಲದ 'ಹೊಸತು' ಸಂಚಿಕೆ ಎಂದಿಗೆ ಸಾಧ್ಯವೋ ಇನ್ನೂ ತಿಳಿಯುತ್ತಿಲ್ಲ. ಕರ್ನಾಟಕದ ವಕೀಲರ ಒಂದು ಪ್ರಾತಿನಿಧಿಕ ತಂಡವು ದಿನಕರನ್ ಹೊಂದಿರುವ ಭೂಮಿಯ ಬಗ್ಗೆ ತಪಶೀಲು ನಡೆಸಲು ಅವರ ಊರಿಗೆ ತೆರಳಿತ್ತು. ವಾಪಸು ಬಂದನಂತರ ಏನು ಮಾಹಿತಿ ಬಹಿರಂಗಗೊಳಿಸಲಾಯಿತೋ ತಿಳಿಯದು. ಸರ್ವೋಚ್ಚ ನ್ಯಾಯಾಲಯವು ರಾಜ್ಯಸಭೆಯ ಅಧ್ಯಕ್ಷರ ಆದೇಶದ ಮೇರೆಗೆ ನ್ಯಾಯಮೂರ್ತಿಗಳ ಇನ್ನೊಂದು ಸಮಿತಿಯನ್ನು ರಚಿಸಿದೆ. ಆ ಸಮಿತಿಯು ದಿನಕರನ್ ಮೂಟೆಯ ಪ್ರಮಾಣದ ಬಗ್ಗೆ ಹೊಸ ಮಾಹಿತಿಯನ್ನೋ ದಾಖಲೆಯನ್ನೋ ನೀಡುತ್ತದೆಯೇ ಎಂದು ಕಾದುನೋಡಬೇಕು. ಎಲ್ಲಾ ನೋಡಿದರೆ ಏಕೋ ಏನೋ, ದಿನಕರನ್ ಅವರ ರಕ್ಷಣೆಯೇ ಸಂವಿಧಾನದ ರಕ್ಷಣೆ ಎಂಬ ಭಾವನೆ ಪ್ರಭಾವಿ ವಲಯಗಳಲ್ಲಿ ಮಡುಗಟ್ಟಿ ನಿಂತಿದೆಯೆಂಬ ಅನುಮಾನ ಬರುತ್ತಿದೆ. ಈ ಮಧ್ಯೆ, ದೆಹಲಿ ಉಚ್ಚ ನ್ಯಾಯಾಲಯದ ಇತ್ತೀಚಿನ ಒಂದು ತೀರ್ಪಿನ ಪ್ರಕಾರ ಸರ್ವೋಚ್ಚ ನ್ಯಾಯಾಲಯವು ಮಾಹಿತಿ ಹಕ್ಕಿನ ಕಾಯ್ದೆಗೆ ಹೊರತಾದುದಲ್ಲ. ಅಂದರೆ, ನ್ಯಾಯಾಧೀಶರ ಆಸ್ತಿ ವಿವರಗಳು ಬಹಿರಂಗಗೊಳ್ಳಬಹುದು ಮತ್ತು ಬಹಿರಂಗಗೊಳ್ಳಬೇಕು, ಎಂದರ್ಥ. ಅದಕ್ಕೇಕಿಷ್ಟು ಅವಾಂತರ? ಏನೂ ಮುಚ್ಚುಮರೆಯಿಲ್ಲ ಎಂದು ಹೇಳಿದ ಮೇಲೆ ಏಕೆ ಮುಚ್ಚುಮರೆ? ದೆಹಲಿ ನ್ಯಾಯಾಲಯದ ತೀರ್ಪನ್ನು ಸರ್ವೋಚ್ಚ ನ್ಯಾಯಾಲಯದ ಪರಿಶೀಲನೆಗೆ ಒಪ್ಪಿಸಲಾಗುತ್ತದಂತೆ. ಅಲ್ಲಿ ದೆಹಲಿಯ ತೀರ್ಪು ತಿರುಗು ಮುರುಗಾಗಲು ಅಡ್ಡಿಯಿಲ್ಲ. ಕಡೆಗೆ ಅವರು ಹೇಳುವುದೇ ಸಂವಿಧಾನದ ನಿಜಾರ್ಥ, ಅದೇ ಅಂತಿಮ ತೀರ್ಪು. ''ದೊರೆಯು ಎಂದೂ ತಪ್ಪೆಸಗಲಾರ'' ಎಂಬ ಗ್ರಹಿಕೆ ಎಲ್ಲೋ ಕೆಲಸ ಮಾಡುತ್ತಿದೆ. ತಮಗೆ ಮುಚ್ಚಿಡಲು ಹಕ್ಕುಂಟು ಎಂದು ಸಾಧಿಸುವ ನ್ಯಾಯಾಲಯಕ್ಕೆ ಏನೋ ಮುಚ್ಚಿಡಬೇಕಾದಂತಹದ್ದಿದೆ ಎಂಬ ಪ್ರಜ್ಞೆ ಜನರಲ್ಲಿ ಈಗಾಗಲೆ ಜಾಗೃತವಾಗಿದ್ದರೆ ಅದರಲ್ಲಿ ಅನಾರೋಗ್ಯಕರವಾದ್ದೇನೂ ಇಲ್ಲ, ಅನೂಹ್ಯವಾದದ್ದೇನೂ ಇಲ್ಲ. ''ವೇದವನ್ನೋದುವ ಹಕ್ಕನ್ನು ಜನರಿಂದ ಕಸಿದುಕೊಂಡು ಅದರ ಶ್ರೇಷ್ಠತೆಯನ್ನು ಕಾಪಾಡುವ ದೌರ್ಭಾಗ್ಯ ಭಾರತದ್ದಾಯಿತು'' ಎಂದು ಕಾರ್ಲ್ ಮಾರ್ಕ್ಸ್ ಒಂದೆಡೆ ನಿಟ್ಟುಸಿರನ್ನೆಳೆದಿದ್ದುದು ಈ ಸಂದರ್ಭದಲ್ಲಿ ಜ್ಞಾಪಕಕ್ಕೆ ಬರುತ್ತಿದೆ. ನಮ್ಮ ದೌರ್ಭಾಗ್ಯಗಳ ಸರಮಾಲೆಯು ೨೦೦೦ರಲ್ಲಿ ಅಂತ್ಯ

ವಾಗುವ ಸೂಚನೆಯಂತೂ ಕಾಣಬರುತ್ತಿಲ್ಲ. ದೇಶವನ್ನು ಪರದೇಶಗಳಿಗೆ ಒಪ್ಪಿಸುವುದೇ ಪರಮ ಭಾಗ್ಯವೆಂದು ಭಾವಿಸುವ ಮನಮೋಹನ ಸಿಂಗ್ ಸರ್ಕಾರದಿಂದ ಮುಕ್ತಿ ದೊರೆತನಂತರ ಇನ್ನೇನು ಕಾದಿರುತ್ತದೋ ಏನೋ!

*   *   *

**ಚೋಮ್‌ಸ್ಕಿ ಮಾತು**

ಜನವರಿ ಸಂಚಿಕೆಯಲ್ಲಿ ನೋಮ್ ಚೋಮ್‌ಸ್ಕಿ ಸಂದರ್ಶನ ಪ್ರಕಟವಾಗಿತ್ತು. ಅದನ್ನು ಹಲವು ಓದುಗರು ಸ್ವಾಗತಿಸಿದ್ದಾರೆ. ಸಂದರ್ಶನದ ಒಂದು ಭಾಗವನ್ನು ಕುರಿತು ಒಂದು ಮಾತು ಅನುಚಿತವೆನಿಸಲಾರದು. ''ದಬ್ಬಾಳಿಕೆಗೆ ಒಳಗಾದವರು ಸೇಡು ಪ್ರವೃತ್ತಿಯನ್ನು ಬೆಳೆಸಿಕೊಳ್ಳುವುದು, ತಮಗೆ ಯಾರ ಮೇಲೆ ಅದನ್ನು ತೀರಿಸಿಕೊಳ್ಳಲು ಸಾಧ್ಯವಾಗುತ್ತದೆ ಅಲ್ಲಿ ಹಾಗೆ ತೊಡಗಿಸಿಕೊಳ್ಳುವುದು ಇತಿಹಾಸದಲ್ಲಿ ಪದೇಪದೇ ಕಾಣಿಸಿಕೊಂಡಿದೆ'' ಎಂದು ನೋಮ್ ಚೋಮ್‌ಸ್ಕಿ ತಮ್ಮ ಸಂದರ್ಶನದಲ್ಲಿ ಹೇಳಿರುವುದು ಅನೈತಿಹಾಸಿಕವಾಗಿ ತೋರುತ್ತದೆ. ಅವರು ಅದನ್ನು ಪ್ಯಾಲಿಸ್ಟೈನ್ ಸಂದರ್ಭದಲ್ಲಿ ಹೇಳಿದ್ದಾರೆ. ಆದರೆ ಪ್ಯಾಲಿಸ್ಟೈನ್‌ನಲ್ಲಿ ಯಾವಾಗಲೂ ಯಹೂದಿಗಳ ಮೇಲೆ ದಬ್ಬಾಳಿಕೆ ನಡೆದಿರಲಿಲ್ಲ. ಶತಮಾನಗಳ ಕಾಲ ಅಲ್ಲಿ ಶಾಂತಿ, ಸೌಹಾರ್ದ ನೆಲೆಸಿತ್ತು. ಬ್ರಿಟನ್ ತನ್ನದೇ ಕಾರಣಗಳಿಗಾಗಿ ಬಾಲ್ಫರ್ ಘೋಷಣೆ ಹೊರಡಿಸಿದ ನಂತರವಷ್ಟೇ ಅಲ್ಲಿ ಹಿಂಸೆ, ಅಂತರ್ಯುದ್ಧ ಆರಂಭವಾದದ್ದು. ನಂತರ ಅಮೆರಿಕಾ ಮಧ್ಯಪ್ರವೇಶ ಮಾಡಿತು. ಪಶ್ಚಿಮ ಏಷ್ಯದ ಸಂಪತ್ತು ಕೊಳ್ಳೆಹೊಡೆಯುವುದು ಇದರ ಒಂದು ಮೂಲ ಕಾರಣ. ಇಪ್ಪತ್ತನೆಯ ಶತಮಾನದವರೆಗೆ ಯೂರೋಪಿನ ಬಹುತೇಕ ಎಲ್ಲ ದೇಶಗಳಲ್ಲೂ, ಎಲ್ಲ ಕಾಲಗಳಲ್ಲೂ ಯಹೂದಿಗಳನ್ನು ಹಿಂಸಿಸಲಾಗುತ್ತಿತ್ತು ಮತ್ತು ಕೊಲ್ಲಲಾಗುತ್ತಿತ್ತು. ಹಿಟ್ಲರ್ ಸೇರಿದಂತೆ ಎಲ್ಲ ಯೂರೋಪಿಯನ್ ಉಪಟಳಕಾರರನ್ನೂ ಮರೆತು ಯಹೂದಿಗಳು ಪ್ಯಾಲಿಸ್ಟೈನ್ ನಾಗರಿಕರ ಮೇಲೆ ಸೇಡು ತೀರಿಸಿಕೊಳ್ಳಲು ಹೊರಟಿರುವುದು ಚೋಮ್‌ಸ್ಕಿ ಹೇಳುವ ''ಇತಿಹಾಸದಲ್ಲಿ ಪದೇಪದೇ ಕಾಣಿಸಿಕೊಂಡಿರುವ'' ಪ್ರಸಂಗವಲ್ಲ. ಯಹೂದಿಗಳಿಗೆ ಕೇಡುಂಟುಮಾಡಿದ್ದು ಪ್ಯಾಲಿಸ್ಟೈನ್‌ನ ಜನರಲ್ಲ.

ಇತಿಹಾಸದ ಒಂದೇ ಒಂದು ತುಣುಕನ್ನು ಇಲ್ಲಿ ಪ್ರಸ್ತಾಪಿಸಬಹುದು : ಚಾರ್ಲ್ಸ್ ಡಿಕಿನ್ಸ್ ತನ್ನ ''ಇಂಗ್ಲೆಂಡಿನ ಇತಿಹಾಸ'' ಎಂಬ ಪುಸ್ತಕದಲ್ಲಿ ಮೊದಲನೆ ಎಡ್ವರ್ಡ್, ಫ್ರಾನ್ಸಿನ ಕೌಂಟ್ ಶಾಲೋನ್‌ನನ್ನು ಸೋಲಿಸಿ ಬಂದಾಗ ಎಂತಹ ಸಂಭ್ರಮ ಲಂಡನ್ನಿನಲ್ಲಿ ಕಂಡುಬಂತೆಂಬುದನ್ನು ವಿವರಿಸಿದ್ದಾನೆ. ಅವನ ಕೆಲವು ವಾಕ್ಯಗಳು ಹೀಗಿವೆ : ''ಜನರೆಲ್ಲಾ ಹುಚ್ಚೆದ್ದು ಕುಣಿದರು, ಬಡ ಯಹೂದಿಗಳನ್ನುಳಿದು. ಅವರಾದರೋ ತಮ್ಮ ಮನೆಗಳಿಂದ ಹೊರಬರಲಾಗದೆ ಕಿಟಕಿಗಳ ಸಂದುಗಳಿಂದ ಹೊರಗಿನ ಸಂಭ್ರಮ ವೀಕ್ಷಿಸಿದರು. ಈ ಸಂಭ್ರಮಗಳ ಖರ್ಚನ್ನೆಲ್ಲಾ ನಾಳೆ ತಾವು ಭರಿಸಬೇಕಾಗುತ್ತದಲ್ಲಾ ಎಂಬುದಷ್ಟೇ ಅವರ ಆಗಿನ ಪೇಚು. ಅದಿರಲಿ, ನಂತರ ಈ ಯಹೂದಿಗಳ ನರಕಯಾತನೆ ಹೇಗಿತ್ತೆಂದು ಚುಟುಕಾಗಿ ಹೇಳಿಬಿಡುತ್ತೇನೆ : ಎಡ್ವರ್ಡನ ರಾಜ್ಯಭಾರದಲ್ಲಿ ಅವರ ಲೂಟಿ ನಿರ್ದಯವಾಗಿ ನಡೆಯಿತು; ಅಪಾರ ಸಂಖ್ಯೆಯಲ್ಲಿ ಅವರನ್ನು ನೇಣುಗಂಬಕ್ಕೇರಿಸಲಾಯಿತು. ತೆರಿಗೆಯ ಪ್ರಮಾಣವಂತೂ ಹೇಳಲಸದಳ. ಎಡ್ವರ್ಡನ ಪಟ್ಟಾಭಿಷೇಕವಾದ ಹದಿಮೂರನೆಯ ವರ್ಷದಲ್ಲಿ ಒಂದು ದಿನ ಸಾವಿರಾರು ಯಹೂದಿಗಳನ್ನು ಮಡದಿ-ಮಕ್ಕಳೊಂದಿಗೆ ಸೆರೆಮನೆಗಳಿಗೆ ತಳ್ಳಲಾಯಿತು; ತಲಾ ಹನ್ನೆರಡು ಸಾವಿರ ಪೌಂಡುಗಳನ್ನು ತೆತ್ತು ಹೊರಬರಲು ಅವಕಾಶ ನೀಡಲಾಯಿತು! ಕೊನೆಗೆ, ಎಲ್ಲ ಯಹೂದಿಗಳ ಆಸ್ತಿಯನ್ನೂ ರಾಜ ಮುಟ್ಟುಗೋಲು ಹಾಕಿಕೊಂಡ. ದೇಶ ಬಿಟ್ಟು ಹೋಗಲು ಸಾಕಾಗುವಷ್ಟನ್ನು ಮಾತ್ರ ಅವರಿಗೆ ಬಿಟ್ಟುಕೊಡುವಷ್ಟು ಧಾರಾಳತನ ಈ ದೊರೆಯದ್ದು.'' ಎಡ್ವರ್ಡ್ ಪ್ಯಾಲಿಸ್ಟೈನ್‌ನವನೇನೂ ಅಲ್ಲ.

ಇಂಗ್ಲೆಂಡಿನವನೇ ಆದ ಡಿಕಿನ್ಸ್ ತನ್ನ ದೇಶದಲ್ಲಿ ಯಹೂದಿಗಳ ಮೇಲೆ ನಿರಂತರವಾಗಿ ನಡೆದ ಸುಲಿಗೆ-ಕೊಲೆಗಳನ್ನು ಹಲವು ಬಾರಿ ದಾಖಲಿಸಿದ್ದಾನೆ. ಇದೆಲ್ಲಾ ಚೋಮ್‌ಸ್ಕಿಗೆ ತಿಳಿಯದ ವಿಷಯವೇನಲ್ಲ. ಸಲ್ಲದ ''ಸೇಡು ತೀರಿಸಿಕೊಳ್ಳಲು'' ಯಹೂದಿಗಳಿಗೆ ಇಂದು ಬೆಂಬಲ ದೊರಕಿರುವುದು ಚೋಮ್‌ಸ್ಕಿಯ ಅಮೆರಿಕಾದಿಂದ ಎಂಬುದನ್ನು ಗಮನಿಸಬೇಕು.

## ಅಂದು ಸುನಾಮಿ - ಇಂದು ಭೂಕಂಪ

ಹೈಟಿ ಎಂಬ ದೇಶವು ಅಮೆರಿಕಾದ ಹತ್ತಿರ ಇದೆ. ಹಿಂದೆ ಎಷ್ಟೋ ಹೈಟಿ ನಾಗರಿಕರು ಕದ್ದು ಅಮೆರಿಕಾ ಪ್ರವೇಶಿಸಲು ಚಿಕ್ಕ ದೋಣಿಗಳಲ್ಲಿ ಹೊರಟು ಸಮುದ್ರ ಮಧ್ಯದಲ್ಲಿ ಪ್ರಾಣ ಕಳೆದುಕೊಂಡಿದ್ದರು. ಹೈಟಿ ಸಂಪೂರ್ಣವಾಗಿ ಅಮೆರಿಕಾದ ಅಧೀನದಲ್ಲಿದೆಯೆಂದರೆ ತಪ್ಪಲ್ಲ. ಸೀಡ್ರಸ್ ಎಂಬ ಚುನಾಯಿತ ಅಧ್ಯಕ್ಷನನ್ನು ಓಡಿಸಲು ಅಮೆರಿಕಾ ೧೯೮೦ರ ದಶಕದಲ್ಲಿ ಎಲ್ಲ ರೀತಿಯ ಕುತಂತ್ರಗಳನ್ನೂ ಬಳಸಿ ಯಶಸ್ವಿಯಾಯಿತು. ಆಮೇಲೆ ಚುನಾಯಿತನಾದ ಅರಿಸ್ಟೀಡ್‌ನನ್ನು ಅಮೆರಿಕಾ ಮೆಚ್ಚಿಕೊಂಡಿತ್ತು. ಆತನು ಅಮೆರಿಕಾದ ಆದೇಶವನ್ನೆಂದೂ ಪ್ರಶ್ನಿಸದಿದ್ದ ಅಧ್ಯಕ್ಷ. ಹೆಸರಿಗೆ ಅಧ್ಯಕ್ಷ, ಅಷ್ಟೆ. ಒಮ್ಮೆ ಆಹಾರಕ್ಕೆ ಸಂಬಂಧಿಸಿದಂತೆ ಅಮೆರಿಕಾ ಬಗ್ಗೆ ದೂರಿದಾಗ ಅವನನ್ನು ಕಿತ್ತೊಗೆಯುವತನಕ ಅಮೆರಿಕಾಕ್ಕೆ ಸಹನೆ ಮೂಡಲಿಲ್ಲ. ಅಂದರೆ, ಹೈಟಿ ಯಾವಾಗಲೂ ಬಡತನದಿಂದ ನರಳುತ್ತಲೇ ಇರುವ ಅಸ್ವತಂತ್ರ ದೇಶ. ಈಗ ಅಲ್ಲಿ ಭೂಕಂಪದಿಂದಾಗಿ ಎರಡು ಲಕ್ಷ ಜನ ಪ್ರಾಣ ಕಳೆದುಕೊಂಡಿದ್ದಾರೆಂದು ವರದಿಯಾಗಿದೆ. ಮನೆಗಳು, ಗುಡಿಸಲುಗಳು, ಎಲ್ಲಾ ನೆಲಸಮವಾಗಿವೆ. ಮೊದಲೇ ಅರಾಜಕತೆಯ ದೇಶ; ಈಗಂತೂ ಅದು ಮಿತಿಮೀರಿ ಆಘಾತ ಉಂಟುಮಾಡುತ್ತಿದೆ. ಮೊದಲಿನಿಂದಲೂ ಹೈಟಿಯ ಸಂಪತ್ತು ಮತ್ತು ಕೂಲಿಕಾರರನ್ನು ತನ್ನ ಆಸ್ತಿಯಂತೆ ಬಳಸುತ್ತಿದ್ದ ಅಮೆರಿಕಾ ತನ್ನದೇನೂ ಜವಾಬ್ದಾರಿ ವಿಶೇಷವಾಗಿಲ್ಲವೆಂದು ನಟಿಸುತ್ತಿದೆ. ಸಹಾಯವನ್ನು ಯೋಜಿಸುವುದರಲ್ಲಿ ಪಾತ್ರವಿಲ್ಲದ ಅಮೆರಿಕಾ ಇಡೀ ಹೈಟಿಯನ್ನು ಈಗ ತನ್ನ ಅಧೀನದಲ್ಲಿರಿಸಿಕೊಂಡಿದೆ. ಅದಕ್ಕೆ ಬಾನ್ ಕಿ ಮೂನ್ ಬಾಯಿ ತೆರೆದಿಲ್ಲ. ಬ್ರೆಜ಼ಿಲ್ ಮುಂತಾದ ದೇಶಗಳು ಹೈಟಿ ಜನರಿಗಾಗಿ ಕಳುಹಿಸಿದ್ದ ಸಾಮಗ್ರಿಗಳನ್ನು ಹೊತ್ತುತಂದ ವಿಮಾನಗಳು ಹೈಟಿಯಲ್ಲಿ ಇಳಿಯಲು ಅಮೆರಿಕಾ ಅವಕಾಶ ನೀಡಲಿಲ್ಲ. ಆದರೆ ಜಗತ್ತಿನ ಎಲ್ಲ ದೇಶಗಳೂ ಹೈಟಿಗೆ ಸಹಾಯಹಸ್ತ ನೀಡಿವೆ. ಭಾರತವೂ ತನ್ನ ಪಾಲಿನ ಕಾಣಿಕೆಯನ್ನು ಗಮನಾರ್ಹವಾದ ಮಟ್ಟದಲ್ಲಿ ನೀಡಿರುವುದು ಸಮಾಧಾನದ ಸಂಗತಿ. ಹೈಟಿಯ ಇಂದಿನ ದಾರುಣ ಸನ್ನಿವೇಶದಲ್ಲಿ ಅಲ್ಲಿಯ ಜನತೆಯು ದೃಢವಾಗಿ ಹೆಜ್ಜೆಹಾಕಲು ಮುಂದಾಗಲಿ, ಅದರಲ್ಲಿ ಯಶಸ್ಸು ಗಳಿಸಲಿ, ಎಂದು 'ಹೊಸತು' ಆಶಿಸುತ್ತದೆ. ಹಿಂದೆ ಸುನಾಮಿಯು ಹಲವು ದೇಶಗಳು ತತ್ತರಿಸುವಂತೆ ಮಾಡಿತು; ಈಗ ಭೂಕಂಪ ಒಂದು ದೇಶವನ್ನು ಭಗ್ನಗೊಳಿಸಿದೆ. ಪ್ರಕೃತಿಯ ನಿಗೂಢ ನಿಯಮವನ್ನು ತಿಳಿಯಲು ಇನ್ನೂ ಅಶಕ್ತನಾಗಿರುವ ಮಾನವ ತನ್ನ ಚಿಕ್ಕತನವನ್ನು ತಿಳಿದು ಮುಗ್ಧತೆಯಿಂದ ಬಾಳಬೇಕೆಂಬ ಸಂದೇಶವನ್ನು ಪ್ರಕೃತಿ ನೀಡುತ್ತಲೇ ಬಂದಿದೆ. ಘಟನೆ ಘಟಿಸಿದ ನಂತರ ಅದು ಏಕೆ ಮತ್ತು ಹೇಗೆ ಘಟಿಸಿತೆಂದು ಹೇಳಬಲ್ಲ ಮಾನವನ ನಾಳೆಗಳು ಇಷ್ಟೊಂದು ಕರಾಳವಾಗಿಲ್ಲದಿರಬಹುದು. ಹೈಟಿಯ ಜನರಿಗೆ 'ಹೊಸತು' ಸಾಂತ್ವನ ವ್ಯಕ್ತಪಡಿಸುತ್ತದೆ.




## ಜನವರಿ ಸಂಚಿಕೆ

### ಬೇಕು !

ಡಾ|| ಬಿ. ಎ. ಸನದಿಯವರು 'ಬೇರೆ ಕವಿತೆ ಬೇಕೆ ?' ಎಂದು ಕೇಳಿದ್ದಾರೆ (ಅದೇ ಹೆಸರಿನ ಹನಿಗವನದಲ್ಲಿ). ಖಂಡಿತ ಬೇಕು; ನಾನೇ ಬರೆದಿದ್ದೇನೆ !

ಮೈಸೂರು — ಸಿ.ಪಿ.ಕೆ.

### ಕಂಬಾರರ ಒಂದು ಅನನ್ಯ (ಕೃತಿ) ನಾಟಕ

ನಾನು ಇತ್ತೀಚೆಗೆ ನೋಡಿದ ನಾಟಕಗಳಲ್ಲಿ ಚಂದ್ರಶೇಖರ ಕಂಬಾರರ 'ಹರಕೆಯ ಕುರಿ'ಯು ತುಂಬ ಪರಿಣಾಮವನ್ನು ಬೀರಿದ ಕಾರಣ ಈ ಟಿಪ್ಪಣಿಯನ್ನು ಬರೆಯುತ್ತಿದ್ದೇನೆ. ಇದರ ಬಗ್ಗೆ ಈ ಹಿಂದೆ ಬಂದಿರುವ ಪ್ರತಿಕ್ರಿಯೆಗಳು, ಅದರಲ್ಲಿ ನಾನೂ ಭಾಗಿಯಾಗಿದ್ದರೂ ಇಂದಿನ ಪರಿಣಾಮದಲ್ಲಿ ವಿಶೇಷತೆಯನ್ನು ಕಾಣಲು ಸಾಧ್ಯವಾಗಿದೆ. ಈ ವಿಷಯದಲ್ಲಿ ಒಂದು ಆಕ್ಷೇಪಣೆಯನ್ನು ಎತ್ತದೇ ಇರಲಾರೆ. ಇದರ ರಚನೆಯು ೧೯೮೩ ರಲ್ಲಾಗಿದೆ. ಅಂದಿನ ರಾಜಕೀಯ ಸನ್ನಿವೇಶವು ಈ ನಾಟಕ ರಚನೆಗೆ ಕಾರಣವಾಗಿದ್ದು, ಆದರೂ ಒಂದು ಟೀಕೆಯಂತೆ ಕೆಲವರಿಗೆ ಕಂಡಿದ್ದಿರಬಹುದು. ಡಾ|| ಕುರ್ತಕೋಟಿ ಯವರು, ಮುನ್ನುಡಿಯಲ್ಲಿ ''ಕಂಬಾರರ ಮೊದಲಿನ ನಾಟಕಗಳಿಗಿಂತ ಇಲ್ಲಿ ಹೆಚ್ಚಿನ ನಾಟ್ಯಕೌಶಲ್ಯ ಕಾಣುತ್ತಿದೆ'' ಎಂದಿದ್ದಾರೆ. ಕಂಬಾರರ ಜೀವನ ಚಿತ್ರಣವನ್ನು ಕೊಟ್ಟಿರುವ ಶ್ರೀಮತಿ ಡಾ|| ಎಚ್. ನಾಗವೇಣಿ (೨೦೦೪) ''ಅವರ ಹಿಂದಿನ ಇತರ ನಾಟಕಗಳಿಗಿಂತ ತೀರಾ ಭಿನ್ನವಾದ ಕಥಾವಸ್ತುವುಳ್ಳದ್ದು ಸಮಕಾಲೀನ ರಾಜಕೀಯದೊಳಗಿನ ಅಸಾಮಾನ್ಯ ಕ್ರೌರ್ಯ, ಕುತಂತ್ರ, ಕುಟಿಲತೆ, ಸ್ವಾರ್ಥತನ ಮತ್ತು ಆ ದುಷ್ಟ ರಾಜಕೀಯ, ಜನಸಾಮಾನ್ಯರಲ್ಲಿ ಹುಟ್ಟು ಹಾಕುವ ಭಯ, ನಡೆಸುವ ಅಮಾನವೀಯ ಜೀವವಿರೋಧಿ ದುರಾಕ್ರಮಣ – ದುರಂತವನ್ನು ಈ ನಾಟಕವು ಬಿಚ್ಚಿಡುತ್ತಾ ಸಾಗುತ್ತದೆ. ಇದರ ವಸ್ತು ಬೆಂಗಳೂರಿನದ್ದು. ಆ ಕಾರಣಕ್ಕೆ ನಾಟಕದ ವಸ್ತುವಿಗೆ ತಕ್ಕಂತೆ ಬೆಂಗಳೂರು ನಗರದ ಭಾಷೆಯನ್ನು ಕಂಬಾರರು ಸಮರ್ಥವಾಗಿ ಬಳಸಿ ಕೊಂಡಿದ್ದಾರೆ'' ಎಂದಿದ್ದಾರೆ.

ಈ ಬಗೆಯ ಮೆಚ್ಚಿಕೆಯಿಂದ ನಾಟಕಕ್ಕೆ ನ್ಯಾಯ ದೊರಕಿಸಿದಂತಾಗಲಾರದು ! ಇಂಥ ಅನುಮಾನದಿಂದಾಗಿ ನನ್ನ ಮೇಲೆ ಈ ನಾಟಕವು ಬೀರಿದ ಪರಿಣಾಮವನ್ನು ಕುರಿತು ಬರೆಯುತ್ತಿದ್ದೇನೆ : ನಾಟಕವು ಪ್ರದರ್ಶನದ ಮೂಲಕ ಒಂದು ಸಾಮೂಹಿಕ ಸವಲತ್ತಿನಿಂದ ಪರಿಣಾಮಕಾರಿ ಯಾಗುತ್ತದೆ. ಅಭಿನಯದ ಪರಿಣಾಮವನ್ನು ಒಂದು ಕಥಾ ಸಂದರ್ಭದ ಹೇಳಿಕೆಯೆನ್ನುವಂತೆ ಪರಿಗಣಿಸುವುದಂತೂ ನಮ್ಮ ವಿಮರ್ಶೆಯ ಗತಿಯಾಗಿಬಿಟ್ಟಿದೆ. ಆದುದರಿಂದ ನಾಟಕ ವನ್ನು ಅದರ 'ಸಾಮಾಜಿಕತೆ'ಯ ಅನುಭವಕ್ಕಾಗಿ ಪರಿಗಣಿಸ ಬೇಕೆಂಬುದು ನನ್ನ ವಿಚಾರವಾಗಿದೆ. ಉದಾಹರಣೆಗೆ 'ಹರಕೆಯ ಕುರಿ' ಅಭಿನಯವನ್ನೇ ಗಮನಿಸಿದರೆ ನೇರವಾಗಿ ಒಬ್ಬ ರಾಜಕಾರಣಿಯು (ಇಲ್ಲಿ ರುದ್ರಪ್ಪನೆಂಬ ವಿರೋಧಪಕ್ಷದ ನಾಯಕ) ತಾನು ಮುಖ್ಯಮಂತ್ರಿಯಾಗಲು ಹೂಡಿದ ಹೂಟದಲ್ಲಿ ಪ್ರತಿಸ್ಪರ್ಧಿಯನ್ನು ಮಧ್ಯಮವರ್ಗದ ಒಬ್ಬ ಯುವಕನಿಂದ ಕೊಲೆ ಮಾಡಿಸಿ, ಅವನನ್ನೇ 'ಹರಕೆಯ ಕುರಿ'ಯನ್ನಾಗಿ 'ಬಲಿ'ಯಾಗಿಸುತ್ತಾನೆಯಷ್ಟೆ! ಇದರಲ್ಲಿ ನಾಯಕನು 'ಬಲಿ'ಯಾಗುವ ಯುವಕನೇ ಆಗಿರುವುದನ್ನು ನಾಟಕವು ಸಮರ್ಥಿಸುತ್ತದೆ. ಕೊಲೆಗಾರನಾದ ಯುವಕನು ತಪ್ಪಿಸಿಕೊಳ್ಳುವುದಕ್ಕಾಗಿ ಒಂದು ಮಧ್ಯಮವರ್ಗದ ಮನೆಯನ್ನು ಹೊಕ್ಕು ಮನೆಯಾಕೆಯನ್ನು ಬೆದರಿಸುವ ಸನ್ನಿವೇಶವು ಮೊದಲಾಗಿ. ಅಂಥ, ಅಂದರೆ ತನ್ನ ಮತ್ತು ತನ್ನ ಯುವ ಗಂಡನ ಪ್ರಾಣಭಯದಿಂದ ಮುಂದೆ ನಾಟಕವು ಚಾಲನೆಯನ್ನು ಪಡೆಯುತ್ತದೆ. ಇದೇ ಮನೆಯನ್ನು ರಾಜಕಾರಣಿ ರುದ್ರಪ್ಪನು ತನ್ನ ತಂತ್ರಕ್ಕೆ ಕಾರ್ಯಾಗಾರವನ್ನಾಗಿ




ಮಾಡಿಕೊಂಡಿದ್ದು. ಇದು ಕೊಲೆಗಾರ ಯುವಕನಿಗೂ ತಿಳಿದಿರಬೇಕು. ಆದುದರಿಂದ ಅವನೂ ಈ ಮನೆಯನ್ನು ತನ್ನ ರಕ್ಷಣೆಗೆ ಬಳಸುತ್ತಾನೆ – ಆದರೆ ತಲ್ಲಣಕ್ಕೆ ಒಳಗಾದ ಈ ಮಧ್ಯಮವರ್ಗದ ದಂಪತಿಗಳು, ರುದ್ರಪ್ಪನ ಕ್ರೌರ್ಯಕ್ಕೆ ಒಳಗಾಗಬಹುದೆಂದು ಅರಿವಾದಾಗ ಕೊಲೆಗಾರನಾದ ಯುವಕನು ಅವರ ರಕ್ಷಣೆಗೆ ನಿಲ್ಲುವ ಸನ್ನಿವೇಶವು ರಾಜಕೀಯದ ಹಕೀಕತ್ತಿಗೆ ವಿರುದ್ಧವಾದ ಸಾಚಾತನ ವಾಗುತ್ತದೆ. ಇಂತಹ ಸಾಧುವಾದ ಆಶಯದಿಂದಾಗಿ ಕೊಲೆಗಾರನಾದರೂ ಯುವಕನು ರಾಜಕಾರಣಿ 'ರುದ್ರಪ್ಪ' ನಿಗಿಂತ ಉತ್ತಮನಾಗುತ್ತಾ ಬೆಳೆಯುತ್ತಾನೆ – ಇದರ ಫಲವಾಗಿಯೇ ರಾಜಕಾರಣವು ಮುಳ್ಳಿನಿಂದ ಮುಳ್ಳನ್ನು ತೆಗೆದು ಎರಡನ್ನೂ ಬಿಸುಡುವ (ಚಾಣಕ್ಯ) ತಂತ್ರವಾಗಿ ಇರುವುದನ್ನೂ ಕೊಲೆಗಾರನಾದರೂ ಗಮನ ಸೆಳೆಯುವ ಯುವಕನು ಯೋಗ್ಯನಾಗಿ, ಅವಕಾಶ ಸಿಕ್ಕಿದಲ್ಲಿ, 'ನಾಯಕ' ನಾಗಿ ಪ್ರೇಕ್ಷಕರ ಗಮನಕ್ಕೆ ಬರುತ್ತಾನೆ. ಇದರ ಸಾತತ್ಯವು ಗಮನಕ್ಕೆ ಬರಲು ನಾಟಕ ಮುಗಿದ ಮೇಲೆಯೂ ಕೊಂಚ ಕಾಲ ಬೇಕಾದೀತು. – ಇಂಥ ಆರೋಗ್ಯಕರವಾದ ಇಂಟರ್ ಪ್ರಿಟೇಷನ್ನಿಗೆ ಅವಕಾಶವನ್ನುಂಟುಮಾಡುವ 'ಹರಕೆಯ ಕುರಿ' ಕಂಬಾರರ ಒಂದು ಮಹತ್ವದ ಕೃತಿಯಾಗಿದೆ. ಇದನ್ನು 'ಆಧುನಿಕ ಮುದ್ರಾರಾಕ್ಷಸ'ವೆಂದರೆ ನಾಟಕಕಾರ ನಿಗೂ, ನಾಟಕಕ್ಕೂ ನ್ಯಾಯ ದೊರಕಿಸಿದಂತಾಗಲಾರದು. ಏಕೆಂದರೆ ಈ ನಾಟಕವು ಇಂದಿನ ರಾಜಕೀಯದ ದುರವಸ್ಥೆಯನ್ನು ಬೆಳಕಿಗೊಡ್ಡುವ ಒಂದು 'ಸಮಕಾಲಿಕ ಸಮರ್ಥನೆಯನ್ನು' ತನ್ನ ಒಡಲಲ್ಲಿ ಅಡಗಿಸಿಕೊಂಡಿದೆ. ಇದನ್ನು ಕಥೆ ಎಂದು ವಿವರಿಸುವುದೂ ಸರಿಯಾಗಲಾರದು. ಇದು ರಚಿತವಾದ (೧೯೮೩) ಕಾಲಕ್ಕಿಂತ ಬರಬರುತ್ತಾ ನಮ್ಮ ರಾಜಕೀಯ ವಾತಾವರಣವು, ಅದರಲ್ಲಿ ಪ್ರತಿಯೊಬ್ಬ ರಾಜಕಾರಣಿಯೂ 'ಅಧಿಕಾರ'ಕ್ಕಾಗಿ ಬದುಕುತ್ತಾ ಇರುವಲ್ಲಿ ಮಧ್ಯಮ ವರ್ಗವನ್ನು ದುರುಪಯೋಗಿಸಿಕೊಳ್ಳುತ್ತಿದ್ದರೂ ಒಂದು 'ಧರ್ಮ'ವೆನ್ನುವಂತೆ ವರ್ತಿಸುತ್ತಿರುವುದರಿಂದಾಗಿ, ಪ್ರಜಾಪ್ರಭುತ್ವವು ಪ್ರಜೆಗಳ ರಕ್ಷಣೆಗಾಗಿ ವಿಕಾಸವಾಗುವ ಬದಲು ತೀರಾ ವಿರುದ್ಧವೂ ಅಪಾಯಕಾರಿಯೂ ಆಗುತ್ತಿರುವ ರೀತಿಯನ್ನು ಕಂಬಾರರ 'ಹರಕೆಯ ಕುರಿ' ಖಚಿತಪಡಿಸುತ್ತಿದೆ. ಇದು ಮನರಂಜನೆಯನ್ನೂ ಮೀರಿದ 'ಅರಿವಿ'ನಿಂದ ಕೂಡಿರುವ ರೂಪಕ. ಅರ್ಥಾತ್ ಒಂದು ಸಾಮಾಜಿಕ ಪ್ರಕ್ರಿಯೆ ಎಂದು ಹೇಳುವುದಕ್ಕಾಗಿ ಈ ಬರಹವನ್ನು – ಮುಗಿತಾಯಕ್ಕೆ ತರುತ್ತಿದ್ದೇನೆ. ಕಂಬಾರರ 'ಹರಕೆಯ ಕುರಿ' ಕೇವಲ ನಮ್ಮ ಬಗ್ಗೆಯಲ್ಲದೆ 'ಇಂದಿನ ಭಾರತದ' ಯಾವುದೇ ಸರ್ಕಾರಕ್ಕೆ ಅನ್ವಯಿಸಬಹುದು ಎಂಬುದನ್ನು ಈ ಮೂಲಕ ಸೂಚಿಸುತ್ತಿದ್ದೇನೆ.

ಲಂಕೇಶರ 'ತೆರೆಗಳು' ನಾಟಕದ ಪರಿಣಾಮವನ್ನು ಇದೇ ರೀತಿಯದೆಂದು ಪರಿಗಣಿಸುವುದಾದರೆ ನಮ್ಮ ಪ್ರೇಕ್ಷಕರಿಗೆ ಹೆಚ್ಚಿನ ಜವಾಬ್ದಾರಿಯನ್ನು ಹೇರಿದಂತಾಗ ಬಹುದು. ಇದಕ್ಕಾಗಿ ಕ್ಷಮಾಪಣೆಯನ್ನು ಕೋರುತ್ತಲೇ ಗೆಳೆಯ ಕಂಬಾರರ 'ಹರಕೆಯ ಕುರಿ' ಒಂದು ಅನನ್ಯ ಕೃತಿಯೆಂದು ಹೇಳಲು ಪ್ರಯತ್ನಿಸಿರುತ್ತೇನೆ. ಇದಕ್ಕೆ ನನ್ನ ಅನುಭವವನ್ನು ಆಧರಿಸಿದ್ದೇನೆ.

ಬೆಂಗಳೂರು — *ಕ. ವೆಂ. ರಾಜಗೋಪಾಲ*

---

ಹೊರನಾಡ ಲೇಖಕ-ಲೇಖಕಿಯರಿಂದ ಮುಂಬೆಳಗು ಸಾಹಿತ್ಯ ಪ್ರಶಸ್ತಿಗಾಗಿ ಕಥಾಸಂಕಲನ ಹಸ್ತಪ್ರತಿಗಳನ್ನು ಆಹ್ವಾನಿಸಲಾಗಿದೆ. ೧೨೦ ಪುಟಗಳನ್ನು ಮೀರದ ಅಪ್ರಕಟಿತ ಸಂಕಲನಗಳನ್ನು ಡಿ.ಟಿ.ಪಿ. ಟೈಪ್ ಮಾಡಿಸಿ ಕಳಿಸಬೇಕು. ವಿವರಗಳಿಗೆ ಸಂಪರ್ಕಿಸಬೇಕಾದ ವಿಳಾಸ : Secretary, Mumbelagu Kannada Balaga (R), D/6/203 Himagiri CHS., Lokdhara, Kalyan (East) - 421 306.
ದೂರವಾಣಿ : ೦೨೫೧-೨೩೫೨೩೩೦/
೦೯೯೧೬೧೯೯೩೩೮

---

'ಯುವಶಕ್ತಿ ಪ್ರಕಾಶನ'ವು ಒಂದು ಕವನ ಸಂಕಲನವನ್ನು ಹೊರತರಲು ಕವಿಗಳಿಂದ ತಲಾ ಎರಡು ಕವಿತೆಗಳನ್ನು ಆಹ್ವಾನಿಸಿದೆ. ವಿವರಗಳಿಗೆ ಸಂಪರ್ಕಿಸಿ : ಯುವಶಕ್ತಿ ಪ್ರಕಾಶನ, ೭೬೭, ೨ನೇ ಕ್ರಾಸ್, ಪಾಪಾರಾಂ ರಸ್ತೆ, ನಜರ್‌ಬಾದ್, ಮೈಸೂರು - ೫೭೦ ೦೧೦.
ದೂರವಾಣಿ : ೦೮೨೧-೬೫೨೫೧೧೬



# ಜಗತ್ತು ಆಕಳಿಸುತ್ತಾ ಮಲಗಿಬಿಟ್ಟಿತು

**ತಂ**ದ ಕಲ್ಲುಗಳನ್ನು ಪುಡಿಮಾಡಿ ರಂಗವಲ್ಲಿಯ ಹಿಟ್ಟು ಮಾಡಿ ಡೇರೆಯ ಮುಂದಿನ ಅಂಗಳಕ್ಕೆ ನೀರು ಚಿಮುಕಿಸಿ ರಂಗವಲ್ಲಿ ಹಾಕಲು ಪ್ರಯತ್ನಿಸುತ್ತಿದ್ದಾಳೆ. ಆಗಾಗ್ಗೆ ಕಣ್ಣಿಗೆ ಅಡ್ಡ ಬರುವ ಕೂದಲನ್ನು ಹಿಂದಕ್ಕೆ ಸರಿಸುತ್ತಾ ಎದುರಿನ ಮಹಡಿಮನೆಯ ಆಂಟಿ ತುಳಸಿ ಗಿಡದ ಸುತ್ತ ತಿರುಗುವುದನ್ನೇ ನೋಡುತ್ತಾ ಡೇರೆಯ ಪಕ್ಕದ ಜಾಲಿ ಗಿಡವನ್ನೇ ಸುತ್ತುತ್ತಿದ್ದಾಳೆ. ಅವ್ವ ಮರಳಿ ಬರಲೆಂದು, ಅಪ್ಪ ಜೈಲುಕಂಬಿಗಳಿಂದ ಹೊರಗೆ ಇರಲೆಂದು ಕೈಮುಗಿದು ಬೇಡುತ್ತಿದ್ದಾಳೆ. ನಿನ್ನೆ ಆ ಊರು – ಇವತ್ತು ಈ ಊರು – ನಾಳೆ ಇನ್ಯಾವುದೋ ಊರು, ಹೀಗೆ ಊರಿಂದ ಊರಿಗೆ ಹೋದರೂ ಪೂರ್ತಿ ತುಂಬಲಾರದ ಒಡಲು. ಕೆದರಿದ ತಲೆಯ ಹೊತ್ತು ಕುಳಿತ ಆ ಹುಡುಗಿ ಅವ್ವ ಹಾಕಿದ ಕೌದಿಯನ್ನೇ ದಿಟ್ಟಿಸುತ್ತಿದ್ದಳು. ತಮ್ಮನ ಹರಕು ಚೆಡ್ಡಿಯ ಬಟ್ಟೆ, ತಂಗಿಯ ಹಳೆಯ ಗೌನು, ಅವ್ವನ ಹರಿದ ಸೀರೆಯ ತುಣುಕು, ಅಪ್ಪನ ತುಂಡು ಪಂಚೆಯೆಂಬ ಮಾಸಿದ ಬಟ್ಟೆ ಎಲ್ಲವನ್ನೂ ಸೇರಿಸಿ ಹೊಲಿದ ಕೌದಿಯದು.

ಹೊರಗೆ ಬೀಸುತ್ತಿದ್ದ ಗಾಳಿಗೆ ಡೇರೆ ಅಲುಗಾಡುತ್ತಿತ್ತು. ಈಕೆ ಕಣ್ಣು ತೆರೆದಾಗಿನಿಂದ ಅದೇ ಡೇರೆಯಿದೆ. ಅಲ್ಲಲ್ಲಿ ತೇಪೆಗಳಿವೆ. ಹೊರಗೆ ಬೀಸೋ ಗಾಳಿಗೆ ಆರಿಸಿ ತಂದ ಪ್ಲಾಸ್ಟಿಕ್ ಚೀಲಗಳು ಹಾರಾಡುತ್ತಿವೆ. ಪೇಪರು, ನೀರಿನ ಬಾಟಲಿಗಳು, ಕುಡಿದು ಬಿಸಾಡಿದ ಬೀರ್ ಬಾಟಲಿಗಳು, ಹೆಂಡದ ಶೀಷೆಗಳು, ಒಡೆದ ಗಾಜಿನ ಚೂರುಗಳು... ಅಬ್ಬಬ್ಬಾ... ಎಂತೆಂತಹ ಬಣ್ಣಗಳು ! ಈ ಪ್ರಪಂಚದ ಜನರಲ್ಲಿ ಇನ್ನೂ ಅದೆಷ್ಟು ಸಾಮಾನುಗಳಿವೆ ! ಜಗತ್ತಿಗೆ ಅದೆಷ್ಟು ಬಣ್ಣಗಳಿವೆ !

ಯಥಾಪ್ರಕಾರ ಮೇಲಧಿಕಾರಿಗಳ ಬೈಗುಳದಿಂದ ಬಚಾವಾಗಲು ಯಾರೋ ಮಾಡಿಹೋದ ದರೋಡೆಗಾಗಿ ನೂರು ರೂಪಾಯಿ ಆಸೆ ತೋರಿಸಿ ಅಪ್ಪನನ್ನು ಒಳಗೆ ಹಾಕಿದ್ದಾರೆ. ಘಟನೆ ನಡೆದ ಕೆಲವೇ ಗಂಟೆಗಳಲ್ಲಿ ಕಳ್ಳನನ್ನು ಹಿಡಿದಿದ್ದೇವೆಂದು ಪೊಲೀಸ್ ಅಧಿಕಾರಿಯೊಬ್ಬ ಟಿ.ವಿ.ಯಲ್ಲಿ ಹೇಳಿಕೊಳ್ಳುತ್ತಿದ್ದಾನೆ.

ಅಪ್ಪ ಮಾತ್ರ ಸಂಜೆಯಾದರೂ ಸರಿಯೇ, ಜೈಲಿನ ಹೊರಗೆ ಬಿಟ್ಟರೆ ಸಾಕು ಎಂದು ಊರ ಹೊರಗಿನ ಕರಿಗುಡ್ಡದ ಬಯಲಲ್ಲಿ ಬೋನಿಡಿದು ಕುಳಿತು, ಕೌಜುಗ ತಂದು ಸಾರು ಮಾಡಿ ಉಣಬೇಕೆಂದು ತೀರ್ಮಾನಿಸಿದ್ದಾನೆ.

ಆದರೆ ಪೊಲೀಸರು ಮಾತಿಗೆ ತಪ್ಪಿದ್ದಾರೆ.

ಮಾಡಿದ ಅಪರಾಧವೇನೆಂದು ಗೊತ್ತಿರದ ಅಪ್ಪನಿಗೆ ಪೊಲೀಸರ ನೂರು ರೂಪಾಯಿಗಳು ಡೇರೆಗೆ ಮುಟ್ಟಿಲ್ಲವೆಂದು ಗೊತ್ತಿಲ್ಲ.

ಅಪ್ಪನ ಬಿಡುಗಡೆಗಾಗಿ ಅವ್ವ ಓಡಾಡುತ್ತಿದ್ದಾಳೆ.

ಹೋದ ಸಲ ಅಪ್ಪ ಹುಷಾರಿಲ್ಲದೆ ಮಲಗಿದ್ದಾಗ ಔಷಧಿಗಾಗಿ ಅವ್ವ 'ಆತನ' ಹತ್ತಿರ ಅಡವಿಟ್ಟುಕೊಂಡಿದ್ದಕ್ಕಾಗಿ ಮೂರು ದಿನಗಳ ಕಾಲ ಸೊಂಟ ನೋವೆಂದು ಮಲಗಿದ ನೆನಪಿದೆ. ಕಚ್ಚಿದ ಗಾಯಗಳಿಗೆ ಒಣಗಿದ ಮಾವಿನೆಲೆಗಳ ಸುಟ್ಟು ಕೊಬ್ಬರಿ ಎಣ್ಣೆ ಸೇರಿಸಿ ಹಚ್ಚಿದ ನೆನಪು.

ಮತ್ತೆ ಅಪ್ಪನ ಬಿಡುಗಡೆಗಾಗಿ ಅವ್ವ ಅವರಲ್ಲಿ ಅಡವಿಟ್ಟುಕೊಂಡಿದ್ದಾಳೆ. ಇದರಲ್ಲಿ ಹೊಸದೇನೂ ಇಲ್ಲ, ತಮ್ಮನಿಗೆ ಔಷಧಿ ಬೇಕೆಂದಾಗಲೆಲ್ಲಾ, ಹಬ್ಬದೂಟಕ್ಕೆ ರೊಕ್ಕ ಬೇಕೆಂದಾಗಲೆಲ್ಲಾ ಹೀಗೆ ಮಾಡಿದ್ದಿದೆ. ಅವ್ವ ದುಡಿದಿದ್ದು ನೆನಪಿದೆ.

ಅವ್ವನಿಂದ ಬಂದ ದುಡ್ಡು ವಕೀಲನ ಜೇಬು ಸೇರಿದೆ.
ಅಪ್ಪ ಜೈಲಿನ ಕಂಬಿಗಳಿಂದೀಚೆಗೆ ಬರಲಿಲ್ಲ,
ಜಗದ ಕಂಬಿಗಳಾಚೆಗೂ ಅವ್ವ ಬರಲಿಲ್ಲ.

ಅವಳು ಮಾತ್ರ ಬಂಧಿಯಂತೆ ಕುಳಿತು ಉರಿವ ಸೂರ್ಯನನ್ನು ನೋಡುತ್ತಿದ್ದಾಳೆ. ಈ ಊರು ಹೋಗು ಎನ್ನುತ್ತಿದೆ. ಆ ಊರು ಬಾ ಎನ್ನುತ್ತಿಲ್ಲ.

ಉರಿವ ಸೂರ್ಯ ದುಃಖ ತಾಳದೆ ಸರಕ್ಕನೆ ಎಲ್ಲೋ ಮರೆಯಾದ. ಜಗದ ತುಂಬ ಒಮ್ಮೆಗೆ ಕತ್ತಲು ಆವರಿಸಿತು. ಜಗತ್ತು ಆಕಳಿಸುತ್ತಾ ಮಲಗಿಬಿಟ್ಟಿತು.

ಬಿ. ಶ್ರೀನಿವಾಸ
ಶಿರಸ್ತೇದಾರ್, ಜಿಲ್ಲಾ ನ್ಯಾಯಾಲಯ, ಹಾವೇರಿ ಜಿಲ್ಲೆ

## ಸುದ್ದಿ ಚಿತ್ರ



ಮೈಸೂರಿನಲ್ಲಿ ನವಕರ್ನಾಟಕ ಪುಸ್ತಕ ಮೇಳ ನಡೆಯಿತು. ಕನ್ನಡ ಸಾಹಿತ್ಯ ಪರಿಷತ್ತಿನ ಮೈಸೂರು ಜಿಲ್ಲಾ ಅಧ್ಯಕ್ಷರಾದ ಶ್ರೀ ಮಡ್ಡಿಕೆರೆ ಗೋಪಾಲ್ (ಎಡಗಡೆಯಿಂದ ಎರಡನೆಯವರು) ಪುಸ್ತಕ ಮೇಳವನ್ನು ಉದ್ಘಾಟಿಸಿದರು.


ರಾಯಚೂರಿನಲ್ಲಿ ಜನವರಿ ೧೦ರಂದು ನವಕರ್ನಾಟಕ ಪುಸ್ತಕ ಪ್ರದರ್ಶನ ಮತ್ತು ಮಾರಾಟ ಮಳಿಗೆಯನ್ನು ಡಾ॥ ಪುಷ್ಪಾಂಜಲಿ ಮಾಲಿ ಪಾಟೀಲ್ ಉದ್ಘಾಟಿಸಿದರು. ಡಾ॥ ದಸ್ತಗೀರ್ ಸಾಬ್ ದಿನ್ನಿ ಅಧ್ಯಕ್ಷತೆ ವಹಿಸಿದ್ದರು. ಕ.ಸಾ.ಪ. ಕಾರ್ಯದರ್ಶಿ ಭೀಮನ ಗೌಡ ಇಟಗಿ ಮುಖ್ಯ ಅತಿಥಿಯಾಗಿದ್ದರು.

# ಬೊಗಸೆಯಲ್ಲಿ ಹಿಡಿದ ಮರಳು

ಎಂ. ಬಿ. ಸಾಯ್ಕ್

**ದೂ**ರದಲ್ಲೆಲ್ಲಿಂದಲೋ ಘಮ್ಮನೆಯ ಪರಿಮಳ ತೇಲಿಬಂತು. ಅಂಗಳದಲ್ಲಿ ಚಿಣ್ಣಿದಾಂಡು ಆಡುತ್ತಿದ್ದ ಕೆರಿಯಜ್ಜ, ಮಂಜಜ್ಜ, ಮಾಬ್ಲಜ್ಜನ ಮಕ್ಕಳೆಲ್ಲ ಮೂಗೆಳೆದುಕೊಂಡು ''ಆಹಾ...! ಎಂಥಾ ಪರಿಮಳ, ಕೆಂಪಜ್ಜ ಬಂದ... ಕೆಂಪಜ್ಜ ಬಂದ'' ಎಂದು ಕೂಗತೊಡಗಿದರು. ನಾನೂ ಸಹ ಹೊರಗೆ ಬಂದು ಹಣೆಗೆ ಕೈ ಹಚ್ಚಿ ನೋಡಿದೆ. ಹೌದು ಕೆಂಪಜ್ಜ ಬರುತ್ತಿದ್ದ. ಇವತ್ತು ಯಾಕೆ ಕೆಂಪಜ್ಜ ಈ ಕಡೆ ಬರುತ್ತಿದ್ದಾನೆ, ದನ ಕಾಯಲು ಹೋಗಲಿಲ್ಲವೇ, ಎಂದು ನನ್ನನ್ನು ನಾನೇ ಪ್ರಶ್ನಿಸಿಕೊಂಡೆ. ಆಗ ಥಟ್ಟನೆ ಹೊಳೆಯಿತು – ಓಹೋ... ಇವತ್ತು ಮಂಗಳವಾರ... ಕೆಂಪಜ್ಜ ಸಂತೆಗೆ ಹೊರಟಿದ್ದಾನೆ ಎನ್ನುವುದು ತಿಳಿಯಿತು.

ಮಂಗಳವಾರ ಬಂತೆಂದರೆ ಕೆಂಪಜ್ಜನಿಗೆ ರಜ. ಆ ದಿನ ಅವನು ವಾರದ ಸಾಮಾನು ಕೊಳ್ಳಲು ಸಂತೆಗೆ ಹೊರಟುಬಿಡುತ್ತಾನೆ. ಇಷ್ಟಕ್ಕೂ ಈ ಕೆಂಪಜ್ಜನೆಂದರೆ ಯಾರು ಎಂಬ ಪ್ರಶ್ನೆ ಎದುರಾಗುತ್ತದೆ. ಕೆಂಪಜ್ಜ ಹಲಸಿನಹಳ್ಳಿಯ ದನ ಕಾಯುವವ. ಕೆಂಪಜ್ಜನದು ಕಟ್ಟುನಿಟ್ಟಿನ ವ್ಯವಹಾರ. ಅವನಿಗೆ ತಿಂಗಳಿಗೆ ಬಾಲವೊಂದಕ್ಕೆ ನೂರು ರೂಪಾಯಿಯಂತೆ ಕೊಟ್ಟುಬಿಡಬೇಕು. ಬಾಲ ಎಂದರೆ ನಿಮಗೆ ಅರ್ಥವಾಗಲಿಲ್ಲವೇನೋ! ಅದು ಆಕಳಿರಲಿ, ಎಮ್ಮೆಯಿರಲಿ, ಎತ್ತು-ಕೋಣಗಳೇನೇ ಇರಲಿ; ಅವನ ಲೆಕ್ಕಾಚಾರವೆಲ್ಲ ಬಾಲಕ್ಕೆ ಸಂಬಂಧಿಸಿದ್ದು. ಊರಿನಲ್ಲಿ ಅವರದು-ಇವರದು ಅಂತ ಹದಿನೈದಿಪ್ಪತ್ತು ದನಗಳನ್ನು ಕಾಯುವುದು ಕೆಂಪಜ್ಜನ ಜವಾಬ್ದಾರಿ. ತಿಂಗಳಿಗೆ ಒಂದೂವರೆ ಸಾವಿರ ರೂಪಾಯಿಗಳಿಗೇನೂ ದೋಖಾ ಇರಲಿಲ್ಲ.

ಅಷ್ಟಕ್ಕೂ ಕೆಂಪಜ್ಜ ಇರುವುದು ಒಬ್ಬನೇ, ಅವನ ಹೆಂಡತಿ ಓರ್ವ ಪುತ್ರರತ್ನನನ್ನು ಹೆತ್ತು ಅವನ ಕೈಗಿತ್ತು ಇಹಲೋಕಕ್ಕೆ ಗುಡ್‌ಬೈ ಹೇಳಿದ್ದಳು. ಸಂಬಂಧಿಕರೆಲ್ಲಾ ''ಮತ್ತೆ ಮದುವೆ ಮಾಡಿಕೊ... ಮತ್ತೆ ಮದುವೆ ಮಾಡಿಕೋ...'' ಎಂದರೂ ತನ್ನ ಮಗನನ್ನು ಮಲತಾಯಿಯ ಕೈಯಲ್ಲಿ ಹಾಕಬಾರದೆಂದು ಬಯಸಿ ತಾನೇ ತನ್ನ ಮಗನಿಗೆ ತಂದೆ-ತಾಯಿ ಇಬ್ಬರೂ ಆಗಿ ಸಾಕಿ ಸಲಹಿದ. ಮೊದಮೊದಲೆಲ್ಲ ವಿಧೇಯನಾಗಿದ್ದ ಮಗ ಮುಖದ ಮೇಲೆ ಮೀಸೆ ಮೂಡಿದಾಗ ಅಪ್ಪನನ್ನು ಧಿಕ್ಕರಿಸಲಾರಂಭಿಸಿದ. ಕೆಂಪಜ್ಜನಿಗೆ ಇದರಿಂದ ತುಂಬ ವೇದನೆಯಾಯಿತು. ಆದರೆ ಕೆಂಪಜ್ಜ ಕಟ್ಟುನಿಟ್ಟಿನ ಮನುಷ್ಯ. ಹಾಗೆಲ್ಲ ಸುಲಭವಾಗಿ ಸೋಲೊಪ್ಪಿಕೊಳ್ಳುವವನಲ್ಲ. ಮಗನನ್ನು ದುಡಿಸತೊಡಗಿದ. ದಾರಿ ತಪ್ಪಲಿರುವ ಮಗನನ್ನು ಸರಿದಾರಿಗೆ ತರಲು ಹರಸಾಹಸ ಮಾಡಿದ. ಆದರೆ ಅಪ್ಪನ ಹಿತವಚನ ಮಗನಿಗೆ ರುಚಿಸಲಿಲ್ಲ. ಯೌವನದ ಮದ ಬೇರೆ. ಯಾರೋ ಒಬ್ಬಳನ್ನು ಕಟ್ಟಿಕೊಂಡು ಅತ್ತೆ ಮನೆಯಲ್ಲೇ ಝಂಡಾ ಹೂಡಿದ. ಆಗೊಂದಷ್ಟು ದಿನ ಕೆಂಪಜ್ಜ ಅರೆಹುಚ್ಚನಂತಾಗಿದ್ದ. ಈ ಇಳಿವಯಸ್ಸಿನಲ್ಲಿ ತನಗೆ ಯಾರೂ ಇಲ್ಲವಾಯಿತಲ್ಲ ಎಂದು ಚಡಪಡಿಸುತ್ತಿದ್ದ. ಕಾಲವು ಎಲ್ಲವನ್ನು ಮರೆಮಾಚುತ್ತದೆ ಎನ್ನುವುದು ಸುಳ್ಳಲ್ಲ. ಕ್ರಮೇಣ ಕೆಂಪಜ್ಜ ಸುಧಾರಿಸಿಕೊಂಡ. ತಾನು ಯಾರಿಗೂ ಹೆದರಬಾರದು; ಯಾರನ್ನೂ ಅವಲಂಬಿಸಿಕೊಂಡಿರಬಾರದು ಎಂದು ನಿರ್ಧರಿಸಿ ಊರಿನ ದನ ಕಾಯುವ ಕೆಲಸವನ್ನು ಒಪ್ಪಿಕೊಂಡ. ಅದರಿಂದ ಅವನಿಗೇನೂ ಹಾನಿಯಿರಲಿಲ್ಲ. ಅವನ ಜೀವನ ನಿರಾಳವಾಗಿ ಸಾಗಿ ಕೈಯಲ್ಲಿ ಒಂದಿಷ್ಟು ಕಾಸು ಮಿಗುತ್ತಿತ್ತು.

ಹೆಸರು ಕೆಂಪಜ್ಜನೆಂದಾದರೂ ಕೆಂಪಜ್ಜನೇನು ಕೆಂಪಗಿರಲಿಲ್ಲ. ಕರ್‍ರಗೆ, ಎಂದರೆ ಮಸಿಕೆಂಡದಷ್ಟು ಕಪ್ಪಗಿದ್ದ. ಕಾಶಿ ಹಾಕಿದ ಪಂಚೆ, ಅದರ ಮೇಲೊಂದು ತಾನೇ



ಹೊಲಿಸಿಕೊಂಡ ಗಂಜಿ ಪರಾಕು, ಆ ಗಂಜಿ ಪರಾಕಿಗೆ ಎದೆಯ ಮೇಲೊಂದು ಬಳಕಿಸಿ, ತಲೆಗೊಂದು ಬಿಳಿ ರುಮಾಲು, ಕಾಲಿಗೆ ತಾನೇ ಚಮಗಾರ ಬಂಗಾರಿಯ ಹತ್ತಿರ ಅಳತೆ ಕೊಟ್ಟು ಮಾಡಿಸಿಕೊಂಡ ಜರ್ಕ್-ಬುರ್ಕ್ ಎನ್ನುವ ಚಪ್ಪಲ್ಲು, ಕೋಲಿನಂಥ ಶರೀರ, ಪಾತಾಳಕ್ಕಿಳಿದ ಕಣ್ಣುಗುಡ್ಡೆಗಳಲ್ಲಿ ತೇಲಾಡುವ ಪಿಳಿ-ಪಿಳಿ ಕಣ್ಣುಗಳು ಅವರ ವ್ಯಕ್ತಿತ್ವವನ್ನು ಸಾರಿ ಹೇಳುತ್ತಿದ್ದವು. ಅತ್ತ ಗುಡಿಸಲೂ ಅಲ್ಲದ ಇತ್ತ ಹಂಚಿನ ಮನೆಯೂ ಅಲ್ಲದ ನಾಡಹಂಚಿನ ಮನೆಯೇ ಅವನ ಅರಮನೆ. ಅಡಕೆ ದಬ್ಬೆಯಿಂದ ನೇಯ್ದ ಬಾಗಿಲು, ಆ ಬಾಗಿಲಿಗೊಂದು ಚಿಲಕ; ಚಿಲಕಕ್ಕೊಂದು ಬೀಗ; ಆ ಬೀಗದ ಕೈ ಇರುವದು ಕೆಂಪಜ್ಜನ ಉಡದಾರದಲ್ಲಿ.

ಇಷ್ಟೆಲ್ಲಾ ಬಾಹ್ಯ ಚಿತ್ರಣವಿದ್ದ ಕೆಂಪಜ್ಜನಿಗೆ ಆತ್ಮೀಯ ಸ್ನೇಹಿತನೊಬ್ಬನಿದ್ದ. ಅವನ್ಯಾರೆಂದು ತಿಳಿದರೆ ನಿಮಗೆ ಅಚ್ಚರಿಯಾಗಿರಬಹುದು, ಅಲ್ಲವೇ ? ಹೇಳ್ತಿನಿ ತಾಳಿ! ಆ ಸ್ನೇಹಿತ ರಕ್ತ-ಮಾಂಸದಿಂದ ಕೂಡಿದ ವ್ಯಕ್ತಿಯಾಗಿರಲಿಲ್ಲ. ಬದಲಿಗೆ ಅದೊಂದು ನಿರ್ಜೀವ ವಸ್ತುವಾಗಿತ್ತು. ಅದೇ ಮೂರು ಸೆಲ್ಲಿನ ಫಿಲಿಪ್ಸ್ ರೇಡಿಯೋ! ಆ ರೇಡಿಯೋವನ್ನು ಕೆಂಪಜ್ಜ ಚಿಕ್ಕವನಿದ್ದಾಗ ಕೊಂಡಿದ್ದನಂತೆ. ಅದು ಹೊರನೋಟಕ್ಕೆ ಆಗ ಹೇಗಿತ್ತೋ ಈಗಲೂ ಹಾಗೆಯೇ ಇದೆ. ಆದರೆ ಆ ರೇಡಿಯೋ ರಿಪೇರಿಗೆ ಖರ್ಚು ಮಾಡಿದ ಹಣದಿಂದ ಕೆಂಪಜ್ಜ ಒಂದು ಹೊಸ ರೇಡಿಯೋ ಕೊಳ್ಳಬಹುದಿತ್ತು. ಕೆಂಪಜ್ಜನ ರೇಡಿಯೋವನ್ನು ಖರೀದಿ ಮಾಡಲು ಅನೇಕರಿಗೆ ಮನಸ್ಸಿತ್ತು. ಆದರೆ ಕೊಡುವ ಇರಾದೆ ಮಾತ್ರ ಕೆಂಪಜ್ಜನಿಗೆ ಸುತರಾಂ ಇರಲಿಲ್ಲ. ತಾನು ಹೊಡೆದುಕೊಂಡುಬಂದ ಎಲ್ಲಾ ದನಗಳನ್ನು ಒಂದು ಮೈದಾನದಲ್ಲಿ ಮೇಯಲು ಬಿಟ್ಟು ಯಾವುದಾದರೊಂದು ಮರದ ನೆರಳಿನಲ್ಲಿ ಕಂಬಳಿ ಹಾಸಿ ತಾನು ಅದರಲ್ಲಿ ರೇಡಿಯೋ ಪಿರ್ಕಿ ತಿರುಗಿಸಿದರೆ ಅದರಿಂದ ತೇಲಿಬರುವ ಇಂಪಾದ ಹಾಡುಗಳನ್ನು ಕೇಳುತ್ತಾ ಮಂತ್ರಮುಗ್ಧನಾಗಿಬಿಡುತ್ತಿದ್ದ. ಒಮ್ಮೊಮ್ಮೆ ಹೀಗೆ ಹಾಡುಗಳನ್ನು ಕೇಳುತ್ತಾ ನಿದ್ದೆಗೆ ಜಾರುವುದೂ ಇದೆ. ಅವನ ದನಕರುಗಳೂ ಅಷ್ಟೆ. ರೇಡಿಯೋದಿಂದ ನಿರಂತರವಾಗಿ ಹಾಡು ಕೇಳಿಬರುತ್ತಿದ್ದರೆ ತಾವೂ ನಿರಾಳವಾಗಿ ಮೇಯುತ್ತವೆ. ಒಂದು ವೇಳೆ ರೇಡಿಯೋದಿಂದ ಹಾಡು ಬರುವುದು ನಿಂತುಹೋದರೆ ಎಲ್ಲಾ ದನಗಳೂ ತಲೆಯೆತ್ತಿ ಕೆಂಪಜ್ಜ ಅಲ್ಲೇ ಇದ್ದಾನೋ ಇಲ್ಲವೋ ಎಂದು ನೋಡುತ್ತವೆ. ದನಗಳಿಗೆ ರೇಡಿಯೋದಿಂದ ಹಾಡು ಕೇಳುತ್ತಿರಬೇಕು ಇಲ್ಲವೇ ಕೆಂಪಜ್ಜ ಕಾಣುತ್ತಿರಬೇಕು. ಎರಡೂ ಇಲ್ಲವೆಂದಾದರೆ ದನಗಳೆಲ್ಲ ಕಂಗಾಲಾಗಿಬಿಡುತ್ತವೆ. ಬೆದರಿ ಅತ್ತ-ಇತ್ತ ಓಡುತ್ತವೆ. ಹೀಗಿದೆ ಕೆಂಪಜ್ಜ ಮತ್ತು ಅವನ ದನಕರುಗಳ ಸಂಬಂಧ.

ಹೀಗಿರುವಾಗ ರೇಡಿಯೋದಿಂದ ಪದೇ ಪದೇ ಬರುವ ಒಂದು ಜಾಹೀರಾತು ಕೆಂಪಜ್ಜನ ಮನಸ್ಸನ್ನು ಕೆಡಿಸುತ್ತದೆ. ''ಪೂಜೆಗಾಗಲಿ ಅಥವಾ ಮನೋಲ್ಲಾಸಕ್ಕಾಗಲಿ ನಾಡಿನಲ್ಲೆಲ್ಲ ಮನೆಮಾತಾಗಿರುವ ಸುಗಂಧಭರಿತವಾದ ಸರಸ್ವತಿ ಬ್ರಾಂಡ್ ಅಗರಬತ್ತಿಗಳನ್ನೇ ಉಪಯೋಗಿಸಿ. ಒಂದು ವಿಶೇಷ ಸೂಚನೆ: ಈಗ ಸರಸ್ವತಿ ಬ್ರಾಂಡ್ ಅಗರಬತ್ತಿಗಳ ಡಜ಼ನ್ನಿನ ಒಂದು ಪ್ಯಾಕ್ ಕೊಂಡರೆ ಒಂದು ಕೂಪನ್ ಕೊಡಲಾಗುವುದು. ಪ್ರತಿ ಮೂರು ತಿಂಗಳಿಗೊಮ್ಮೆ ಕೂಪನ್ ಡ್ರಾ ಮಾಡಲಾಗುವುದು. ಪ್ರಥಮ ಬಹುಮಾನ ಒಂದು ಲಕ್ಷ ರೂಪಾಯಿ ನಗದು, ದ್ವಿತೀಯ ಬಹುಮಾನ ಹೀರೋ ಹೊಂಡಾ ಮೋಟರ್ ಸೈಕಲ್, ತೃತೀಯ ಬಹುಮಾನ ಗೋದ್ರೆಜ್ ರೆಫ್ರಿಜ಼ರೇಟರ್. ಅಲ್ಲದೇ ಇನ್ನೂ ಅನೇಕ ಆಕರ್ಷಕ ಬಹುಮಾನಗಳು. ಅದೃಷ್ಟ ಯಾರಿಗುಂಟು ಯಾರಿಗಿಲ್ಲ, ನೀವೂ ಸಹ ಲಕ್ಷಾಧಿಪತಿಯಾಗುವ ಒಂದು ಸುವರ್ಣಾವಕಾಶ. ಗ್ರಾಹಕರೇ... ತಪ್ಪದೆ ಸರಸ್ವತಿ ಬ್ರಾಂಡ್ ಅಗರಬತ್ತಿ ಕೊಳ್ಳಿರಿ; ಉಚಿತ ಕೂಪನ್ ಪಡೆಯಿರಿ...'' – ಹೀಗೆ. ಗಂಟೆಗೊಮ್ಮೆ ಪ್ರಸಾರವಾಗುವ ಜಾಹೀರಾತು ಕೆಂಪಜ್ಜನ ತಲೆ ಕೆಡಿಸಿಬಿಟ್ಟಿತು. ಅವನಿಗೆ ಇತರ ಯಾವ ಬಹುಮಾನಗಳ ಮೇಲೂ ಆಶೆ ಇಲ್ಲದಿದ್ದರೂ ಒಂದು ಲಕ್ಷ ಗೆಲ್ಲುವ ಆಶೆ ಮಾತ್ರ ಉತ್ಸಾಹ ಮೂಡಿಸಿತು. ತಾನೂ ಸಹ ಊದುಬತ್ತಿ ಕೊಂಡು ಯಾಕೆ ಕೂಪನ್ ಪಡೆಯಬಾರದು? ಯಾರಿಗೆ ಗೊತ್ತು... ಬಂಪರ್ ಬಹುಮಾನ ತನಗೆ ಬಂದರೆ...!? ತನಗೆ ಒಂದು ಲಕ್ಷ ರೂಪಾಯಿ ಬಹುಮಾನ ಬಂದಂತೆ... ತಾನು ಅವನ್ನು ಹೇಗ್ಹೇಗೆ ಖರ್ಚು ಮಾಡಬಹುದು ಎಂದೆಲ್ಲಾ ಮನಸ್ಸಿನಲ್ಲೆ ಗುಣಾಕಾರ ಭಾಗಾಕಾರ ಹಾಕುತ್ತಿದ್ದ ಕೆಂಪಜ್ಜ. ಅಕಸ್ಮಾತ್ ತನಗೆ ಬಂಪರ್ ಬಹುಮಾನ ಬಂದ ಸುದ್ದಿ ಕೇಳಿ ಮಗನೇನಾದರೂ ಒಂದು ದುಡ್ಡಿನ ಸಹಾಯ ಕೇಳಿದರೆ ಒಂದು ಬಿಡಿಗಾಸು ಕೊಡಬಾರದೆಂದು ಫೈಸಲ್ ಮಾಡಿಯೂ ಆಗಿತ್ತು. ಅದಕ್ಕಾಗಿ ಅವನ ಮಿದುಳಿನಲ್ಲಿ ಊದುಬತ್ತಿ ಕೊಳ್ಳುವ ಒಂದು ಬೃಹತ್ ಯೋಜನೆ ರೂಪ ತಾಳಿತು.

ಆ ಮಂಗಳವಾರ ಸಂತೆಗೆ ಹೋದವನು ಮೊದಲು ಸರಸ್ವತಿ ಬ್ರಾಂಡ್ ಅಗರಬತ್ತಿ ಅಂಗಡಿಯನ್ನು ಹುಡುಕಿಕೊಂಡು ಹೊರಟ. ಡಜ಼ನ್ನಿಗೆ ಎಷ್ಟು ಅಂತ ಕೇಳಿದ. ಅಂಗಡಿಯವ ಅರವತ್ತು ರೂಪಾಯಿ ಎಂದ. ಕೆಂಪಜ್ಜ ತಡಮಾಡಲಿಲ್ಲ, ಎರಡು ಡಜ಼ನ್ ಕೊಡಿ ಎಂದು ನೂರಿಪ್ಪತ್ತು ರೂಪಾಯಿ ಕೊಟ್ಟ. ಅವರು ಅಗರಬತ್ತಿಯೊಂದಿಗೆ ಎರಡು ಉಚಿತ ಬಹುಮಾನದ ಕೂಪನನ್ನೂ ಸಹ ಕೊಟ್ಟರು. ಕೂಪನ್ನನ್ನು ನೋಡಿ ಕೆಂಪಜ್ಜನಿಗೆ ಒಂದು ಲಕ್ಷ ರೂಪಾಯಿ ಪಡೆದಷ್ಟೇ ಸಂತೋಷವಾಯಿತು. ಕೂಪನ್ನನ್ನು ಜೋಪಾನವಾಗಿ ಜೇಬಿಗಿಳಿಸಿದ ಕೆಂಪಜ್ಜನಿಗೆ ಉಳಿದ ಸಾಮಾನುಗಳನ್ನು ಕೊಳ್ಳಲು ರೊಕ್ಕ ಕಡಿಮೆ ಬಿತ್ತು. ಪರವಾಗಿಲ್ಲ, ಈಗ ಸ್ವಲ್ಪ ಸ್ವಲ್ಪ ಕೊಂಡರಾಯಿತು; ಮುಂದಿನವಾರ ಹೆಚ್ಚಿಗೆ ಸಾಮಾನು ಕೊಂಡರಾಯ್ತು ಎಂದು ತನಗೆ ತಾನೇ ಸಮಾಧಾನ ಮಾಡಿಕೊಂಡ. ಯಾವುದನ್ನೇ ಕೊಳ್ಳದಿದ್ದರೂ ಮೀನುಪೇಟೆಗೆ ಹೋಗಿ ಮೀನು ಕೊಳ್ಳುವುದನ್ನು ಮಾತ್ರ ಮರೆಯುವವನಲ್ಲ ಕೆಂಪಜ್ಜ. ಅಂಥವನು ಆ ವಾರ ಮೀನನ್ನು ಸಹ ಕೊಳ್ಳದೇ ನೇರವಾಗಿ ಮನೆ ದಾರಿ ಹಿಡಿದ. ಪದೇ ಪದೇ ಜೇಬು ಮುಟ್ಟಿನೋಡಿಕೊಂಡು ಕೂಪನ್ ಅಲ್ಲೇ ಇರುವುದನ್ನು ಖಚಿತಪಡಿಸಿಕೊಂಡ. ಅವನ ಮನಸ್ಸು ಸಂತೋಷದಿಂದ ಗಾಳಿಯಲ್ಲಿ ತೇಲಾಡುತ್ತಿತ್ತು. ಇನ್ನು ಸ್ವಲ್ಪ ದಿನದಲ್ಲಿ ನಾನು ಲಕ್ಷಾಧಿಪತಿ! ನನ್ನನ್ನು ಹಿಡಿಯುವವರ್ಯಾರು? ಒಂದು ಲಕ್ಷ ರೂಪಾಯಿ ಬರಲಿ. ಈ ದನಕಾಯುವ ಧಂಧೆ ಯಾರಿಗೆ ಬೇಕು? ತಿಂಗಳು ತಿಂಗಳು ಅವರ ಮನೆಬಾಗಿಲಿಗೆ ಹೋಗಿ ದನ ಕಾಯ್ದ ದುಡ್ಡು ಕೊಡಿ ಎಂದು ಅಂಗಲಾಚಬೇಕು. ಅವರು ಇಂದಿಲ್ಲ ನಾಳೆ ಬಾರೋ... ನಾಡಿದ್ದು ಬಾರೋ... ಎನ್ನುತ್ತಾರೆ. ಇನ್ನು ಕೆಲವರು ''ನಾವೇನು ಓಡಿಹೋಗ್ತೇವೇನೋ ಕೆಂಪಜ್ಜ? ಇಂದಲ್ಲ ನಾಳೆ ಕೊಟ್ಟೇ ಕೊಡ್ತೇವೆ'' ಎನ್ನುತ್ತಾರೆ. ಅವರೇನು ಧರ್ಮಕ್ಕೆ ಕೊಡ್ತಾರಾ? ಕೆಲಸ ಮಾಡಿಯಲ್ಲವಾ ನಾನು ಕೇಳೋದು? ನಾನು ಏನು ಎನ್ನುವುದನ್ನು ಅವರಿಗೆ ತೋರಿಸಬೇಕು. ಅವರಾಗೆ ಬಂದು 'ನನ್ನ ದನ ಕಾಯೋ ಕೆಂಪಜ್ಜ ಅನ್ನಬೇಕು. ಆಗ ಅವರಿಗೆ ನಾಲ್ಕು ಮಾತು ಆಡುತ್ತೇನೆ' ಎಂದು ಮನಸ್ಸಿನಲ್ಲೆ ತಾನು ಹೇಗೆ ಮಾತನಾಡಿ ಅವರಿಗೆ ಮಾತಿನ ಏಟು ಕೊಡಬೇಕೆಂಬುದನ್ನು ಕಲ್ಪಿಸಿಕೊಂಡ.

ದಿನಕಳೆದಂತೆ ಊದುಬತ್ತಿ ಕೂಪನ್ನಿನ ಪಿತ್ತ ನೆತ್ತಿಗೇರಿತು ಕೆಂಪಜ್ಜನಿಗೆ. ಪ್ರತಿ ವಾರ ಸಂತೆಗೆ ಹೋಗುವ ಕೆಂಪಜ್ಜ ತಾನು ಖರೀದಿಸುವ ಸಾಮಾನಿಗಿಂತ ಹೆಚ್ಚು ದುಡ್ಡನ್ನು ಊದುಬತ್ತಿ ಕೊಳ್ಳುವುದಕ್ಕೆ ವ್ಯಯಿಸುತ್ತಿದ್ದ. ವಾರದ ಕೊನೆಗೆ ಸಾಮಾನು ಕಡಿಮೆ ಬೀಳುತ್ತಿತ್ತು. ಎಂದೂ ಯಾರ ಮನೆಗಳಿಗೂ ಏನನ್ನೂ ಕೇಳಲು ಹೋಗದ ಕೆಂಪಜ್ಜ ಈಗೀಗ ಅಕ್ಕಪಕ್ಕದ ಮನೆಗಳಿಗೆ ಹೋಗಿ ಸ್ವಲ್ಪ ಸಕ್ಕರೆ ಕೊಡಿ, ಸ್ವಲ್ಪ ಚಹಾ ಪುಡಿ ಕೊಡಿ, ಒಂದು ಪಾವು ಅಕ್ಕಿ ಕೊಡಿ, ಉಪ್ಪು ಕೊಡಿ, ಹುಳಿ ಕೊಡಿ ಎಂದು ಕೇಳಲಾರಂಭಿಸಿದ. ಹೀಗೆ ವಾರ ವಾರ ತಂದ ಊದುಬತ್ತಿಗಳಿಂದ ಕೆಂಪಜ್ಜನ ಮನೆ ತುಂಬಿಹೋಯಿತು. ಊದುಬತ್ತಿಗಳನ್ನು ಇಡಲು ಜಾಗವೇ ಇಲ್ಲವಾಯಿತು. ಹೇಗಾದರೂ ಮಾಡಿ ಊದಬತ್ತಿಗಳನ್ನು ಖರ್ಚು ಮಾಡಬೇಕೆಂಬ ಉದ್ದೇಶದಿಂದ ದಿನಕ್ಕೆ ಎರಡು ಹೊತ್ತು ಎರಡೆರಡು ಪ್ಯಾಕ್‌ಗಳನ್ನು ಉರಿಸುತ್ತಿದ್ದ. ಆದರೂ ಊದುಬತ್ತಿ ಖರ್ಚಾಗಲಿಲ್ಲ. ಹಾಗಂತ ಕೆಂಪಜ್ಜ ಅಂಥಾ ದೈವಭಕ್ತನೇನೂ ಆಗಿರಲಿಲ್ಲ. ಅವನು ದೇವಸ್ಥಾನಗಳಿಗೆ ಹೋಗುವುದೂ ಕಡಿಮೆ. ದೇವರಿಗೆ ಕೈ ಮುಗಿಯುವ ಜಾಯಮಾನದವನಲ್ಲ. ಯಾವಾಗಲಾದರೂ ಹಬ್ಬ-ಹುಣ್ಣಿಮೆಗಳಿಗೆ ಮಾತ್ರ ಹೋಗಿ ದೇವರಿಗೆ ಕೈ ಮುಗಿಯುವವ. ಅಂಥವನ ಮನೆಯಿಂದ ಈಗ ದಿನಕ್ಕೆರಡು ಬಾರಿ ಘಮ್ಮೆನ್ನುವ ಊದುಬತ್ತಿಯ ಪರಿಮಳ...!! ಏನನ್ನಾದರೂ ತಡೆಯಬಹುದು, ಈ ಪರಿಮಳವನ್ನು ತಡೆಯಲಾದೀತೆ? ಕೆಂಪಜ್ಜನ ಮನೆಯಿಂದ ಹೊರಟ ಪರಿಮಳ ಗಾಳಿ ಬೀಸಿದ ದಿಕ್ಕಿಗೆ ಹರಡಿ ಇಡೀ ಊರನ್ನೇ ಘಮ್ಮೆನಿಸುತ್ತಿತ್ತು. ಕೆಂಪಜ್ಜನಿಗೇಕೋ ಬಹಳ ದೈವಭಕ್ತಿ ಬಂದಂತಿದೆ ಎಂದು ಊರಿನ ಜನರೆಲ್ಲ ಮಾತನಾಡಿಕೊಳ್ಳಹತ್ತಿದರು. ಆದರೆ ಕೆಂಪಜ್ಜ ಇದ್ಯಾವುದಕ್ಕೂ ತಲೆಕೆಡಿಸಿಕೊಳ್ಳಲಿಲ್ಲ, ತಾನು ಊದುಬತ್ತಿ ತರುವುದನ್ನೂ ನಿಲ್ಲಿಸಲಿಲ್ಲ. ಊರಿನಲ್ಲಿ ಯಾರ ಮನೆಗಳಲ್ಲಾದರೂ ಪೂಜೆಗೆ ಊದುಬತ್ತಿ ಇಲ್ಲವಾದರೆ ಅವರು ತಮ್ಮ ಮಕ್ಕಳನ್ನು ಸೀದಾ ಕೆಂಪಜ್ಜನ ಮನೆಗೆ ಕಳಿಸುತ್ತಿದ್ದರು. ಆ ಮಕ್ಕಳು ಕೆಂಪಜ್ಜನ ಮನೆಯ ಬಾಗಿಲಲ್ಲಿ ನಿಂತು ''ಕೆಂಪಜ್ಜ, ಪೂಜೆಗೆ ಊದುಬತ್ತಿ ಇಲ್ಲ, ಸ್ವಲ್ಪ ಊದುಬತ್ತಿ ಇದ್ದರೆ ಕೊಡು'' ಎಂದರೆ ಸಾಕು, ಕೆಂಪಜ್ಜ ಖುಷಿಯಾಗಿ ಎರಡೆರಡು ಪ್ಯಾಕೆಟ್ ಊದುಬತ್ತಿ ಕೊಟ್ಟು ಕಳುಹಿಸುತ್ತಿದ್ದ. ಅವನಿಗೆ ಊದುಬತ್ತಿಗಳನ್ನು ಖರ್ಚು ಮಾಡುವುದೇ ದೊಡ್ಡ ಸಮಸ್ಯೆಯಾಯಿತು. ಊರಿನ ಕಾಳಿಕಾ ದೇವಿಗೆ ಪ್ರತಿನಿತ್ಯ ಕೆಂಪಜ್ಜನದು ಊದುಬತ್ತಿ ಸೇವೆ.

ಹೀಗಿರುವಾಗ ಪ್ರಥಮ ಡ್ರಾಗೆ ಒಂದೇ ತಿಂಗಳು ಉಳಿಯಿತು. ಡ್ರಾ ದಿನ ಹತ್ತಿರ ಬಂದಂತೆ ಕೆಂಪಜ್ಜ ಹೆಚ್ಚು ಹೆಚ್ಚು ಊದುಬತ್ತಿ ಖರೀದಿಸಿ ಹೆಚ್ಚು ಹೆಚ್ಚು ಕೂಪನ್ನುಗಳನ್ನು ದಾಸ್ತಾನು ಮಾಡತೊಡಗಿದ. ಕೊನೆಕೊನೆಗೆ ಮನೆಗೆ ಸಾಮಾನು ತರುವುದನ್ನೇ ನಿಲ್ಲಿಸಿ ಆ ಎಲ್ಲ ಹಣವನ್ನು ಊದುಬತ್ತಿಗೆ ಸುರಿದ. ಆದರೂ ಸಮಾಧಾನವಾಗಲಿಲ್ಲ. ಪರಿಚಿತರ ಹತ್ತಿರವೆಲ್ಲಾ ನೂರು ಇನ್ನೂರು ರೂಪಾಯಿ ಸಾಲ ಮಾಡಿ ಅದರಿಂದಲೂ ಊದುಬತ್ತಿ ಖರೀದಿಸಿ ಕೂಪನ್ ಗಿಟ್ಟಿಸಿದ. ಹೀಗೆ ಅವನ ಇಡೀ ಮನೆ ಊದುಬತ್ತಿಗಳಿಂದ ತುಂಬಿಹೋಯಿತು. ಕೆಂಪಜ್ಜನ ಮನೆಯಿಂದ ಹಾದುಬರುವ ಮಂದ ತಂಗಾಳಿಯು ತನ್ನ ಜೊತೆಗೆ ತನ್ನ ಊದುಬತ್ತಿಯ ಕಂಪನ್ನು ಹೊತ್ತು ತರುತ್ತಿತ್ತು. ದಿನ ಕಳೆದಂತೆ ಕೆಂಪಜ್ಜನ ಹೆಸರಿನ ಹಿಂದೆ ಊದುಬತ್ತಿ ಎಂಬ ವಿಶೇಷಣ ಅಂಟಿಕೊಂಡು ಅವ ಈಗ 'ಊದುಬತ್ತಿ ಕೆಂಪಜ್ಜ' ಎಂಬ ಹೆಸರಿನಿಂದ ಕರೆಸಿಕೊಳ್ಳತೊಡಗಿದ.

ಕೆಲವೇ ದಿನಗಳಲ್ಲಿ ಕೆಂಪಜ್ಜ ಊದುಬತ್ತಿ ಕೆಂಪಜ್ಜನೆಂದೇ ಪ್ರಖ್ಯಾತನಾಗಿಹೋದ. ಇಡೀ ಸಿರ್ಸಿ ತಾಲೂಕಿನಲ್ಲೆಲ್ಲ ಕೆಂಪಜ್ಜನದೆ ಸುದ್ದಿ. ಅವನು ಊದುಬತ್ತಿ ಕೊಳ್ಳುವ ಅಂಗಡಿ ಮಾಲೀಕರೆಲ್ಲ ಕೇಳುತ್ತಿದ್ದರು. ''ಕೆಂಪಜ್ಜ, ನೀನು ಅಷ್ಟೊಂದು ಊದಬತ್ತಿಗಳನ್ನು ಕೊಂಡು ಏನು ಮಾಡ್ತೀಯಾ? ಕೆಂಪಜ್ಜ ನಿನಗೇ ಬಂಪರ್ ಬಹುಮಾನ ಗ್ಯಾರಂಟಿ ಬಿಡು'' ಎನ್ನುತ್ತಿದ್ದರು. ಅವರ ಯಾವ ಮಾತಿಗೂ ಕೆಂಪಜ್ಜ ಏನೊಂದೂ ಉತ್ತರ ಕೊಡುತ್ತಿರಲಿಲ್ಲ, ಆದರೆ ಇನ್ನು ಕೆಲವೇ ದಿನಗಳಲ್ಲಿ ಒಂದು ಲಕ್ಷ ರೂಪಾಯಿ ಸಿಗುತ್ತದೆ ಎಂದು ಮನದಲ್ಲೇ ಬೀಗುತ್ತಿದ್ದ. ಕೆಂಪಜ್ಜನಿಂದಾಗಿ ಊರಿನವರಿಗೆ ಸರಸ್ವತಿ ಬ್ರಾಂಡ್ ಅಗರಬತ್ತಿ ಸಿಗುತ್ತಿರಲಿಲ್ಲ, ಏಕೆಂದರೆ ಬಂದ ಊದುಬತ್ತಿಯೆಲ್ಲ ತನಗೇ ಬೇಕು ಎಂದು ಒಂದು ವಾರದ ಮೊದಲೇ ಆರ್ಡರ್ ಕೊಟ್ಟುಬಿಡುತ್ತಿದ್ದ ಕೆಂಪಜ್ಜ. ಕೆಂಪಜ್ಜ ಸರಸ್ವತಿ ಬ್ರಾಂಡ್ ಊದುಬತ್ತಿ ಕೊಳ್ಳುವ ಸುದ್ದಿ ಏಜೆಂಟರ ಮೂಲಕ ಕಂಪನಿಯವರಿಗೆ ತಿಳಿಯಿತು

## ಹಾಯ್ಕುಗಳು

ತೋಟದ ಮಲ್ಲಿಗೆಯ ಕಂಪು
ಬೇಲಿಯ ಲಂಟಾನ ಹೂಗಳ
ಸೊಬಗಿಗೆ ಮಾರುಹೋಗಿದೆ.

ಡಾ|| ಸಿ. ರವೀಂದ್ರನಾಥ್
ನಂ. ೧೩೩, ೬ನೇ ಕ್ರಾಸ್
೨ನೇ ಹಂತ, ಬೃಂದಾವನ ಬಡಾವಣೆ
ಮೈಸೂರು

ತಡವಾಗಲಿಲ್ಲ. ಕಂಪನಿಯ ಮಾಲೀಕರು ತಮ್ಮ ನೆಚ್ಚಿನ ಗ್ರಾಹಕನನ್ನು ನೋಡಲು ಮೈಸೂರಿನಿಂದ ನೇರವಾಗಿ ಹಲಸಿನಹಳ್ಳಿಗೆ ಬಂದರು. ಕೆಂಪಜ್ಜನನ್ನು ಸಂದರ್ಶಿಸಿದರು. ಕೆಂಪಜ್ಜ ಮೌನವಾಗಿ ನಿಂತನೇ ಹೊರತು ಅವರು ಕೇಳಿದ ಯಾವ ಪ್ರಶ್ನೆಗೂ ಉತ್ತರ ಕೊಡಲಿಲ್ಲ. ಅವನ ಕಣ್ಣೆದುರಿಗೆ ಒಂದು ಲಕ್ಷ ರೂಪಾಯಿ ಕುಣಿಯುತ್ತಿತ್ತೆ ವಿನಾ ಬೇರೆ ಯಾವುದೇ ವಿಷಯದ ಕಡೆಗೂ ಗಮನವಿರಲಿಲ್ಲ. ಸರಸ್ವತಿ ಬ್ರಾಂಡ್ ಅಗರಬತ್ತಿಯ ಬಗ್ಗೆ ಅವರ ಅಭಿಪ್ರಾಯ ಕೇಳಿ ಅವನ ಮುಖಕ್ಕೆ ಮೈಕ್ ಹಿಡಿದರು. ನೀವು ನಮ್ಮ ಬ್ರಾಂಡಿನ ಊದುಬತ್ತಿಯನ್ನು ಹೆಚ್ಚು ಹೆಚ್ಚು ಕೊಳ್ಳಲು ಕಾರಣವೇನೆಂದು ಕೇಳಿದರು. ಆದರೆ ಕೆಂಪಜ್ಜನಿಂದ ಯಾವ ಪ್ರಶ್ನೆಗೂ ಉತ್ತರ ಸಿಗಲಿಲ್ಲ. ನಾಲ್ಕಾರುಬಾರಿ ಕೆಂಪಜ್ಜನನ್ನು ವಿವಿಧ ಭಂಗಿಗಳಲ್ಲಿ ನಿಲ್ಲಿಸಿ ಫೋಟೋ ತೆಗೆಸಿಕೊಂಡರು. ಕೆಂಪಜ್ಜನ ಅಭಿಪ್ರಾಯಗಳನ್ನು ಅರಿಯದ ಕಂಪನಿಯವರು ಬಂದ ದಾರಿಗೆ ಸುಂಕವಿಲ್ಲದಂತೆ ವಾಪಸ್ ತೆರಳಿದರು. ಇಡೀ ಊರು ತುಂಬ ಕೆಂಪಜ್ಜನದೇ ಸುದ್ದಿ. ಕೆಂಪಜ್ಜನನ್ನು ಸಂದರ್ಶಿಸಲು ಕಂಪನಿಯವರು ಬಂದಿದ್ದರಂತೆ. ಈ ಸಲ ಕೆಂಪಜ್ಜನಿಗೆ ಬಂಪರ್ ಬಹುಮಾನ ಗ್ಯಾರಂಟಿಯಂತೆ, ಕೆಂಪಜ್ಜನ ಅದೃಷ್ಟವೋ ಅದೃಷ್ಟ ಎಂದು ಎಲ್ಲರೂ ಕೆಂಪಜ್ಜನನ್ನು ಕೊಂಡಾಡಿದರು.




ಇನ್ನೇನು ಡ್ರಾಗೆ ಒಂದು ವಾರ ಉಳಿದಿದೆ ಎನ್ನುವಾಗ ಕೆಂಪಜ್ಜನೂ ತಡಮಾಡಲಿಲ್ಲ. ತನ್ನ ಮುರುಕುಮನೆ ಮತ್ತು ಎರಡು ಗುಂಟೆ ಜಾಗವನ್ನು ಸಾಹುಕಾರ ರಂಗಪ್ಪನಲ್ಲಿ ಅಡವು ಹಾಕಿ ಹತ್ತು ಸಾವಿರ ರೂಪಾಯಿ ಸಾಲ ತಂದ. ಹಣ ಸಿಕ್ಕಿದ ಮರುದಿನವೇ ಪೇಟೆಗೆ ಹೋಗಿ ಅಷ್ಟು ರೊಕ್ಕಕ್ಕೂ ಊದುಬತ್ತಿ ಖರೀದಿಸಿ ಬಾಡಿಗೆ ಪಿಕ್‌ಅಪ್ ವ್ಯಾನಿನಲ್ಲಿ ಹೇರಿಕೊಂಡು ಬಂದ. ಅಷ್ಟೊಂದು ಊದುಬತ್ತಿಗಳನ್ನು ನೋಡಿದ ಜನ ಕೆಂಪಜ್ಜನಿಗೆ ನಿಜವಾಗಿಯೂ ಹುಚ್ಚು ಹಿಡಿದಿದೆ ಎಂದು ಮಾತನಾಡಿಕೊಂಡರು. ಜನರ ಯಾವ ಮಾತಿಗೂ ತಲೆಕೆಡಿಸಿಕೊಳ್ಳದ ಕೆಂಪಜ್ಜ ತಾನು ಮಾತ್ರ ನಿರ್ಲಿಪ್ತನಾಗಿದ್ದ. ಈಗಂತೂ ಕೆಂಪಜ್ಜನ ಮನೆಯಲ್ಲಿ ಕಾಲಿಡುವುದಕ್ಕೂ ಸ್ಥಳವಿಲ್ಲವಾಯಿತು.

ಅಂತೂ ಇಂತೂ ಡ್ರಾ ದಿನ ಬಂದೇಬಿಟ್ಟಿತು. ಕೆಂಪಜ್ಜನಿಗೆ ಟೆನ್ಷನ್ನೋ ಟೆನ್ಷನ್ನು. ಕುಂತಲ್ಲಿ ಕೂರಲಾರ, ನಿಂತಲ್ಲಿ ನಿಲ್ಲಲಾರ. ರಾತ್ರಿಯೆಲ್ಲ ನಿದ್ದೆಯಿಲ್ಲದೇ ಹೊರಳಾಡಿದ. ಹಾಗೂ ಹೀಗೂ ಸ್ವಲ್ಪ ಕಣ್ಣುಮುಚ್ಚಿದರೂ ಸಾಕು ಲಕ್ಷ ರೂಪಾಯಿಗಳ ರುದ್ರತಾಂಡವ. ಎಂದು ಬೆಳಗಾಗುತ್ತದೋ ಎಷ್ಟು ಹೊತ್ತಿಗೆ ಪೇಟೆಗೆ ಹೋಗಿ ರಿಸಲ್ಟ್ ನೋಡುವೆನೋ, ಎಷ್ಟೊತ್ತಿಗೆ ಲಕ್ಷ ರೂಪಾಯಿ ತರುವೆನೋ ಎಂಬ ಕಾತರ. ಹಾಗೂ ಹೀಗೂ ಬೆಳಕು ಹರಿಯಿತು. ಸೂರ್ಯದೇವನಿಗೂ ಇಂದು ಹೊಸ ಹುರುಪು, ಹುಮ್ಮಸ್ಸು, ನವೋಲ್ಲಾಸದಿಂದ ಕೆಂಪಜ್ಜನ ಮನೆಗೆ ಹಣಕಿ ಹಾಕಿದ. ಏಕೆಂದರೆ ಅವನಿಗೂ ಗೊತ್ತು – ಇವತ್ತು ಕೆಂಪಜ್ಜನಿಗೆ ಬಹುಮಾನ ಬರುವುದಿದೆ ಎಂದು. ಕೆಂಪಜ್ಜನು ಬೆಳಿಗ್ಗೆ ಎದ್ದವನೆ ತನ್ನ ನಿತ್ಯಕರ್ಮಗಳನ್ನೆಲ್ಲ ಬೇಗ ಬೇಗ ಮುಗಿಸಿ ತನ್ನ ಬಹುಮಾನ ಕೂಪನ್ನುಗಳೊಂದಿಗೆ ಪೇಟೆಗೆ ಹೊರಡಲು ಅಣಿಯಾದ. ಪೇಟೆಗೆ ಹೋಗಲು ಎಂದೂ ತನ್ನ ಕಾಲುಗಾಡಿಯನ್ನೇ ನಂಬಿದವನು ಕೆಂಪಜ್ಜ. ಆದರೆ ಇಂದು ಮಾತ್ರ ಟೆಂಪೊ ಬರುವಿಗಾಗಿ ಕಾದ. ಆದರೆ ಒಂಬತ್ತು ಗಂಟೆಗೆ ಬರಬೇಕಾಗಿದ್ದ ಟೆಂಪೊ ಒಂಬತ್ತೂವರೆಯಾದರೂ ಬರಲಿಲ್ಲ. ಕೆಂಪಜ್ಜನಿಗೆ ತಡೆಯಲಾರದ ಚಡಪಡಿಕೆ. ಬಾಲ ಸುಟ್ಟ ಬೆಕ್ಕಿನಂತೆ ಅತ್ತಿಂದಿತ್ತ ಇತ್ತಿಂದತ್ತ ಅಡ್ಡಾಡುತ್ತಿದ್ದ. ಸಮಯಕ್ಕೆ ಸರಿಯಾಗಿ ಬಾರದ ಟೆಂಪೊವಿಗೆ ಹಿಡಿಶಾಪ ಹಾಕಿದ. ಈ ಟೆಂಪೊಗೆ ಕಾದು ಕುಳಿತರೆ ಪ್ರಯೋಜನವಿಲ್ಲ, ತನ್ನ ಕಾಲುಗಾಡಿಯನ್ನೇ ಬಿಡುವದು ಒಳ್ಳೆಯದೆಂದು ಆಲೋಚಿಸುತ್ತಿರುವಂತೆ ಟೆಂಪೊ ಬಂತು. ಟೆಂಪೊ ನಿಂತಿದ್ದೇ ತಡ ಎಲ್ಲರಿಗಿಂತ ಮೊದಲಿಗನಾಗಿ ತಾನೇ ಟೆಂಪೊ ಹತ್ತಿ ಕುಳಿತು ನಿಡಿದಾದ ಉಸಿರುಬಿಟ್ಟ. ಅವನ ತಲೆಯ ತುಂಬ ನೂರಾರು ಕನಸುಗಳು ಒಂದರ ಹಿಂದೊಂದರಂತೆ ಮೂಡಿ ಮಾಯವಾಗುತ್ತಿದ್ದವು. ಈ ಕನಸುಗಳ ತಾಕಲಾಟದಲ್ಲಿ ಅವನಿಗೆ ಟೆಂಪೊ ಸ್ಟ್ಯಾಂಡಿಗೆ ಬಂದು ನಿಂತಿದ್ದೇ ತಿಳಿಯಲಿಲ್ಲ. ಎಲ್ಲರೂ ದಡಬಡಿಸಿ ಇಳಿಯುವಾಗ ತಾನೂ ಇಳಿದ ಕೆಂಪಜ್ಜ ಒಂದೇ ಸಮನೆ ಓಟ ಕಿತ್ತ ಊದಬತ್ತಿ ಏಜೆಂಟನಲ್ಲಿಗೆ. ಊದಬತ್ತಿ ಏಜೆಂಟನೂ ಸಹ ಕೆಂಪಜ್ಜನ ನಿರೀಕ್ಷೆಯಲ್ಲಿದ್ದನೆಂದು ಕಾಣುತ್ತದೆ. ಕೆಂಪಜ್ಜನನ್ನು ನೋಡಿದೊಡನೆ ''ಕೆಂಪಜ್ಜ... ನಿನಗಾಗೇ ಕಾಯ್ತಿದ್ದೆ. ಯಾಕಿಷ್ಟು ಲೇಟು ?'' ಎಂದು ಆಕ್ಷೇಪಿಸಿದ್ದಕ್ಕೆ ಏನೊಂದೂ ಮಾತನಾಡದ ಕೆಂಪಜ್ಜ ತನ್ನ ಗಂಜಿ ಪರಾಕಿನ ಜೇಬಿನಿಂದ ಟಿಕೇಟ್‌ಗಳ ಕಂತೆಯನ್ನು ತೆಗೆದು ಏಜೆಂಟನ ಕೈಗಿತ್ತ. ತನ್ನೆದುರಿಗೆ ಪೇಪರ್ ಹರಡಿಕೊಂಡ ಏಜೆಂಟ ಕೆಂಪಜ್ಜನ ಒಂದೊಂದೇ ಟಿಕೇಟನ್ನು ಪರಿಶೀಲಿಸುತ್ತ ''ಕೆಂಪಜ್ಜ, ಈ ಕೂಪನ್ನಿಗೆ ಇಲ್ಲ... ಈ ಕೂಪನ್ನಿಗೆ ಇಲ್ಲ'' ಎಂದು ಹೇಳತೊಡಗಿದ. ಕೆಂಪಜ್ಜನ ಮುಖದಲ್ಲಿ ಆತಂಕ ಮಡುಗಟ್ಟಿತ್ತು. ಎಲ್ಲಿ ಬಂಪರ್ ಬಹುಮಾನ ಕೈತಪ್ಪಿ ಹೋಗುತ್ತದೆಯೋ ಎಂಬ ಆತಂಕ ಕೆಂಪಜ್ಜನಿಗೆ. ಹತ್ತಾಯಿತು, ಇಪ್ಪತ್ತಾಯಿತು, ಐವತ್ತಾಯಿತು, ನೂರಾಯಿತು, ಇನ್ನೂರಾಯಿತು, ಇನ್ನೂರೈವತ್ತಾಯಿತು... ಊಹೂಂ... ಯಾವ ಕೂಪನ್ನಿಗೂ ಬಹುಮಾನವಿಲ್ಲ. ''ಅಯ್ಯೋ ಕೆಂಪಜ್ಜಾ... ನಿನಗೆ ಹೀಗಾಗಬಾರದಿತ್ತೋ... ಆ ದೇವರಿಗೆ ಸ್ವಲ್ಪಾನೂ ಕರುಣೇನೇ ಇಲ್ವಲ್ಲಾ'' ಎಂಬ ಅನುಕಂಪದ ಮಾತುಗಳು ಏಜೆಂಟನಿಂದ. ಕೆಂಪಜ್ಜ ಮಾತ್ರ ಅವನಾಡಿದ ಮಾತುಗಳ್ಯಾವವು ತನಗಲ್ಲ ಎಂಬಂತೆ ಕೂಪನ್ನುಗಳ ಮೇಲೆ ದೃಷ್ಟಿ ನೆಟ್ಟಿದ್ದ. ಕೂಪನ್ನುಗಳೆಲ್ಲಾ ಖಾಲಿಯಾಗ್ತಾ ಬಂತು. ಕೊನೆಗೆ ಬಂತು ಇನ್ನೂರ ತೊಂಬತ್ತೆಂಟನೇ ಕೂಪನ್. ''ಕೆಂಪಜ್ಜ ಬಹುಮಾನ ಸಿಕ್ತು'' ಎಂದು ಕೂಗಿದ ಏಜೆಂಟ್, 'ಯಾವ ಬಹುಮಾನ ?' ಕೇಳಿದ ಕೆಂಪಜ್ಜ. ''ಇಸ್ತ್ರಿ ಪೆಟ್ಟಿಗೆ'' ಎಂದ ಏಜೆಂಟ್. ಅಷ್ಟು ಕೇಳಿದ್ದೇ ತಡ ಕೆಂಪಜ್ಜನ ತಲೆ ಗಿರ್ರೆಂದಿತು. ಅಲ್ಲೇ ಕುಸಿದು ಕುಳಿತ ಕೆಂಪಜ್ಜ. ಗಡಬಡಿಸಿದ ಏಜೆಂಟ್ ಅವನ ಮುಖಕ್ಕೆ ನೀರು ಚಿಮುಕಿಸಿದ ''ಏಳು ಕೆಂಪಜ್ಜ... ಏನಾಯ್ತು... ಏನಾಯ್ತು ?'' ಎಂದು ಕೆಂಪಜ್ಜನನ್ನು ಅಲ್ಲಾಡಿಸಿ ಕೇಳಿದ. ''ಮೋಸ, ಎಲ್ಲಾ ಮೋಸ, ಎಲ್ಲರೂ ಮೋಸಗಾರರು'' ಎಂದು ಕೆಂಪಜ್ಜ ಹಲುಬತೊಡಗಿದ. ಅವನ ಕಣ್ಮುಂದೆ ಲಕ್ಷ ರೂಪಾಯಿ ಕುಣಿದಾಡುತ್ತಿತ್ತು. ಆದರೆ ಕೆಂಪಜ್ಜನ ಕೈಗೆ ಮಾತ್ರ ಸಿಗುತ್ತಿರಲಿಲ್ಲ. ಕೆಂಪಜ್ಜ ಲಕ್ಷ ರೂಪಾಯಿಯನ್ನು ಹಿಡಿಯಲು ಓಡಿಯೇ ಓಡಿದ.

ಮನೆಗೆ ಬಂದ ಕೆಂಪಜ್ಜ ಅಲ್ಲಿದ್ದ ಊದಬತ್ತಿ ರಾಶಿಗಳನ್ನು ನೋಡಿದ. ಊದಬತ್ತಿಗಳೆಲ್ಲ ಕುಣಿದು ಕುಣಿದು ಕೆಂಪಜ್ಜನನ್ನು ಅಣಕಿಸುತ್ತಿದ್ದವು. ಅದನ್ನೆಲ್ಲ ನೋಡಿದ ಕೆಂಪಜ್ಜನ ಪಿತ್ತ ನೆತ್ತಿಗೇರಿತು. ''ನನ್ನನ್ನು ಅಣಕಿಸ್ತಿಯಾ ? ಈಗ ಮಾಡ್ತೀನಿ ತಾಳು'' ಎಂದವನೇ ಕಿಸೆಯಿಂದ ಬೆಂಕಿಪೊಟ್ಟಣ ತೆಗೆದು ಊದಬತ್ತಿ ಬಂಡಲ್‌ಗೆ ಬೆಂಕಿ ಹಚ್ಚಿದ. ಕ್ಷಣ ಮಾತ್ರದಲ್ಲಿ ಅಲ್ಲಿದ್ದ ಎಲ್ಲ ಊದಬತ್ತಿಗಳನ್ನು ಸ್ವಾಹಾ ಮಾಡಿದ ಬೆಂಕಿಯ ಜ್ವಾಲೆ ಕೆಂಪಜ್ಜನ ಮನೆಯನ್ನು ಇಂಚಿಂಚಾಗಿ ನುಂಗತೊಡಗಿತು. ಕೆಂಪಜ್ಜನ ಮನೆಗೆ ಬೆಂಕಿ ಹತ್ತಿಕೊಂಡಿದ್ದನ್ನು ನೋಡಿದ ಜನರು ''ಬೆಂಕಿ ! ಬೆಂಕಿ !!'' ಎಂದು ಕೂಗುತ್ತ ಬಂದು ಸೇರುವುದರೊಳಗೆ ಕೆಂಪಜ್ಜನ ಗುಡಿಸಲು ಸುಟ್ಟು ಭಸ್ಮವಾಗಿತ್ತು. ಕೆಂಪಜ್ಜ ಮಾತ್ರ ನಿಶ್ಚಿಂತನಾಗಿದ್ದ. ''ಸರಸ್ವತಿ ಬ್ರಾಂಡ್ ಊದಬತ್ತಿ ಕೊಳ್ಳಿರಿ... ಲಕ್ಷ ರೂಪಾಯಿ ಬಹುಮಾನ ಗೆಲ್ಲಿರಿ'' ಎಂದು ಚಪ್ಪಾಳೆ ತಟ್ಟಿ ಕುಣಿಯಲಾರಂಭಿಸಿದ ಕೆಂಪಜ್ಜ.

ಎಂ. ಬಿ. ನಾಯ್ಕ್
ಕೇರಾಫ್ : ರಾಮಶೆಟ್ಟಿ, ೬ನೇ ಅಡ್ಡರಸ್ತೆ, ಶಾಂತಿನಗರ
ಕಾವೇರಿ ಪ್ರೌಢಶಾಲೆ ಹಿಂಭಾಗ, ತಮಲಾಪುರ, ಹಾಸನ - ೫೭೩ ೨೦೧

# ಧಾರವಾಡ ಕಲ್ಮಿ ಮಾವು



ಉಡುಪಿ-ಮಂಗಳೂರು ಕಡೆ ಹೆಸರುವಾಸಿಯಾದ ಮುಂಡಪ್ಪ ಮಾವಿನ ಹಣ್ಣಿನಂತೆ, ಉತ್ತರ ಕರ್ನಾಟಕದಲ್ಲಿ ಧಾರವಾಡ ಕಲ್ಮಿ ಮಾವು ಜಯಭೇರಿ ಹೊಡೆದಿದೆ. ಧಾರವಾಡ ಹೆಸರೆತ್ತಿದರೆ ಥಟ್ಟಂತ ನೆನಪಾಗೋದು ಲಾಯಿನ್ ಬಜಾರ ಪೇಡೆ. ಧಾರವಾಡಕ್ಕೆ ಬಂದವರು ಕ್ಯೂನಲ್ಲಿ ನಿಂತು, ೧-೨ ಕೆ.ಜಿ. ಪೇಡೆ ಒಯ್ಯೋದು ಸರ್ವೇಸಾಮಾನ್ಯ. ಮಾವಿನ ಸುಗ್ಗಿ ಬಂತೆಂದರೆ ಮುಗೀತು. ಪೇಡೆ ಸಂಗಡ ೧-೨ ಡಜನ ಧಾರವಾಡ ಕಲ್ಮಿ ಒಯ್ಯೋದು ಸಹಜ. ಮೇ-ಜೂನ್ ಬಂತೆಂದರೆ ಮಾರ್ಕೆಟ್ ತುಂಬ ಕಣ್ಣು ಕೋರೈಸುವ, ರಾಸಿ-ರಾಸಿ ಧಾರವಾಡ ಕಲ್ಮಿ ಮಾವು. ಅದರದೇ ದರ್ಬಾರು! ಮಾವಿನ ಸುಗ್ಗಿ ಕಾಲಿಡುತ್ತಿದ್ದಂತೆ, ಹುಬ್ಬಳ್ಳಿ ಈದ್ಗಾ ಮೈದಾನದ ತುಂಬಾ ಟೆಂಟು ಅಂಗಡಿಗಳು ನಾಯಿಕೊಡೆಗಳಂತೆ ತಲೆಎತ್ತುತ್ತವೆ. ಎಳವೆಯಿಂದಲೇ ನನಗೆ ಧಾರವಾಡ ಕಲ್ಮಿ ಮಾವು ತಿನ್ನುವ ಗೀಳು.

ಅದೊಂದು ದಿನ ನಾನು ಸಡಗರದಿಂದ ಸಂಬಂಧಿಕರ ಮದುವೆಗೆಂದು ಗದಗನಿಂದ ಹುಬ್ಬಳ್ಳಿಗೆ ತೆರಳಿದ್ದೆ. ಮದುವೆಯ ಕಾರ್ಯಕಲಾಪಗಳೆಲ್ಲಾ ಮುಕ್ತಾಯವಾದ ಕೂಡಲೆ ಫಕ್ಕನೆ ನನಗೆ ಧಾರವಾಡ ಕಲ್ಮಿ ನೆನಪಾಯಿತು. ನಾನು ಸೀದಾ ಈದ್ಗಾ ಮೈದಾನಕ್ಕೆ ಹಾರಿದೆ. ಒಂದು ಅಂಗಡಿಮುಂದೆ ನಿಂತು, ಹಣ್ಣಿನ ವ್ಯಾಪಾರಿಯನ್ನು ವಿಚಾರಿಸಿದೆ.

''ಏನಪ್ಪಾ, ನಿನ್ಹತ್ರ ಏನಾರ ಧಾರವಾಡ ಕಲ್ಮಿ ಹಣ್ಣು ಅದಾವೇನು ? ನನ್ಗೆ ಒರಿಜಿನಲ್ ಧಾರವಾಡ ಕಲ್ಮೀನ ಬೇಕು. ಮತ್ತ ಅದ್ರಾಗ ಹುಳಿ, ಜುಬ್ರ ಬಿಲ್‌ಕುಲ್ ಇರಬಾರ್ದು'' ಎಂದು ಅವನಿಗೆ ತಾಕೀತು ಮಾಡಿದೆ.

''ಸಾಹೇಬ್ರ, ನನ್ ಹಂತೇಕ ಇರಾವೆಲ್ಲ ಚೊಕ್ಕ ಧಾರವಾಡ ಕಲ್ಮಿ ಮಾವು. ಬ್ಯಾರೆ ಜಾತೀವು ನಿಮ್ಗೆ ನೋಡೆನೆಂದ್ರೂ ಸಿಗಾಕಿಲ್ಲ. ಇನ್ನೊಂದು ಮಾತು. ಹಣ್ಣಿನ ದರದಾಗ ಚೌಕಾಸಿ ಇಲ್ಲ. ಮಾವಿನ ರೇಟು ಪಾತಾಳಕ್ಕೆ ಕುಸಿದಾವು. ನಾನು ಮೊದ್ಲು ನಿಮ್ಗೆ ಸ್ಯಾಂಪಲ್ ಕೊಡ್ತೀನಿ. ಅದನ್ ತಿಂದಮ್ಯಾಲೆ ರೊಕ್ಕ ಕೊಡ್ರಿ.'' ಹಣ್ಣಿನವ ಹರಿತ ನಾಲಿಗೆ ಹರಿಬಿಟ್ಟ. ಅವನು ಚಕ್ಕನೇ ಒಂದು ಹೋಳು ಸ್ಯಾಂಪಲ್ಲಿಗೆ ಕೊಟ್ಟ. ನಾನು ಸ್ಯಾಂಪಲ್ ಸವಿದ ಮ್ಯಾಲೆ ಹೀಗೆ ಪ್ರತಿಕ್ರಿಯಿಸಿದೆ :

''ವ್ಹಾಹ್... ಸುಪರ್...! ಬೆಳಗಾವಿಯ ಬೆಲ್ಲ ತಿಂದ ಅನುಭವ! ಏನದರ ಸ್ವಾದ, ಪರಿಮಳ ವರ್ಣಿಸಲಸದಳ. ಇದಕ್ಕ ಅಂತಾರಪ್ಪಾ ಧಾರವಾಡ ಕಲ್ಮಿ'' ಏನೇನೋ ಬಡಬಡಿಸಿದೆ. ರೋಗಿ ಬಯಸಿದ್ದು, ಡಾಕ್ಟರ್ ಹೇಳಿದ್ದು ಹಾಲು-ಅನ್ನ. ಮತ್ತೇನು ಬೇಕು ? ''ಸರಿ ಬಿಡು. ಸ್ಯಾಂಪಲ್ ಕೊಟ್ಟ ಹಣ್ಣನ್ನೇ ಎಲ್ಡು ಡಜನ್ ಗಡಾನ ಪ್ಯಾಕ್ ಮಾಡು. ಹಾಳು-ಮೂಳು ಬೆರಕೆ ಮಾಡಬ್ಯಾಡ ಮತ್ತ'' ಗತ್ತಿನಿಂದಲೇ ಆರ್ಡರ್ ಮಾಡಿದೆ. ಅವನು ಕೋಲೆಬಸವನಂತೆ ತಲೆಯಾಡಿಸಿದ. ಹಣ್ಣಿನ ಬುಟ್ಟಿ ಹಿಡಿದುಕೊಂಡು ಬಸ್ ಹಿಡಿಯಲು ತರಾತುರಿಯಲ್ಲಿ ದಾರಿ ತುಳಿದೆ.

ಒಂದು ವಾರದ ಮೇಲೆ, ಹುಬ್ಬಳ್ಳಿಗೆ ಹೋಗುವ ಅವಕಾಶ ನನ್ನನ್ನೆ ಹುಡುಕಿಕೊಂಡು ಬಂತು. ನಾನು ಹುಬ್ಬಳ್ಳಿಗೆ ಹೋಗಿ, ಅಲ್ಲಿಯ ಕೆಲಸವನ್ನು ಮುಗಿಸಿದ ನಂತರ, ಧಾರವಾಡ ಕಲ್ಮಿ ಛಕ್ಕಂತ ನೆನಪಾಯಿತು. ಕಾಲುಗಳು ನನ್ನನ್ನು ಎಳೆದುಕೊಂಡು, ಸೀದಾ ಈದ್ಗಾ ಮೈದಾನಕ್ಕೆ ಹೋಗಿ, ಅದೇ ಹಣ್ಣಿನ ಅಂಗಡಿಯ ಎದುರುಗಡೆ ನಿಲ್ಲಿಸಿತು. ಹಣ್ಣಿನ ವ್ಯಾಪಾರಿ ನನ್ನನ್ನು ಫಕ್ಕನೆ ಗುರುತುಹಿಡಿದು, ಕಣ್ಣಸನ್ನೆಯಲ್ಲೇ ಇದಿರ್ಗೊಂಡ. ನಾನು ಕಾಲರ್ ಅಪ್ ಮಾಡಿ, ಗತ್ತಿನಲ್ಲೆ ಹೇಳಿದೆ :

''ನೋಡಪ್ಪಾ ನಾ ಹೋದ್ಸಲ ಬಂದಾಗ ನೀ ಕೊಟ್ಟ ಹಣ್ಣು ಅಗ್ದೀ ಬೇಸಿದ್ವು. ಮನೆಮಂದಿಯಲ್ಲಾ ಅವ್ನ ಬಡ್ಕೊಂಡು ತಿಂದ್ರು. ಬಲ್ಲೆ... ಬಲ್ಲೆ... ಅಂತಾ ಕುಣಿದಾಡೋವಷ್ಟು ಖುಷಿ. ಅಂಥ ಹಣ್ಣು ಸಿಕ್ರ ತರಾಕ ವರಾತ ಹಚ್ಯಾರ. ಎಲ್ಡು ಡಜನ್ ಒರಿಜಿನಲ್ ಧಾರವಾಡ ಕಲ್ಮೀನ ಸಟ್ನೆ ಪ್ಯಾಕ್ ಮಾಡಪ್ಪಾ. ನನ್ಗೆ ಊರಿನ ಬಸ್ ಹಿಡಿಯಾಕ ತಡ ಆಕೈತಿ. ಕಳಪೆ ಮಟ್ಟದ್ದು ಕೊಡಬ್ಯಾಡ.'' ವ್ಯಾಪಾರಿಯ ಮುಖ ನನ್ ಹೊಗಳಿಕೆಗೆ ಹಿಗ್ಗಿ ಹೀರೇಕಾಯಿಯಾಯ್ತು.

''ಸಾಹೇಬ್ರ ಒಂದ್ಸಲ ನನ್ ಅಂಗಡ್ಯಾಗ ಹಣ್ಣು ಒಯ್ದೋರು ನಿಮ್ಹಾಂಗ ಇನ್ನೊಂದ್ಸಲ ಬರಾಕಬೇಕು'' ಎಂದು ಒದರಿ ಪಕಪಕ ನಕ್ಕ. ಆ ನಗೆಯಲ್ಲಿ ಕೊಂಡಾಟವಿತ್ತೋ ಇಲ್ಲಾ ಕೊಂಕಿತ್ತೋ ಒಂದೂ ತಿಳಿಯಲಿಲ್ಲ.

ಅವನು ಹೊಸಾದೊಂದು ಪೆಟ್ಟಿಗೆಯಿಂದ, ಹಣ್ಣು ಎಣಿಸಿ, ಪ್ಯಾಕ್ ಮಾಡಿ ನನ್ನೆದುರು ಇಟ್ಟ. ''ಸಾರ್, ಕಾಲ್ಕೀಳಾಕಿಂತ ಮೊದ್ಲು ಯಾವ್ದಕ್ಕೂ ಸ್ಯಾಂಪಲ್ ನೋಡೋದು ವಾಸಿ ಅಲ್ವಾ? ಒಂದ್ನಿಮಿಷ ತಡ್ರಿ'' ಎಂದು ಹೇಳಿ, ಚಾಕೂಗೆ ತಡಕಾಡಿದ. ಆಗ ನಾನು ಸ್ಯಾಂಪಲ್ ನೋಡಲು ಸಹಕರಿಸಲಿಲ್ಲ.

''ಹೋಗ್ಲಿಬಿಡಪ್ಪಾ, ಯಾಕ್ಬೇಕು ಅದೆಲ್ಲಾ? ನನ್ಗೆ ಗೊತ್ತು ನೀ ಅಚ್ಚುಮೆಚ್ಚಾಗಿರೋ ಹಣ್ಣನ್ ಪ್ಯಾಕ್ ಮಾಡ್ತೀ ಅಂತ. ಆದ್ರ ನೀ ಒಂದು ಮಾತನ್ ನೆನ್ಪಿನಾಗ ಇಟ್ಕೋ. ದುಡ್ಡು ಅನ್ನೋದು ಬಾಳ ಕ್ಷಣಿಕ. ಇವತ್ತ ಇರ್ತದ ನಾಳೆ ಹೋಗ್ತದ. ವ್ಯಾಪಾರದಾಗ ಬರೀ ರೊಕ್ಕದ ಮಕ ನೋಡಬಾರ್ದು. ಗಿರಾಕಿಗಳ ಪ್ರೀತಿ, ವಿಶ್ವಾಸ ಗಳಿಸ್ಕೋಬೇಕು.'' ಹೀಗೆ ಮನತಟ್ಟುವಂತೆ ಹೇಳಿದೆ. ಬಿಟ್ಟೇನೆಂದರೂ ಬಿಡದೀ ಮಾಯೆ ಅನ್ನೋ ಹಾಗೆ ಎಲ್ಲಿ ನನ್ನನ್ನು ಬಿಡುತ್ತೆ ಈ ಮಾಸ್ತರಕಿ ಬುದ್ಧಿ. ಅವನಿಗೆ ದಂಧೇದ ನೀತಿ ಬೋಧನೆ ಮಾಡಿ, ಹಣ್ಣಿನ ಬುಟ್ಟಿ ಎತ್ತಿಕೊಂಡು, ಬಸ್ ಹಿಡಿಯಲು ಸರಸರನೆ ದಾರಿ ತುಳಿದೆ.

ಮಾರನೇ ದಿನ ಬಸವ ಜಯಂತಿ ಹಬ್ಬ. ಅಂದು ಊಟಕ್ಕೆ ತರಾವರಿ ಭಕ್ಷ್ಯಗಳನ್ನು ಸಿದ್ಧಗೊಳಿಸಿದ್ದಾರು – ಧಾರವಾಡ ಕಲ್ಮಿ ಮಾವಿನ ಹಣ್ಣಿನ ಸೀಕರಣೆ, ಹೋಳಿಗೆ, ಮೆಣಸಿನಕಾಯಿ ಬಜಿ, ತರಕಾರಿ ಪುಲಾವ್, ಅನ್ನ, ಕಟ್ಟಿನ ಸಾರು, ಸಂಡಿಗೆ ಹಾಗೂ ಹಪ್ಪಳ. ನನ್ನ ಮನೆವನ್ನೆ ಸಾಲಾಗಿ ಊಟಕ್ಕೆ ಕುಂತವರಿಗೆಲ್ಲಾ, ಎಲೆ ಹಾಕಿ, ಭಕ್ಷ್ಯಗಳನ್ನು ಒಂದೂ ಬಿಡದೆ ಬಡಿಸಿದಳು. ನಾನು ಹೋಳಿಗೆಯ ತುಂಡನ್ನು ಸೀಕರಣೆ ಮಡುವಿನಲ್ಲಿ ಮುಳುಗಿಸಿ, ಬಾಯೊಳಗೆ ತುರುಕಿ, ಚಪ್ಪರಿಸಿದೆ. ನಾಲಿಗೆ, ಗಂಟಲಿನಲ್ಲಿ ಕೆರೆತ ಕಾಣಿಸಿತು. ಬೆಚ್ಚಿಬಿದ್ದೆ! ಆಡಲೂ ಆಗದ, ಅನುಭವಿಸಲೂ ಆಗದಂಥ ಸ್ಥಿತಿ. ನನ್ನ ದೃಷ್ಟಿ ಥಟ್ಟನೆ ಎಲ್ಲರ ಮುಖಗಳ ಮೇಲೆ ಹರಿದಾಡಿತು. ಮಿಕ್ಕವರ ಮುಖದ ಮೇಲಿದ್ದ ಮಂದಹಾಸ ಮಾಯವಾಗಿತ್ತು. ಊಪ್ಸ... ಅವರ ಮುಖಗಳು ಈಗ ಇಂಗು ತಿಂದ ಮಂಗನ ಮುಖವಾಗಿದ್ದವು.

ಹಣ್ಣು ಕೊಟ್ಟವನ ತಾರಾತಿಗಡಿ ಟ್ರಿಕ್ಸ್ ತಿಳಿಯುವದು, ಸಾಕ್ಷಾತ್ ಹರಿ-ಬ್ರಹ್ಮನಿಗೂ ನೀಗದ ಕೆಲಸ, ಮೀನಿನ ಹೆಜ್ಜೆಯಂತೆ. ನನಗೆ ಚಳ್ಳೆಹಣ್ಣು ತಿನ್ನಿಸಿದ ಚೀಟರ್ ಏನಾದರೂ ಸಿಕ್ಕರೆ ಹುಚ್ಚುನಾಯಿ ಹೊಡೆಯೋ ಹಾಗೆ ಚಚ್ಚುವಷ್ಟು ಕೋಪ. ನಾನು ಕಣ್ಣು ಬಿಡುವ ಹೊತ್ತಿಗೆ ಕಾಲ ಮಿಂಚಿಹೋಗಿತ್ತು.

'ಹುಟ್ಟುಗುಣ ಸುಟ್ಟರೂ ಹೋಗದು' ಎನ್ನುವ ಗಾದೆ ಮಾತನ್ನು ಗೋಮುಖವ್ಯಾಘ್ರ ಎತ್ತಿ ಹಿಡಿದಿದ್ದ. ಅವನು ತಾನು ಕೊಟ್ಟ ಸಬ್ಬಸಿಗೆ ಮಾವನ್ನೇ ಒರಿಜಿನಲ್ ಧಾರವಾಡ ಕಲ್ಮಿ ಅಂತ ನನ್ನನ್ನು ತನ್ನ ಹರಿತ ನಾಲಿಗೆಯಿಂದ ನಂಬಿಸಿ ಬಿಟ್ಟ. ಇದೇ ಸಮಸ್ಯೆಯನ್ನು ನಾನು ಪಕ್ಕದ ಮನೆಯವರ ಗಮನಕ್ಕೆ ತಂದಾಗ ದೊರಕಿದ ಉತ್ತರ – ಸ್ಯಾಂಪಲ್ ತೋರಿಸೋದು ಒಂದಾದರೆ, ಕೊಡೋದು ಇನ್ನೊಂದನ್ನು.

ಡಾ॥ ರುದ್ರಯ್ಯ ವಿ. ಗದಗ
ನಂ. ೨೪೦/೪೨; 'ಪಂಚವಟಿ', ವಿವೇಕಾನಂದ ನಗರ
ನೀರಿನ ಟ್ಯಾಂಕ್ ಹತ್ತಿರ, ಗದಗ - ೫೮೨ ೧೦೧

# ನಮ್ಮೂರಾಗಿನ ಜನ ನಾಗರಿಕರಾಗ್ಯಾರಂತ!

ರವಿ ಸೋ. ದೇವರಡ್ಡಿ

ನಮ್ಮೂರಿನಲ್ಲಿ ಗುಡಿ ಗುಂಡಾರಗಳಿಗೇನೂ ಕೊರತೆಯಿಲ್ಲ. ಒಂದು, ಧರ್ಮಕ್ಕೆ ಸೀಮಿತವಾಗಿದ್ದ ದೇವಸ್ಥಾನದ ಹೆಸರು, ಇನ್ನೊಂದು, ಧರ್ಮದ ಹೆಣ್ಣುಮಗಳ ಹೆಸರಿನಲ್ಲಿದ್ದದ್ದು. ಈ ಹಿಂದ ನಮ್ಮ ಹಳ್ಳ್ಯಾಗಿನ ಜನಕ್ಕ ದೇವಸ್ಥಾನಗಳೂ ಒಂದು ನಿರ್ದಿಷ್ಟ ಧರ್ಮಕ್ಕ ಸೇರಿರ್ತವು ಅಂತ ಗೊತ್ತ ಇರಲಿಲ್ಲ. ಆದ್ರ ಈಗಿನ ಯುವ ಪೀಳಿಗೆಗೆ ಗೊತ್ತು. ಅವತ್ತಿನ ಕಾಲಕ್ಕ ಹಬ್ಬ ಅಂದ್ರ ಎಲ್ಲ ಧರ್ಮದವರು ಕೂಡಿಯೇ ಮಾಡ್ತಿದ್ದ ದಿನಗಳವು.

ಹುಬ್ಬಳ್ಳಿ ಮಲ್ಲವ್ವ, ಸಾಳೇರ ಸಂಕವ್ವಗ ಮೊಹರಂನಲ್ಲಿ ಚೊಂಗೆವು (ಕರ್ಬಲ್ ಕಾಳಗದ ಸಂದರ್ಭದಲ್ಲಿ ಹಸಿವಿನಿಂದ ನರಳುತ್ತಿರುವವರಿಗೆ ಅಲ್ಲಿನ ಜನ ಮಾಡಿಕೊಟ್ಟ ರೊಟ್ಟಿಯಂತೆ) ಮಾಡಿ ಅಲ್ಲಾನಿಗೆ ಎಡಿ ಕೊಡಲಾರದ ಊಟ ಮಾಡಿದ್ದ ನೆನಪಿಲ್ಲ. ಜಿಲೇಖಾ, ಬೀಬೀ ಫಾತಿಮಾ, ರಜಿಯಾಳಿಗೆ ಪಂಚಮಿ ಹಬ್ಬದ ಉಂಡಿ, ಹೋಳಿಗೆ ಮಾಡಿ ನಾಗಪ್ಪಗ ಹಾಲ ಹಾಕೋದನ್ನ ತಪ್ಪದ ಮಾಡಿಕೊಂಡು ಬಂದವರು. ಹೋಳಿ ಹುಣ್ಣಿಮೆ ಬಂತಂದ್ರ ಊರಿಗೆ ಊರ ರಂಗರಂಗಾಗರ್ತಿತ್ತು.

ಇತ್ತೀಚಿನ ದಿನಗಳಲ್ಲಿ ಮಾಧ್ಯಮದಲ್ಲಿನ ಸುದ್ದಿಗಳು, ದೂರದೂರಿಂದ ನಮ್ಮ ಹಳ್ಳಿಗೆ ಆಗಾಗ ಬಂದು ಹೋಗ್ತೊ, ಬಾಳೋಟು ಸಾಲಿ ಕಲಿತ ಧರ್ಮ ರಕ್ಷಕರು ಹೇಳ್ತೋ ಬುದ್ಧಿಮಾತಿನಿಂದ, ಇತ್ತಿತ್ತಲಾಗಿ ನಮ್ಮ ಹಳ್ಳೀನೂ ಬಾಳ ಬದಲಾಗ್ಯಾದ. ಒಂದು ಧರ್ಮದವರ ಫೋಟೊ ಇನ್ನೊಂದು ಧರ್ಮದವರ ಮನೆಯಲ್ಲಿ ಹಾಕಿದ್ರ, ಅವ್ರ ದೇವ್ರು ಬಾಗಿಲ್ದಾಗ ನಿಂತುಕೊಂಡು ವಾಪಸ ಹೋಗಿಬಿಡ್ತಾನಂತ. ನಮಗ ಮುಕ್ತಿ ಸಿಗಬೇಕಂದ್ರ ಬೇರೆ ಧರ್ಮದ ದೇವ್ರನ್ನ ಪೂಜೆ ಮಾಡೋದು, ಬಾಳ ದೊಡ್ಡ ಅಪರಾಧ ಅಂತ. ಹೋಳಿ ಹುಣ್ಣಿಮ್ಯಾಗಿನ ಬಣ್ಣಕ್ಕೂ ಧರ್ಮದ ಅಡ್ಡಗೋಡೆ ತಲೆಯೆತ್ತಿದೆ. ನಮ್ಮ ಜೊತೆಗೆ ಬಣ್ಣಾ ಆಡಿ ಹಾರಾಡಿ ಹೊಳಿಗೆ ಹೋಗಿಬಂದು, ಹೋಳಿಗೆ ಊಟ ಮಾಡ್ತಿದ್ದ ಫಕ್ರು, ಮೈಬು ತಮ್ಮ ಮಕ್ಕಳಿಗೆ ಹೊರಗ ಬಿಡಾಂಗಿಲ್ಲ. ಹಸೇನ ಹುಸೇನ ದೇವ್ರನ್ನ ಆನುಬುನಾದ್ಯಾಗಿಂದ, ನಮ್ಮ ತಾತ ಮುತ್ತಾತರ ಕಾಲದಾಗಿಂದ, ನಾವ ಹಿಡಿತಿದ್ವಿ ಅಂತಿದ್ದ ಶಂಕ್ರಯ್ಯ, ಮೋಹರಂನ್ಯಾಗ ಮಕ್ಕಳ ಕರ್ಕೊಂಡು ಮನ್ಯಾಗ ಮಲಗಿರ್ತಾನ. ಸುಧಾಕರ, ಸುನಿಲಗ ಕೈಯಾಗ ಲಾಡಿ ಕಟ್ಟೋದು ಗೊತ್ತ ಇಲ್ಲ. ದೇವ್ರಂದ್ರನ ಜನರಿಗೆ, ಜಗತ್ತಿಗೆ ಒಳ್ಳೇದು ಮಾಡ್ತವು ಎಲ್ಲಾ ದೇವರಿಗೂ ಕಾಯಿ ಒಡೆಸ್ಬೇಕು, ಓದಕಿ ಮಾಡಿಸ್ಬೇಕು, ದೀಪ ಬೆಳಗಿಸ್ಬೇಕು ಅಂತ ತಿಳಕೊಂಡ ಜನ, ಇವತ್ತಿನ ಧರ್ಮದ ಗುರುಗಳ ಕಣ್ಣಾಗ ಹುಚ್ಚರಂಗ ಕಾಣಾಕತ್ಯಾರ. 'ಸರ್ವೇ ಜನಾಃ ಸುಖಿನೋ ಭವಂತು' ಅಂಬೋದನ್ನ ಭಾಷಣದಾಗಷ್ಟ ಬಳಸ್ತಾರ.

ಕೆಲವೇ ವರ್ಷಗಳ ಹಿಂದೆ, ಇಡೀ ಹಳ್ಳಿಗೆ ಹಳ್ಳಿನ ಒಂದ ಕುಟುಂಬ ಆಗಿತ್ತು. ಹನುಮಂತ ಫಕೀರಸಾಬಗ ಅಣ್ಣಾ ಅಂತಿದ್ದ, ಸೈಯದಸಾಬ ರೇಣಕವ್ವಗ ಎವ್ವ ಅಂತಿದ್ದ. ಹತ್ತು ವರ್ಷದ ನಂತರ ನಾ ಮತ್ತ ಇದ ಹಳ್ಳಿಗೆ ಹೋದ್ರ ಚಿತ್ರ ವಿಚಿತ್ರವಾದ ದೃಶ್ಯಗಳು ಕಣ್ಣಿಗೆ ಕಾಣಲಿಕ್ಕೆ ಹತ್ತಿದವು. ನಾ ಹುಟ್ಟಿ ಬೆಳೆದ ಊರು, ಹೌದೊ ಅಲ್ಲ ಅಂತ ಕಣ್ಣ ಉಜ್ಜಿಕೊಂಡು ನೋಡಿದ್ರ ದೇವರಾಣೆಗೂ ಹೌದು.

ಮೂರ್ನಾಲ್ಕು ಮನೆಗೊಂದು ಸೇದೊ ನೀರಿನ ಬಾವಿತ್ತು. ಚಿಗುರು ಮೀಸೆ ಹುಡುಗರು ಜೋಡ ಕೊಡ ಹೊತ್ತು, ಕೈಬಿಟ್ಟು ಗತ್ತಿನಿಂದ ನಡೆಯೋದನ್ನೊಮ್ಮೆ, ನಿಂತು ನೋಡಬೇಕಿತ್ತು. ಈಗ ಮನೆಗೊಂದು ನಲ್ಲಿ ಬಂದೈತಿ. ಕರೆಂಟ ಇದ್ದಾಗೆಲ್ಲ ಮೋಟರ್ ಚಲುವ ಇರತೈತಿ. ವಾರಿಗಿ ಗೆಳೆತ್ಯಾರು ಕೂಡಿಕೊಂಡು, ಹಸಿ ಬಿಸಿ ಸುದ್ದಿ ಮಾತಾಡ್ತ ಹುಸಿನಗಿ ಬೀರ್ತಿದ್ದ ದೃಶ್ಯ ಕಾಣದಾಗೈತಿ. ಬಾವಿ ನೀರ ಬಳಸಲಾರದ್ದಕ್ಕ ಜೊಂಡ ಬೆಳದೈತಿ. ರಸ್ತೆಯಲ್ಲಿ ನೀರ ಹರಿಯೋದನ್ನ, ಮಳೆಗಾಲದಲ್ಲಿ ಮಾತ್ರ ಕಂಡಿದ್ದ ಜನ, ಈಗ ವರ್ಷ ಪೂರ್ತಿ ಕಾಣ್ತಾರ. ನಮ್ಮೂರಿನ ರಸ್ತೆ ಈಗ ಗಂಗಾನದಿಯಾಗೈತಿ. ಗಟಾರ ನೀರನ್ನ ನಾ ಪ್ಯಾಟಿಗೆ ಅವ್ವನ ಜೊತೆಗೆ ಹಬ್ಬಕ್ಕ ಅರಿಬಿ(ಬಟ್ಟೆ) ತರಾಕ ಹೋದಾಗ ನೋಡಿದ್ದು, ಇವತ್ತ ಈ ಊರಾಗಿನ ಸಣ್ಣ ಮಕ್ಕಳ ಆಡೋದೆಲ್ಲ ರಸ್ತೆ ಮಧ್ಯದಾಗಿನ ಹೊಲಸ ನೀರಾಗ. ಸೊಳ್ಳೆ ಪರದೇಸ ಕೆಲಸಕ್ಕಂತ ಪಟ್ಟಣಕ್ಕ ಬಂದಾಗ ಕಂಡಿದ್ದು. ಬ್ಯಾಸಿಗೆ ಬಂತಂದ್ರ ಮಚ್ಛರದಾನಿ, ಶುಭರಾತ್ರಿ(ಗುಡ್‌ನೈಟ್) ಇಲ್ದ ನಿದ್ದಿ ಮಾಡೋರು. ಈ ಹಳ್ಳ್ಯಾಗ ಯಾರರ ಇದ್ರ, ಅವರು ಎಮ್ಮಿ ಚರ್ಮದಾರ ಇರಬೇಕು, ಇಲ್ಲ ಅವರ ಸಂದೇಶ ವಾಹಕ ನರಗಳು ಪೂರ್ತಿ ಫೇಲ್ ಆಗಿರಬೇಕು.

ಊರಾಚೆಗೆ ಶೌಚಕಾರ್ಯಕ್ಕೆ ಮಹಿಳೆಯರು ಮತ್ತು ಪುರುಷರಿಗಾಗಿ ಪ್ರತ್ಯೇಕ ಮುಳ್ಳಿನ ಕಂಟಿ ಬೆಳೆದ ಜಾಗ ಇತ್ತು. ಇವತ್ತು ಅಲ್ಲೆಲ್ಲಾ ಮನೆ ಕಣಗಳಾಗಿವೆ. ಇಂದು ಮಹಿಳೆಯರು ರಸ್ತೆ ಬದಿಯಲ್ಲಿ ಸಂಜೆ ಕತ್ತಲಾದ ನಂತರ, ಇಲ್ಲವೆ ಬೆಳಕು ಹರಿಯುವ ಮೊದಲು ತಮ್ಮ ಶೌಚ ಕೆಲಸ ಪೂರೈಸಬೇಕಾಗಿದೆ.

ಸಂಕ್ರಾಂತಿ ಬಂತಂದ್ರ ಬುತ್ತಿ ಕಟ್ಟಕೊಂಡು ಹೊಳಿಗೆ ಹೊಗತಿದ್ವಿ. ಸಾವಿರಾರು ಎಕ್ರೆ ಬಯಲಿನ್ಯಾಗ ಮರಳು ಮೈ ಚೆಲ್ಲಿಕೊಂಡು ಬಿದ್ದಿರುತ್ತಿತ್ತು. ಸುತ್ತಲಿನ ಹಳ್ಳಿ ಜನ ಎಲ್ಲ ಇದ ಬಯಾಲಾಗ ತಮ್ಮ ಜಗಾ ಗುರುತಿಸಿಕೊಂಡು ಟಿಕಾಣಿ ಹೂಡುತ್ತಿದ್ದರು. ಈಜ ಬರೊವಾ ಮಾರುದ್ದದ ನೀರಿನ್ಯಾಗ ಹೋಗಿ ಈಜಾಡಿಕೊಂಡು ಬರ್ತಿದ್ದಾ. ಈಜ ಬರದಾ ಇದ್ದಾಂವಾ ಕಾಲ್ಹೊಳ್ಯಾ (ಈಜದೆ ಸರಾಗವಾಗಿ ನಡೆದು ದಾಟಬಹುದಾದ ಹೊಳಿ)ಗ ಮುಳಿಗಿ ಎದ್ದು ಬರ್ತಿದ್ರು. ಬಯಲೆಲ್ಲಾ ಹಿರಿಕಿರಿಯರಿಂದ ತುಂಬಿ ಬಣ್ಣಮಯವಾಗಿರ್ತಿತ್ತು. ಸಮತಟ್ಟಾದ ಮರಳು, ಮಕ್ಕಳ ಆಟದ ಮೈದಾನವಾಗಿತ್ತು.



ಹಿರಿಯರು ಮರಳಿನ ಗುಂಪಿ ಮಾಡಿ, ಈಶ್ವರನ ಪೂಜಾ ಮಾಡ್ತಿದ್ರು. ಯುವಕರೆಲ್ಲಾ ನಸಿಗನ್ಯಾಗ ನಡುಡ್ಡೆಗೆ ಹೊದ್ರಂದ್ರ. ಸಂಜೆ ಹೊತಿಗೆ ಹೊಳ್ಳಿ ಬರ್ತಿದ್ರು. ಬರುವಾಗ ಕೈತುಂಬಾ ನವಿಲುಗರಿ, ಕೈ ಚೀಲ್ಯಾಗ ಬಾರಿ ಹಣ್ಣು ತುಂಬಿಕೊಂಡು ಬರ್ತಿದ್ರು. ನಾವೆಲ್ಲಾ ನವಿಲು ಗರಿನ ಪುಸ್ತಕದಗ ಇಟ್ಟು, ಆಗಾಗ ಅದರ ಚೆಲುವಿಕೆ ನೋಡ್ತಾ, ಓದಕತ್ತಾರ ಅನ್ನೋಹಂಗ ನಟನೆ ಮಾಡ್‌ತಿದ್ವಿ.

ಆದ್ರ ಇವತ್ತ ನಾವಾಡ್ತಿದ್ದ ಮರಳಿನ ಬಯಲಾಗ ಒಂದು ಡ್ಯಾಮ ಕಟ್ಟಾಕತ್ಯಾರ. ಮರಳಿನ ರಾಶಿ ಮಂಗಮಾಯ ಆಗ್ಯಾದ, ನಡುಗಡ್ಡೆ ಅಲ್ಲಿನ ಕಾಡು ಇತ್ತು ಅನ್ನಾಕ ಕುರುಹು ಇಲ್ದಂಗಾಗೈತಿ. ಮೈ ಕೈ ಪರಚಿ ಗಾಯಗಳನ್ನ ಮಾಡ್ತಿದ್ದ ಬೋರೆ ಹಣ್ಣಿನ ಗಿಡಕ್ಕ ನೆಲೆಯಿಲ್ಲ. ಅಂದ ಮೇಲೆ, ನವಿಲುಗಳ ನರ್ತನ ನೋಡೊ ಭಾಗ್ಯ ಇವತ್ತಿನ ಬಾಲಕರಿಗೆ ಎಲ್ಲಿ ಸಿಗಬೇಕು. ಸಂಕ್ರಾಂತಿಯ ಸಡಗರ ಈಗ ಬಚ್ಚಲದಾಗಿನ ಜಳಕದಾಗ ಮುಗುದುಹೊಂಟೈತಿ. ಮರಳಿನ ರಾಶಿ ಲಿಂಗಪ್ಪನ ಬದಲಿ ಮನ್ಯಾಗಿನ ಶಾಶ್ವತ ಲಿಂಗಪ್ಪಗ ಎಡಿ ಹಾಕೋ ಪಾಳಿ ಬಂದೈತಿ. ಮಕ್ಕಳಾಟ ನೋಡ್ಕೊಂತ ಮೈ ಮರಿತಿದ್ದ ಜನ ಇವತ್ತ ಮನ್ಯಾಗಿನ ಮೂರ್ಖರ ಪೆಟ್ಟಿಗಿನ ಸರ್ವಸ್ವ ಅಂತ, ಆದ ಮರದ ಸುತ್ತ ಗಿರಕಿ ಹೊಡಿಯೋ ಪ್ರೇಮಗೀತೆಗೆ ತಲಿ ಹಾಕ್ಕೊಂತ ಕೂಡದೆ ಗತಿಯಿಲ್ಲ. ಮರಳಿನ ರಾಶಿ ಮ್ಯಾಲೆ ಆಡ್ತಿದ್ದ ಮಕ್ಕಳ ಮುಖದಾಗಿನ ನಗಿ, ಆ ಚೆಲ್ಲಾಟನ ಮತ್ತ ತಂದಕೊಡಾಗ ಈ ಡ್ಯಾಮಿನಿಂದ ಸಾಧ್ಯವಿಲ್ಲ. ಅಲ್ಲಿನ ಫಲವತ್ತಾದ ಮಣ್ಣಿನ ಜೊತೆಗೆ ಕಟ್ಟಿಕೊಂಡಿದ್ದ ಬದುಕನ್ನ, ನಮ್ಮ ಜನ ಸಂಸ್ಕೃತಿಯನ್ನು ಮತ್ತೆ ಈಗಿನ ಸಂಶೋಧನೆಗಳ ನಿರ್ಮಾಣ ಮಾಡಲಿಕ್ಕೆ ಸಾಧ್ಯನಾ ?

ಇದೆಲ್ಲಾ ಆಗಿದ್ದು ನಮ್ಮ ನಾಗರಿಕತೆಯ ಬೆಳವಣಿಗೆಯ ಫಲದಿಂದ. ಹಳ್ಳ್ಯಾಗಿನ ಜನಾ ಎಲ್ಲಾ ಪಟ್ಣಾ ಸೇರಕತ್ಯಾರ. ಇದ್ದಬಿದ್ದ ಜನಾ ಹಿರಿತೆರೆ, ಕಿರಿತೆರೆ ಮಧ್ಯ ತಲಿ ಇಟ್ಕೊಂಡು, ಪಕ್ಕದ ಮನ್ಯಾನವರದಿರಲಿ, ಮನ್ಯಾನ ಮಂದಿ ಸುದ್ದಿ ಕೇಳಾಕ ಟೈಮ್ ಸಿಗದಂಗಾಗೈತಿ. ಕದಾ ಮುಚ್ಕೊಂಡು ಕುಂದ್ರೊ ಪ್ಯಾಟ್ಯಾಗಿನ ಸಂಸ್ಕೃತಿ ಹಳ್ಳಿಗಿನು ಕಾಲಿಟ್ಟೈತಿ. ಕಟ್ಟಿ ಮ್ಯಾಲೆ ಕುಂತು ಅಡಿಕಿ, ಎಲಿ ತಿನಕೋಂತಾ, ಮಕ್ಕಳ ಮರಿ ಕರಕೊಂಡು, ಕುರುಬನ ಚಿಕ್ಕಿ (ಮಂಗಳ ಗ್ರಹ), ಬೆಳ್ಳಿಚಿಕ್ಕಿ (ಶುಕ್ರ ಗ್ರಹ), ಚೆನ್ನಮ್ಮನ ದಂಡಿ (ಕೃತ್ತಿಕಾ ನಕ್ಷತ್ರ ಪುಂಜ), ಅಜ್ಜಿ ಹೊರಸು (ಸಪ್ತರ್ಷಿ ಮಂಡಲ), ಕೂರಿಗಿ ತಾಳ (ಮಹಾವ್ಯಾಧ ನಕ್ಷತ್ರ ಪುಂಜ)ಗಳನ್ನು ತೋರಿಸ್ತಾ, ಆದರ್ಶ ತಾಯಂದಿರ ಕತೆ ಹೇಳ್ತಿದ್ದ ಅಜ್ಜಿ ಬಾಯಿಗೆ ಬೀಗ ಬಿದ್ದೈತಿ. ಅತ್ತೆ ಅಮ್ಮನ ಜೋಪಾನ ಮಾಡಬೇಕಾದ ಮಗಳು ಧಾರಾವಾಹಿಗಳ ನಡುವೆ ತನ್ನನ್ನೆ ತಾನು ಕಳೆದುಕೊಂಡುಬಿಟ್ಟಿದ್ದಾಳೆ. ಚಂದಮಾಮನ ತೋರಿಸ್ತಾ, ಮುಟಗಿ ರೊಟ್ಟಿ (ಎಣ್ಣೆ ಉಪ್ಪು ಸವರಿ ಕಿವುಚಿದ ಬಿಸಿ ರೊಟ್ಟಿ) ತಿನಸ್ತಿದ್ದ ತಾಯಂದಿರನ್ನು ನೋಡೊದ್ ಕಷ್ಟ.

ನನ್ನ ಬಾಲ್ಯದ ದಿನಗಳು ನನ್ನ ಮಗನಿಗೂ ಸಿಗಲಿ ಅನ್ನುವುದು ಸ್ವಾರ್ಥವಾಗಲಿಕ್ಕಿಲ್ಲ, ಆದರೆ ಎಲ್ಲ ಸುಖ, ನೆಮ್ಮದಿಯನ್ನು ಡಿಸ್ಕೊಥೆಕ್‌ನಲ್ಲಿ, ಪಬ್‌ಗಳಲ್ಲಿ ಕಾಣುವ ಪಾಲಕರಿಗೆ, ನಮ್ಮ ಲಘಾಸಮುರಗಿಯಲ್ಲಿನ ಕೇಕೆ, ಗೆಲುವಿನ ಛಲ, ಆತ್ಮಸ್ಥೈರ್ಯದ ಕುರುಹು ಸಿಗಲು ಸಾಧ್ಯವೇ ? ಈ ಸಂಶೋಧನೆಗಳು, ತಾಂತ್ರಿಕತೆಯಲ್ಲಿನ ಕ್ರಾಂತಿಕಾರಕ ಬದಲಾವಣೆ, ಹಣದಿಂದಲೆ ಎಲ್ಲವನ್ನು ಅಳೆಯುವ ಜನರ ಮನೋಭಾವ ಮಕ್ಕಳ ಬಾಲ್ಯವನ್ನು ಮಾತ್ರವಲ್ಲ, ಈ ನೆಲದ ಸಂಸ್ಕೃತಿಯನ್ನು, ಧಾರ್ಮಿಕ ಸಾಮರಸ್ಯವನ್ನು ಕಿತ್ತುಕೊಂಡಿದ್ದು ದುರಂತ. ಬೇಂದ್ರೆ ಅಜ್ಜ ಹೇಳಿದಂತೆ ಇದು ಕುರುಡು ಕಾಂಚಾಣದ ಕರಾಮತ್ತು. ಇದರಲ್ಲಿ ಮುಗ್ಧ ಮಕ್ಕಳು ಬಲಿಪಶುವಾದರು.

ವೃದ್ಧಾಶ್ರಮಗಳ ಹೆಸರೆ ಕೇಳಿಸದಂತಹ ದಿನಗಳು ಆದಷ್ಟು ಬೇಗ ಬರಲಿ. ಅಕ್ಷರಶಃ ಅನಾಥರಾದವರನ್ನು ತಂದೆತಾಯಿಗಳಿಲ್ಲದ ಶ್ರೀಮಂತ ವರ್ಗ, ದತ್ತು ತೆಗೆದು ಕೊಳ್ಳುವ ಉದಾತ್ತ ಸಂಸ್ಕೃತಿಯೊಂದು ಜನ್ಮ ತಳೆಯಲಿ. ರಜೆಯಲ್ಲಿ ನದಿ, ಹಳ್ಳಗಳಲ್ಲಿ ಈಜಾಡುವ, ಬಿಡುವಿನ ವೇಳೆಯಲ್ಲಿ ನೇರಳೆ, ಕವಳಿ, ಕಾರಿ, ಬಾರೆ ಹಣ್ಣನ್ನು ಹರಿದು ತಿನ್ನುವ ಅವಕಾಶ ನಮ್ಮ ಮಕ್ಕಳಿಗೂ ಸಿಗುವ ದಿನಗಳು ವಿಳಂಬವಾಗದೆ ಬರಲಿ. ಪಕ್ಕದ ಮನೆಯ ಕರಿಯಾ, ಹಿಂದಿನ ಮನೆಯ ಮನಿಯ, ಮರಿಯಾನ, ನೋವು ನಲಿವಿನಲ್ಲಿ ನನಗೂ ಪಾಲಿರಲಿ. ಆಗ ಬಂದೂಕಿನ ಬಾಯಿಯಲ್ಲಿ ಗುಬ್ಬಚ್ಚಿ ಗೂಡು ಕಟ್ಟೀತು.

ರವಿ ಸೋ. ದೇವರಡ್ಡಿ
ನೆಮ್ಮದಿಯ ನೆರಳು, ಹೇಮರಡ್ಡಿ ಮಲ್ಲಮ್ಮ ನಗರ
ಮುಂಡರಗಿ, ಗದಗ ಜಿಲ್ಲೆ

## ಗಜ಼ಲ್

ಹೆಚ್ಚೆಂದರೆ ತುಪಾಕಿ ಎದೆಗೇರಿಸಿ ತುಂಡರಿಸಬಲ್ಲಿರಿ ನೀವು
ಇಲ್ಲ ಎನ್‌ಕೌಂಟರಿನಲಿ ಸಾವ ನಿರೀಕ್ಷಿಸಬಲ್ಲಿರಿ ನೀವು !

ಓದಲಾಗದು ಸ್ಮೃತಿ ಪಟಲ ಪಡಿಯಚ್ಚು
ಒಡೆಯನಿಗೆ ಕಣ್ಣು ಕಿತ್ತಿಟ್ಟ ಬಗೆ ವಿವರಿಸಬಲ್ಲಿರಿ ನೀವು !

ಕಾಯಿದೆಗಳ ಹೊರಡಿಸಿ ನಿಷೇಧಿಸಲಾಗದು ನಿಟ್ಟುಸಿರು
ನೆಲ ಸೀಳುವ ಮೊಳಕೆಯೆದುರು ದನಿಯೆತ್ತರಿಸಬಲ್ಲಿರಿ ನೀವು !

ಇನಿತು ಸುಟ್ಟು; ಕತ್ತರಿಸಿ ಗಲ್ಲಿಗೇರಿಸಿದವರ
ದಫನ್ನಿಗೆ ಜನ ಸೇರದಂತೆ ಆದೇಶಿಸಬಲ್ಲಿರಿ ನೀವು !

ಮೆದುಳುಗಳಿಗೆ ಹೃದಯ ತರಬೇತಿ ಒಂದು ವಿದ್ರೋಹ
ಕಟಕಟೆಯಲಿ ನಿಂತ ಕಾಡುಗಳಿಗೆ ಏನೆಂದು ಉತ್ತರಿಸಬಲ್ಲಿರಿ ನೀವು !



ಆರೋಲಿ ರಮೇಶ, ಆಸ್ಕಿಹಾಳ
ರಿಸರ್ಚ್ ಸ್ಟೂಡೆಂಟ್, ಎಸ್.ಎನ್.ಸ್ಕೂಲ್ ಆಫ್ ಕಮ್ಯುನಿಕೇಷನ್, ಹೆಚ್.ಸಿ.ಯು., ಹೈದರಾಬಾದ - ೫೦೦ ೦೪೬ (ಆಂಧ್ರಪ್ರದೇಶ)

# ಜನತೆಯ ಹೋರಾಟಕ್ಕೆ ಜಯವು ಖಚಿತ

**– ಸಂಜೀವ್ ಸಾನೆ**

ಮಹಾರಾಷ್ಟ್ರದ ರಾಯಗಢ ಜಿಲ್ಲೆಯ ಪೇಣ್-ಉರಣ್ ಪ್ರದೇಶದಲ್ಲಿ ರಿಲಯನ್ಸ್ ಕಂಪನಿಯು ವಿಶೇಷ ಆರ್ಥಿಕ ವಲಯ ರಚಿಸುವುದಾಗಿ ಹೇಳಿ ೩೫,೦೦೦ ಹೆಕ್ಟೇರ್ ಭೂಮಿಯನ್ನು ವಶಪಡಿಸಿಕೊಳ್ಳಲು ಎಲ್ಲ ಸಿದ್ಧತೆ ನಡೆಸಿತ್ತು. ರೈತರ ಒಗ್ಗಟ್ಟಿನ ಚಳುವಳಿಯು ಅದನ್ನು ತಡೆಹಿಡಿದಿದೆ. ಚಳುವಳಿಯ ಪ್ರಮುಖ ಸಂಯೋಜಕ - ಕಾರ್ಯಕರ್ತರ ಪೈಕಿ ಸಮಾಜವಾದಿ ಜನ ಪರಿಷತ್ ಪಕ್ಷದ ಶ್ರೀ ಸಂಜೀವ್ ಸಾನೆ ಒಬ್ಬರು. ಅವರನ್ನು ೨೦೦೯ರ ಡಿಸೆಂಬರ್ ೨೪ರಂದು 'ಹೊಸತು' ಸಂಪಾದಕರಾದ ಡಾ|| ಜಿ. ರಾಮಕೃಷ್ಣ ಮತ್ತು ಡಾ|| ಎನ್. ಗಾಯತ್ರಿ ರಾಯಗಢ ಜಿಲ್ಲೆಯ ಗೋರೆಗಾಂವ್ ಬಳಿ ಇರುವ ಸಾನೆ ಗುರೂಜಿ ಕೇಂದ್ರದಲ್ಲಿ ಸಂದರ್ಶಿಸಿದರು. ಕರ್ನಾಟಕದಲ್ಲಿ ವಿಶೇಷ ಆರ್ಥಿಕ ವಲಯದ ಅಬ್ಬರ ಪ್ರಬಲವಾಗುತ್ತಿರುವ ಹಿನ್ನೆಲೆಯಲ್ಲಿ ಈ ಸಂದರ್ಶನವು ಉಪಯುಕ್ತ ಮಾಹಿತಿ ಮತ್ತು ಸೂಚನೆಗಳನ್ನು ನೀಡುತ್ತದೆಂದು ನಿರೀಕ್ಷಿಸಲಾಗಿದೆ.

ಸಂದರ್ಶನ – ಲೇಖನ : ಜಿ. ರಾಮಕೃಷ್ಣ

**ಹೊಸತು :** ನಮ್ಮದು ಇಲ್ಲಿಗೆ ಅನಿರೀಕ್ಷಿತ ಭೇಟಿ. ನಿಮ್ಮನ್ನು ಕಂಡದ್ದು ಇನ್ನೂ ಹೆಚ್ಚು ಅನಿರೀಕ್ಷಿತ. ನಮ್ಮ ಸ್ನೇಹಿತ ಶ್ರೀ. ಶ್ರೀಪ್ರಕಾಶ್ ಅಧಿಕಾರಿ ಇಲ್ಲಿಗೆ ಕರೆತಂದದ್ದು ನಿಮಗೆ ತಿಳಿದಿದೆ. ಈಗ ತಾನೆ ನಾವಿಬ್ಬರೂ ಒಂದೇ ವೇದಿಕೆಯಿಂದ ಮಾತನಾಡಿದೆವಲ್ಲ...

**ಸಂಜೀವ್ ಸಾನೆ :** ನೀವು ಬಂದಿದ್ದು ಸಂತೋಷ. ಸದ್ಯ ಇಲ್ಲಿ ರಾಷ್ಟ್ರೀಯ ಸೇವಾ ಯೋಜನೆಯ ಶಿಬಿರ ನಡೆಯುತ್ತಿದೆ. ನಮ್ಮ ರಾಜ್ಯದ ಎಲ್ಲ ವಿಶ್ವವಿದ್ಯಾಲಯಗಳಿಂದ ಬಂದಿರುವ ನೂರೈವತ್ತಕ್ಕೂ ಹೆಚ್ಚು ವಿದ್ಯಾರ್ಥಿಗಳು ಇಲ್ಲಿ ಒಂದು ವಾರವಿದ್ದು ಹಲವು ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಾರೆ. ನೀವು ನೋಡಿರುವಂತೆ ಅರ್ಧಕ್ಕಿಂತಲೂ ಹೆಚ್ಚು ಮಂದಿ ವಿದ್ಯಾರ್ಥಿನಿಯರು. ಉಪನ್ಯಾಸ, ಚರ್ಚೆ, ದೈಹಿಕ ಶ್ರಮ, ಎಲ್ಲಾ ಉಂಟು. ನೀವು ದೇಶದ ಸನ್ನಿವೇಶದಲ್ಲಿ ಯುವಕರ ಪಾತ್ರವನ್ನು ಕುರಿತು ನೀಡಿದ ಉಪನ್ಯಾಸ ಅವರಿಗೆ ಇಷ್ಟವಾಯಿತು. ನಮ್ಮ ಕೇಂದ್ರ ಇಂತಹ ಶಿಬಿರಗಳಿಗೆ ಯಾವಾಗಲೂ ಆದ್ಯತೆ ನೀಡುತ್ತದೆ. ಅಲ್ಲದೆ 'ಭಾಷಾಂತರ ಭಾರತಿ' ಎಂಬ ಅಂಗಸಂಸ್ಥೆಯೂ ಇಲ್ಲಿದೆ. ಬೇರೆ ಬೇರೆ ಭಾಷೆಗಳ ಲೇಖಕರು ಕಲೆತು ಚರ್ಚೆ, ಅನುವಾದ, ಇತ್ಯಾದಿ ಕೆಲಸ ಮಾಡುತ್ತಾರೆ. ಸಾನೆ ಗುರೂಜಿಯವರ ಆದರ್ಶಗಳ ಅನುಷ್ಠಾನ ನಮ್ಮ ಉದ್ದೇಶ.

**ಹೊ :** ವಿಶೇಷ ಆರ್ಥಿಕ ವಲಯದ ವಿರೋಧಿ ಚಟುವಟಿಕೆಗಳಲ್ಲಿ ನಿಮ್ಮದು ದೊಡ್ಡ ಪಾತ್ರವೆಂದು ತಿಳಿಯಿತು. ನಿಮ್ಮ ಬಗ್ಗೆ ಒಂದೆರಡು ಮಾತು ಹೇಳುತ್ತೀರಾ ?

**ಸಂ :** ನಾನಾಗಲಿ ನನ್ನ ಜೊತೆ ಕೆಲಸ ಮಾಡಿದವರಾಗಲಿ ಯಾರೂ ನಾಯಕರಲ್ಲ; ನಾವೆಲ್ಲಾ ಕಾರ್ಯಕರ್ತರು, ಅಷ್ಟೆ. ನಮ್ಮೊಡನಿರುವ ಮೇಧಾ ಪಾಟ್ಕರ್ ಸಹ ಒಬ್ಬ ಕಾರ್ಯಕರ್ತೆ. ಸ್ವತಃ ನಾನು ಸಮಾಜವಾದಿ ಚಿಂತಕ ಕಿಶನ್ ಪಟ್ನಾಯಕ್ ಅವರ ಪಂಥದವನು. ೧೯೯೪ರಿಂದಲೂ ನಾನು ಸಮಾಜವಾದಿ ಜನ ಪರಿಷತ್ತಿನಲ್ಲಿ ಇದ್ದೇನೆ. ವಿಶೇಷ ಆರ್ಥಿಕ ವಲಯವನ್ನು ಸಂಕ್ಷಿಪ್ತವಾಗಿ ನಾವು 'ಸೆಜ್' ಎನ್ನುತ್ತೇವೆ. ಇದನ್ನು ವಿರೋಧಿಸಲು ನಾವು ಒಗ್ಗಟ್ಟು ಸಾಧಿಸಿದ್ದೇವೆ. ಕಾಂಗ್ರೆಸ್ ಮತ್ತು ಬಿಜೆಪಿ ಬಿಟ್ಟು ಬೇರೆಲ್ಲ ಪಕ್ಷಗಳು, ವಿಶೇಷವಾಗಿ ಎಡ ಪಕ್ಷಗಳು, ಚಳುವಳಿಯನ್ನು ಮುನ್ನಡೆಸಿವೆ.



ಎನ್. ಗಾಯತ್ರಿ, ಸಂಜೀವ್ ಸಾನೆ ಮತ್ತು ಜಿ.ಆರ್.

ಹೊ : ಏನಿದು 'ಸೆಜ್' ಎಂಬುದನ್ನು ವಿವರಿಸುತ್ತೀರಾ ?

ಸಂ : ಈಗದು ಎಲ್ಲರಿಗೂ ತಿಳಿದಿದೆ. ೨೦೦೩ರಲ್ಲಿ ಕೇಂದ್ರ ಸರ್ಕಾರ ಇದಕ್ಕೆ ಚಾಲನೆ ನೀಡಿತು. ಎಲ್ಲ ರಾಜ್ಯಗಳಲ್ಲೂ ಈ ಬಗ್ಗೆ ಅಭಿಪ್ರಾಯ ಮೂಡಿಸಬೇಕೆಂದು ತಿಳಿಸಲಾಗಿತ್ತು. ೨೦೦೪ರಲ್ಲಿ ಮಹಾರಾಷ್ಟ್ರ ಸರ್ಕಾರ ಒಂದು ಪ್ರಸ್ತಾವವನ್ನು ಸಿದ್ಧಗೊಳಿಸಿತು.

ಹೊ : ಅದರ ಮುಖ್ಯಾಂಶಗಳೇನು ?

ಸಂ : ಅದರಲ್ಲಿ ಮುಖ್ಯವಾಗಿ ಎರಡು ಅಂಶಗಳಿವೆ. (ಅ) ಎಷ್ಟು ಭೂಮಿಯನ್ನು ವಶಪಡಿಸಿಕೊಳ್ಳಬಹುದೆಂಬುದಕ್ಕೆ ಮಿತಿ ಇಲ್ಲ; (ಆ) ಯಾವ ಭೂಮಿ, ಎಷ್ಟು ಮತ್ತು ಯಾವ ಕಾರ್ಖಾನೆಯ ಸ್ಥಾಪನೆಗೆ ಎಂಬುದನ್ನು ಖಾಸಗಿ ಕಂಪನಿಯು ತೀರ್ಮಾನಿಸುತ್ತದೆ, ಅದನ್ನು ಸರ್ಕಾರ ವಶಪಡಿಸಿಕೊಂಡು ಕಂಪನಿಗೆ ಕೊಡುತ್ತದೆ.

ಹೊ : ಈಚೆಗೆ ನಿಮ್ಮ ಹೋರಾಟ ಯಶಸ್ಸು ಕಂಡಿದೆ. ನಿನ್ನೆ ತಾನೆ ಮರಾಠಿ ಪತ್ರಿಕೆಯಲ್ಲಿ ನೋಡಿದೆ, ರಿಲಯನ್ಸ್ ಯೋಜಿಸಿದ್ದ ಸೆಜ್‌ಅನ್ನು ಕೈಬಿಡಲಾಗಿದೆ, ಎಂದು.

ಸಂ : ಅದು ಕಳೆದ ತಿಂಗಳಲ್ಲೇ ನಮಗೆ ತಿಳಿದಿತ್ತು. ಅದೊಂದು ದೊಡ್ಡ ಕತೆ. ಜನತೆಯ ಹೋರಾಟಕ್ಕೆ ಜಯವು ಖಚಿತ ಎಂಬುದಕ್ಕೆ ಇದು ಇನ್ನೊಂದು ಪುರಾವೆ ಒದಗಿಸಿದೆ.

ಹೊ : ಕತೆಯನ್ನು ಸ್ವಲ್ಪ ಹೇಳಿ.

ಸಂ : ರಿಲಯನ್ಸ್ ಇಲ್ಲಿ, ಅಂದರೆ ಪೇಣ್-ಉರಣ್ ಪ್ರದೇಶದಲ್ಲಿ, ಸೆಜ್ ಪ್ರಾರಂಭಿಸುತ್ತದೆಂಬ ವರದಿ ಇತ್ತು. ಅದರ ಪ್ರಮಾಣದ ಬಗ್ಗೆ ನಮಗೇನೂ ಗೊತ್ತಿರಲಿಲ್ಲ. ಮಾಹಿತಿ ಹಕ್ಕಿನ ಕಾಯ್ದೆಯಡಿ ತಿಳಿಯಲು ಯತ್ನಿಸಿದೆವು, ಆದರೆ ಭೂಮಿಯ ವಿಸ್ತೀರ್ಣ ನಿಖರವಾಗಿ ತಿಳಿಯಲಿಲ್ಲ. ಬಹಳ ದೊಡ್ಡ ಕಾರ್ಖಾನೆ, ರಫ್ತು ಮಾಡಲು ಸರಕಿನ ಉತ್ಪಾದನೆ, ಹೀಗೆ ಏನೇನೋ ಕೇಳಿಬರುತ್ತಿತ್ತು. ಆಮೇಲೆ ಗೊತ್ತಾಯಿತು, ಒಟ್ಟು ಮೂವತ್ತೈದು ಸಾವಿರ ಹೆಕ್ಟೇರ್ ಭೂಮಿ ಹೋಗುತ್ತದೆಂದು. ಬಹುಮಟ್ಟಿಗೆ ಫಲವತ್ತಾದ ಕೃಷಿ ಭೂಮಿ, ಭತ್ತದ ಬೆಳೆ. ಒಟ್ಟು ೪೬ ಹಳ್ಳಿಗಳು : ಪನ್ವೇಲ್ ವಿಭಾಗದ್ದು ೧, ಪೇಣ್‌ದು ೨೪ ಮತ್ತು ಉರಣ್‌ದು ೧೬. ಉರಣ್‌ನಲ್ಲಿ ಭಾರಿ ಬಂದರಿದೆ. ಈ ಹಳ್ಳಿಗೇಕೆ ಬಂದರು ಎಂದು ಉಪೇಕ್ಷಿಸಿದ್ದ ಸರ್ಕಾರ ಆಮೇಲೆ ಅಲ್ಲಿ ದೊಡ್ಡ ಆಧುನಿಕ ಬಂದರು ರಚಿಸಿತು. ಅದಕ್ಕೆಂದೇ ರಿಲಯನ್ಸ್‌ಗೆ ಅದರ ಹತ್ತಿರವೇ ಭಾರಿ ಪ್ರಮಾಣದ ಭೂಮಿ ಬೇಕು. ನಾವಿನ್ನೂ ಪೂರ್ತಿಯಾಗಿ ಗೆದ್ದಿಲ್ಲ, ಏಕೆಂದರೆ ರಿಲಯನ್ಸ್ ಅದನ್ನು ಕೈಬಿಟ್ಟಿಲ್ಲ, ಬೇರೇನೋ ತಂತ್ರ ಹೂಡಬಹುದು.

ಹೊ : ಸೆಜ್‌ನ ಸ್ವರೂಪವೇನು ?

ಸಂ : ಮೊದಲಿಗೆ ಕೇಂದ್ರ ಸರ್ಕಾರ ಹೇಳಿತ್ತು, ಒಟ್ಟು ಭೂಮಿಯ ಶೇ. ೩೫ ಕಾರ್ಖಾನೆಗೆ, ಮಿಕ್ಕಿದ್ದು ವಸತಿ, ಕಚೇರಿ, ಆಟದ ಮೈದಾನ, ಇತ್ಯಾದಿಗಳಿಗೆ ಎಂದು. ಕೆಲವು ಒತ್ತಡಗಳಿಂದಾಗಿ ಅದನ್ನು ೫೦:೫೦ ಪ್ರಮಾಣಕ್ಕೆ ನಿಗದಿಗೊಳಿಸಿದೆ. ಆದರೆ ಇದೆಲ್ಲಾ ಮಹಾ ಬೊಗಳೆ ಮತ್ತು ಮೋಸ. ಭೂಮಿ ಲಪಟಾಯಿಸಲು ಕತೆ ಕಟ್ಟುತ್ತಾರೆ, ಅಷ್ಟೆ. ಆಮೇಲೆ ವಿವಿಧ ಕಾರ್ಖಾನೆಗಳಿಗೆ ಭೂಮಿಯನ್ನು ಬಾಡಿಗೆಗೆ ಕೊಡುತ್ತಾರೆ, ಅದನ್ನೇ ಸೆಜ್ ಎಂದು ಕರೆಯುತ್ತಾರೆ. ಕೆಲವು ಔದ್ಯಮಿಕ ಸಂಸ್ಥೆಗಳು ಈಗಾಗಲೆ ತಮ್ಮ ತಮ್ಮ ಆಡಳಿತ ಮಂಡಳಿಗಳ ಮುಂದೆ ಪ್ರಸ್ತಾವಗಳನ್ನಿಟ್ಟಿವೆ. ಅದು ನಮಗೆ ಚೆನ್ನಾಗಿ ಗೊತ್ತು.

ಹೊ : ಜನರು ಸೆಜ್‌ಅನ್ನು ವಿರೋಧಿಸಿದ್ದಾರೆಯೆ ?

ಸಂ : ಮೊದಲು ಮೊದಲು ಜನರಲ್ಲಿ ಉತ್ಸಾಹ ತುಂಬಿತ್ತು. ಅಭಿವೃದ್ಧಿ ತಮ್ಮ ಊರಿಗೆ ಬಂತೆಂಬ ಖುಷಿ. ಎಷ್ಟೊಂದು ಉದ್ಯೋಗ, ಸಂಬಳ, ಎಂಬ ಕನಸು. ಮುಂಬೈಗೆ ಹತ್ತಿರವಿದೆ, ಹೆದ್ದಾರಿಯ ಅಕ್ಕಪಕ್ಕದಲ್ಲಿದೆ, ಆದ್ದರಿಂದ ತಮ್ಮ ಭೂಮಿಗೆ ಎಲ್ಲಿಲ್ಲದ ಬೆಲೆ ಬರುತ್ತದೆಂದು ನಲಿದಾಡುತ್ತಿದ್ದರು. ಸರ್ಕಾರ ಅದಕ್ಕೆ ತಣ್ಣೀರೆರಚಿತು : ಭೂಮಿಯನ್ನು ಕಡ್ಡಾಯವಾಗಿ, ನಿಗದಿತ ಬೆಲೆಗೆ, ವಶಪಡಿಸಿಕೊಳ್ಳಲಾಗುವುದು, ಎಂಬ ಪ್ರಕಟಣೆಯ ಮೂಲಕ. ಆಮೇಲೆ, ಬೆಲೆಯನ್ನು ಮಾಲಿಕ ಮತ್ತು ರಿಲಯನ್ಸ್ ಕಂಪನಿ ಪರಸ್ಪರವಾಗಿ ತೀರ್ಮಾನಿಸಿಕೊಳ್ಳಬಹುದೆಂದು ಸೂಚನೆ ನೀಡಿ ಪ್ರಕಟಣೆಯನ್ನು ಮಾರ್ಪಡಿಸಿತು. ಆಗ ನೋಡಿ, ಕೋಡಿ ಹರಿಯಲಾರಂಭವಾಯಿತು. ಭೂಮಿಯ ಮಾಲಿಕರಾಗಿ, ಎಲ್ಲೆಲ್ಲೋ ಇದ್ದುಕೊಂಡು ಭೂಮಿಯನ್ನು ಗುತ್ತಿಗೆಗೆ ಕೊಟ್ಟಿದ್ದರಲ್ಲಾ, ಅವರ ದಂಡೇ ಬಂದುಬಿಟ್ಟಿತು. ಅವರು ಹೇಳಿದ್ದೇ ಬೆಲೆ ಎಂಬ ಭಾವನೆ ಅವರದು.

ಹೊ : ಹಾಗಿದ್ದರೆ, ಹೋರಾಟ ಹೇಗೆ ಯೋಜಿಸಿದಿರಿ ?

ಸಂ : ನಮ್ಮ ಮೊದಲ ಹೆಜ್ಜೆ ಜನರಿಗೆ ವಿಷಯದ ಎಲ್ಲ ಮಗ್ಗುಲುಗಳನ್ನು ಪರಿಚಯಿಸುವುದು : ಶಾಸನ ಏನು, ಯೋಜನೆ ಏನು, ಪರಿಹಾರ ಎಂಥದು, ಉದ್ಯೋಗ

ಯಾರಿಗೆ, ಇತ್ಯಾದಿ. ಸರಿ, ಜನ ಅದನ್ನು ಕುರಿತು ಆಳವಾಗಿ ವಿಚಾರ ಮಾಡಲು ಆರಂಭಿಸಿದರು. ಬ್ಯಾಂಕುಗಳು ನೀಡುವ ಬಡ್ಡಿ ದರ ಸಹ ಎಷ್ಟು ಕಡಿಮೆ ಮತ್ತು ಇವರಿಡುವ ಠೇವಣಿಯಿಂದ ಆದಾಯ ಎಷ್ಟು ಕಮ್ಮಿ ಎಂಬುದನ್ನು ಮನವರಿಕೆ ಮಾಡಿಸಿದೆವು. ಅದರ ಪರಿಣಾಮವಾಗಿ ಬೇರೆ ಪ್ರಶ್ನೆಗಳನ್ನು ಜನರ ಮುಂದಿಡಲು ಸಾಧ್ಯವಾಯಿತು. ಮೂಲತಃ ಅಂತಹ ಪ್ರಶ್ನೆಗಳು ಮೂರು : (ಅ) ಈ ಪರಿಹಾರದ ಹಣದಿಂದ ಎಷ್ಟು ಕಾಲ ಜೀವನ ಹೊರೆಯಲು ಸಾಧ್ಯ ? (ಆ) ಇಲ್ಲಿ ಬರುವುವೆಲ್ಲಾ ತಾಂತ್ರಿಕ ಕೌಶಲ್ಯವಿದ್ದವರಿಗೆ ಉದ್ಯೋಗ ನೀಡುವಂತಹ ಕಂಪನಿಗಳು, ನಮ್ಮ ಹಳ್ಳಿಗಳಲ್ಲಿ ಅಂತಹ ಕೌಶಲ್ಯ ಇರುವವರು ಎಲ್ಲಿದ್ದಾರೆ? ಅವರಿಗೆ ಸಿಗಬಹುದಾದ ಕೆಲಸಗಳು ಜವಾನಿಕೆ, ರಿಕ್ಷಾ ಚಾಲನೆ, ತೋಟಗಾರಿಕೆ, ಇಂಥವು ಮಾತ್ರ; (ಇ) ಈಗ ಬೆಳೆಯುತ್ತಿರುವ ಉತ್ತಮ ತಳಿಯ ಭತ್ತ ಮತ್ತು ಸಮುದ್ರದಿಂದ ಮೀನುಗಾರಿಕೆ, ಎರಡೂ ನಾಶವಾಗುತ್ತವೆ; ಸಮುದ್ರಕ್ಕೆ ಪ್ರವೇಶ ದೊರೆಯದಷ್ಟು ವಿಶಾಲವಾದ ಪ್ರದೇಶ ರಿಲಯನ್ಸ್ ದಾಗಿರುತ್ತದೆ.

**ಹೊ :** ಅದಕ್ಕೆ ಜನರ ಪ್ರತಿಕ್ರಿಯೆ ಏನಾಗಿತ್ತು ?

**ಸಂ :** ಇವರು ಹೇಳುವುದು ಯಥಾರ್ಥವೆಂದು ಅವರಿಗೆ ಅನಿಸಿರಬೇಕು. ಆದರೆ ಸ್ವಾರಸ್ಯ ನೋಡಿ: ರಿಲಯನ್ಸ್‌ನವರು ಆ ಪ್ರದೇಶದ ಹಲವು ಯುವಕರಿಗೆ ತಿಂಗಳಿಗೆ ೫೦೦೦ ರೂ. ಕೊಟ್ಟು ತಮ್ಮ ಪರವಾಗಿ ಅಭಿಪ್ರಾಯ ಮೂಡಿಸಲು ಅವರನ್ನು ಬಳಸಿದರು. ಬಸ್ ಸ್ಟಾಪ್‌ಗಳಲ್ಲಿ, ಚಹಾ ಅಂಗಡಿಗಳಲ್ಲಿ, ಮಾರುಕಟ್ಟೆಯ ಬಳಿ, ಹೀಗೆ. ನಾವು ಹೇಳುತ್ತಿದ್ದುದು ಹುರುಳಿಲ್ಲದ ಮಾತೆಂದು ನಂಬಿಸುವುದು ಅವರ ಕೆಲಸ.

**ಹೊ :** ಅದಕ್ಕೆ ಪ್ರತಿಯಾಗಿ ನಿಮ್ಮ ಯೋಜನೆ ಏನು ರೂಪಿಸಿದಿರಿ ?

**ಸಂ :** ಮೊದಲು ಮುಂಬೈ-ಗೋವಾ ಹೆದ್ದಾರಿಯಲ್ಲಿ ಸಂಚಾರ ತಡೆದೆವು. ಪ್ರತಿಯೊಂದು ಹಳ್ಳಿಯಲ್ಲೂ ಸ್ಥಳೀಯ ಸಮಿತಿಯನ್ನು ರಚಿಸಿದೆವು. ಅದರಲ್ಲಿ ಎಲ್ಲ ಪಕ್ಷಗಳಿಗೂ ಪ್ರಾತಿನಿಧ್ಯವಿತ್ತು. ಸೆಜ್ ಬೆಂಬಲಿಗರಿಗೂ ಅವಕಾಶವಿತ್ತು. ಆ ಸಮಿತಿಗಳು ಇಂದಿಗೂ ಅದೇ ಸ್ವರೂಪ ಉಳಿಸಿಕೊಂಡಿವೆ. ಇದಲ್ಲದೆ ಒಂದು ರಾಜ್ಯ ಸಮಿತಿಯನ್ನು ರಚಿಸಿದೆವು. ಅದು ''ಜಾಗತೀಕರಣ ವಿರೋಧ ಕೃತಿ ಸಮಿತಿ.'' ಅದಕ್ಕೆ ರೈತ-ಕಾರ್ಮಿಕ ಪಕ್ಷದ ಎನ್. ಡಿ. ಪಾಟೀಲರು ಅಧ್ಯಕ್ಷರಾಗಿದ್ದರು. ನಮ್ಮ ಮಾಧ್ಯಮಗಳು ಬಹುಮಟ್ಟಿಗೆ ಜಾಗತೀಕರಣದ ಸ್ವಾಗತ ಸಮಿತಿಯಂತೆ ಕೆಲಸ ಮಾಡುತ್ತವೆ. ಆದ್ದರಿಂದ ಆಧುನಿಕ ಬೆಳವಣಿಗೆಗೆ ನಾವು ಅಡ್ಡಿಯುಂಟುಮಾಡುತ್ತಿದ್ದೇವೆಂದು ಹುಯಿಲೆಬ್ಬಿಸಿದವು. ಆದರೆ ನಾವು ಮಾಧ್ಯಮಗಳ ಮುಖಾಂತರವಷ್ಟೇ ಜನರನ್ನು ತಲುಪುವ ಸನ್ನಿವೇಶ ವಿರಲಿಲ್ಲ. ಅವರೊಡನೆ ನಾವು ನೇರವಾಗಿ ಒಗ್ಗೂಡಿದ್ದೆವು. ಅಷ್ಟೇ ಅಲ್ಲ, ಭೂಮಿಯನ್ನು ಕಳೆದುಕೊಳ್ಳಲು ಸಿದ್ಧ ರಾಗಿದ್ದವರೊಡನೆಯೂ ನಾವು ಸಂಪರ್ಕ ಕಲ್ಪಿಸಿ ಕೊಂಡೆವು. ಅವರೊಡನೆ ಚರ್ಚೆ ಬಹಳ ಅವಶ್ಯಕವಿತ್ತು. ಅತುಲ್ ಪೇಠೆಯವರ ಹೆಸರು ಕೇಳಿದ್ದೀರಾ ? ಅವರೊಂದು ಅದ್ಭುತವಾದ ಸಾಕ್ಷ್ಯಚಿತ್ರ ನಿರ್ಮಿಸಿದ್ದಾರೆ. ಸಾಧ್ಯವಾದಾಗ ಅದನ್ನು ನೋಡಿ. ಜನತೆಯಿಂದ ಬಂದ ಮಹತ್ತರ ಸವಾಲನ್ನು ಸಕಾರಾತ್ಮಕವಾಗಿ ಮತ್ತು ಸಂಕೀರ್ಣವಾಗಿ ಚಿತ್ರಿಸಿರುವ ಚಿತ್ರ ಅದು. ಸರ್ಕಾರಕ್ಕೆ ಅದೊಂದು ಮಹಾನ್ ಪ್ರತಿಬಂಧಕವಾಯಿತು. ಸರ್ಕಾರ ಸುಮ್ಮನೆ ಕೂರಲಿಲ್ಲ; ಇನ್ನೊಂದು ಪ್ರಕಟಣೆ ಹೊರಡಿಸಿ, ಆಕ್ಷೇಪಗಳಿದ್ದರೆ ಸಲ್ಲಿಸಬೇಕೆಂದು ಹೇಳಿತು. ಲಿಖಿತರೂಪದಲ್ಲಿ ಮೂರು ಸಾವಿರ ಆಕ್ಷೇಪಗಳು ದಾಖಲಾದವು. ನಾವು ಹೇಳಿದೆವು : ಇದು ಸರಿಯಲ್ಲ, ಪ್ರತಿಯೊಬ್ಬರೂ ತಮ್ಮ ಅಭಿಪ್ರಾಯ ತಿಳಿಸುವಂತಿರಬೇಕು, ಎಂದು. ಅದಕ್ಕೆ ಸಮಯ ಹಿಡಿಯುತ್ತದೆಂದು ಸರ್ಕಾರದ ಉತ್ತರ. ನಾವು ಜಿಲ್ಲಾ ಕಲೆಕ್ಟರ್‌ಅನ್ನು ಸಂಧಿಸಿ ಹೇಳಿದೆವು : ಪ್ರತಿ ತಿಂಗಳೂ ನಿಮಗೆ ಮಾಹಿತಿ ಹಕ್ಕಿನ ಕಾಯ್ದೆಯಡಿ ಮಾಹಿತಿಗಾಗಿ ಅರ್ಜಿ ಕೊಡುತ್ತೇವೆ ಮತ್ತು ನೀವು ಎಷ್ಟು ಭೂಮಿ ಕೊಂಡಿರಿ, ಎಷ್ಟನ್ನು ರಿಲಯನ್ಸ್‌ಗೆ ಕೊಟ್ಟಿರಿ ಎಂಬುದನ್ನು ತಿಳಿಸುತ್ತಿರಬೇಕು, ಎಂದು. ಅವರು ಸಜ್ಜನ ಎಂದೇ ಹೇಳಬೇಕು. ಕಾನೂನು ಪ್ರಕಾರ ಮಾಹಿತಿ ನೀಡಲು ಒಪ್ಪಿ, ಅಂತೆಯೇ ಮಾಡಿ, ಸಹಕರಿಸಿದರು. ಬಹಳ ಆಕರ್ಷಕ ಪರಿಹಾರ ನೀಡಿ ಒಟ್ಟು ಭೂಮಿಯ ಶೇಕಡ ಏಳರಷ್ಟನ್ನು ಕೂಡ ಅವರು ಪಡೆದುಕೊಳ್ಳಲಾಗಿರಲಿಲ್ಲ.

**ಹೊ :** ಅಂದರೆ, ಅದೊಂದು ವಿಜಯ ಸಾಧಿಸಿದಂತೆ...

**ಸಂ :** ವಿಜಯ ಏನೂ ಇಲ್ಲ, ಸರ್ಕಾರ ಒಂದು ಹೊಸ ಶಾಸನ ತಂದಿತು. ಅದಕ್ಕೆ ''ಸಾಠೀ ಕರಾರು'' ಎಂದು ಹೆಸರು. ರಿಲಯನ್ಸ್ ಕಂಪನಿಯು ಪ್ರತ್ಯೇಕವಾಗಿ ರೈತರ ಜೊತೆ ಮಾತುಕತೆ ನಡೆಸಿ ಬೆಲೆಯನ್ನು ನಿಗದಿಗೊಳಿಸಿಕೊಳ್ಳುತ್ತದೆ ಮತ್ತು ಅದನ್ನು ನಿರ್ದಿಷ್ಟ ಅವಧಿಯೊಳಗಾಗಿ ರೈತರು ಕಂಪನಿಗೆ ಮಾರಲೇಬೇಕು, ಎಂಬುದು ಆ ಕರಾರು. ಅದರಂತೆ ಭೂಮಿ ವಶಪಡಿಸಿಕೊಳ್ಳಲು ಒಬ್ಬ ವಿಶೇಷಾಧಿಕಾರಿಯ ನೇಮಕವಾಯಿತು. ಅದು ಪೇಣ್-ಉರಣ್ ಪ್ರದೇಶಗಳಿಗೆ ಸಂಬಂಧಿಸಿದ್ದು. ತಮಾಷೆ ಏನು ಗೊತ್ತೆ ? ಸರ್ಕಾರವು ಈ ಅಧಿಕಾರಿಗೆ ಕೊಟ್ಟಿದ್ದ ಹಳೆಯ ಕಟ್ಟಡ ಒಂದೇ ವಾರದಲ್ಲಿ ಸುಂದರವಾಗಿ ಝಗಮಗಿಸಲಾರಂಭಿಸಿತು ! ರಿಲಯನ್ಸ್ ಕಂಪನಿ ಅದಕ್ಕಾಗಿ ಹಣ ಖರ್ಚುಮಾಡಿತ್ತು. ರಿಲಯನ್ಸ್ ಇನ್ನೊಂದು ಚಮತ್ಕಾರ ಮಾಡಿತು. ರಾಜ್ಯ ಸರ್ಕಾರದ ಉನ್ನತ ಅಧಿಕಾರಿಗಳನ್ನು ತನ್ನತ್ತ ಆಕರ್ಷಿಸಿಕೊಂಡಿತು. ಅದರಲ್ಲಿ ಸರ್ಕಾರ ಶಾಮೀಲಾಗಿತ್ತು. ಉಪಾಯ ಬಹಳ ಸರಳ : ಈ ಸರ್ಕಾರಿ ಉನ್ನತಾಧಿಕಾರಿ ರಿಲಯನ್ಸ್, ಮಹೀಂದ್ರ, ಮುಂತಾದ ಕಂಪನಿಗಳಿಗೆ 'ಲೀನ್' ಮೇಲೆ ಹೋಗಿ ಅಲ್ಲಿ ಕಂಪನಿ ಪರವಾಗಿ ಕೆಲಸ ಮಾಡುತ್ತಾನೆ. ರಾಜಿನಾಮೆ ಕೊಟ್ಟಿಲ್ಲ, ಬೇಕಾದಾಗ ಹಿಂದಿರುಗುತ್ತಾನೆ ! ಅವನಿಲ್ಲದಾಗ ಅವನ ಸ್ಥಾನದಲ್ಲಿ ಅವನಿಗಿಂತಲೂ ಕಿರಿಯ ಅಧಿಕಾರಿ ಇರುತ್ತಾನೆ. ಈ ಮಹಾರಾಯ ಎಂದು ಹಿಂದಿರುಗಿ ತನಗೆ ಕಿರುಕುಳ ಕೊಡುತ್ತಾನೋ ಎಂಬ ಭಯ ಇವನಿಗೆ; ಆದ್ದರಿಂದ ಅವರಿಗೆ ತಾಳ ಹಾಕಲು ಇವನು ಹೇಸುವುದಿಲ್ಲ. ಸರ್ಕಾರ ಮತ್ತು ಅದರ ಅಧಿಕಾರಿಗಳ ನೀಚಪಾತ್ರಕ್ಕೆ ಇದೊಂದು ಉದಾಹರಣೆ. ಮಂತ್ರಿಗಳು ಮತ್ತು ಕಂಪನಿಗಳು ಹಾಗೆ ಪೂರಕವಾಗಿರುತ್ತಾರೆ. ಭ್ರಷ್ಟಾಚಾರ ಯಾವ ಮಟ್ಟದ್ದೆಂದು ನೀವೇ ಲೆಕ್ಕ ಮಾಡಿಕೊಳ್ಳಿ.



ಸಾನೆ ಗುರೂಜಿ ಕೇಂದ್ರದ ಕಾರ್ಯಕರ್ತ ಮತ್ತು ಸಂಜೀವ್ ಸಾನೆ

**ಹೊ :** ಹಾಗಿದ್ದಾಗ ನೀವೇನು ಮಾಡಿದಿರಿ ಮತ್ತೆ ?

**ಸಂ :** ಇನ್ನೇನು ಮಾಡುವುದು : ಸೆಜ್ ವಿರುದ್ಧದ ವಾತಾವರಣ ಕಲ್ಪಿಸುವುದು. ಭೂಮಿ ಮಾರಲೇಬೇಕೆಂಬುದು ಶಾಸನದ ೬ನೇ ನಿಬಂಧದಲ್ಲಿತ್ತು. ಮೊದಲು ಅದನ್ನು ಕಿತ್ತುಹಾಕಬೇಕೆಂದು ಆಗ್ರಹಿಸಿ ಉಪವಾಸ ಸತ್ಯಾಗ್ರಹ ಹೂಡಿದೆವು. ಅಧ್ಯಕ್ಷ ಎನ್. ಡಿ. ಪಾಟೀಲರ ದೇಹಾರೋಗ್ಯ ಚೆನ್ನಾಗಿರಲಿಲ್ಲ ಆದರೆ ಜನತೆಗೆ ಮಾತುಕೊಟ್ಟಿರುವುದರಿಂದ ತಾವು ಹಿಂದೆ ಸರಿಯುವುದಿಲ್ಲವೆಂದು ಹೇಳಿ ಅವರು ಉಪವಾಸ ಕೂತರು. ಅವರ ಜೊತೆ ನಾವು ನೂರಾರು ಮಂದಿ ಇದ್ದೆವು. ಅವರನ್ನು ಆಸ್ಪತ್ರೆಗೆ ಸಾಗಿಸಿದರು. ಅಲ್ಲೂ ಪಾಟೀಲರು ಉಪವಾಸ ಮುಂದುವರಿಸಿದರು. ಜನರಿಗೆ ಉಗ್ರ ಕೋಪ ಬಂದಿತ್ತು, ಅದು ಸರ್ಕಾರಕ್ಕೂ ತಿಳಿಯಿತು. ಆಗ ಮುಖ್ಯಮಂತ್ರಿ ವಿಲಾಸರಾವ್ ದೇಶಮುಖ್, ಎಲ್ಲ ಹಳ್ಳಿಗಳಲ್ಲೂ ಸಾರ್ವಜನಿಕ ಅಭಿಪ್ರಾಯ ಪಡೆಯುವ ಆಶ್ವಾಸನೆ ನೀಡಿ, ಉಪವಾಸವನ್ನು ಮುಕ್ತಾಯಗೊಳಿಸಬೇಕೆಂದು ವಿನಂತಿಸಿಕೊಂಡರು. ಆದರೆ ನಮ್ಮಲ್ಲಿ



ಕೆಲವರಿಗೆ ಅದು ಒಪ್ಪಿಗೆಯಾಗಲಿಲ್ಲ. 'ಅದು ಮತ್ತೊಂದು ಬೋನು, ಅಷ್ಟೆ; ಅದರಲ್ಲಿ ಸಿಕ್ಕಿಬೀಳುವುದು ಬೇಡ,' ಎಂದರು ಮೇಧಾ ಪಾಟ್ಕರ್. ನಾವು ಕೆಲವರು ಹಳ್ಳಿಗಳೊಡನೆ ನಿಕಟ ಸಂಪರ್ಕ ಇದ್ದವರು. ನಾವು ಸವಾಲು ಸ್ವೀಕರಿಸೋಣ ಎಂಬ ನಿರ್ಧಾರ ನಮ್ಮದು. ಆದರೆ ಹೇಗೆ? ಸಾರ್ವಜನಿಕ ಅಭಿಪ್ರಾಯದ ಸಂಗ್ರಹವು ಮತಚಲಾವಣೆಯ ರೀತಿಯಲ್ಲಿರಬೇಕೆಂಬ ಷರತ್ತು ವಿಧಿಸಿದೆವು, ಸರ್ಕಾರ ಅದಕ್ಕೆ ಒಪ್ಪಿತು. ನಾವು ಹೇಳಿದೆವು, ಪ್ರತಿಯೊಬ್ಬರ ಅಭಿಪ್ರಾಯವನ್ನೂ ಲಿಖಿತರೂಪದಲ್ಲಿ ಪಡೆಯಬೇಕು, ಎಂದು. ಅಭಿಪ್ರಾಯ ತಿಳಿಸುವ ಮಾದರಿ ಪತ್ರಗಳನ್ನು ಸರ್ಕಾರಕ್ಕೆ ಕೊಟ್ಟೆವು. ಅದರಲ್ಲಿ ಬೇಕು-ಬೇಡ ಎರಡೂ ಇದ್ದವು. ನಮ್ಮ ಒತ್ತಾಯ ಹೀಗಿತ್ತು: ಪ್ರತಿಯೊಬ್ಬರೂ ತಮ್ಮ ಅಭಿಪ್ರಾಯವನ್ನು ತಿಳಿಸುವ ಪತ್ರದ ಮೂರು ಪ್ರತಿಗಳನ್ನು ಕೊಡತಕ್ಕದ್ದು; ಒಂದು ಸರ್ಕಾರಿ ಅಧಿಕಾರಿಗೆ, ಒಂದು ಪತ್ರ ಸ್ವೀಕರಿಸಿದ್ದಕ್ಕೆ ದಾಖಲೆ – ಅದು ರೈತನ ಬಳಿ ಇರುತ್ತದೆ; ಇನ್ನೊಂದು ಚಳುವಳಿಯ ಕೇಂದ್ರ ಕಚೇರಿಗೆ.

**ಹೊ :** ಇಂತಹ ಷರತ್ತಿಗೆ ಸರ್ಕಾರ ಒಪ್ಪಿಗೆ ನೀಡುವುದುಂಟೆ ?

**ಸಂ :** ಅದೇ ವಿಶೇಷ. ಚುನಾವಣೆಯಲ್ಲಿ ಅನುಸರಿಸುವ ತಂತ್ರ ಇಲ್ಲೂ ಜಾರಿಗೊಳಿಸಿದರಾಯಿತು, ಎಂಬುದು ಅವರ ಸನ್ನಾಹ. ಆದ್ದರಿಂದ ಸರ್ಕಾರ ಒಪ್ಪಿತು. ಇದು ನಮಗೆ ಅತ್ಯಂತ ಮುಖ್ಯವಾದ ಸಂದರ್ಭವಾಗಿಬಿಟ್ಟಿತು. ಪ್ರತಿಯೊಬ್ಬ ರೈತನನ್ನೂ ಸಂಪರ್ಕಿಸಿ ಅವರು ಎಚ್ಚರ ವಹಿಸಬೇಕೆಂದು ಮನವಿ ಮಾಡಿಕೊಂಡೆವು. ನಿಮ್ಮ ತೀರ್ಮಾನ ಗಟ್ಟಿಯಾಗಿರಲಿ, ಭೂಮಿ ಉಳಿಯುವುದು ಅಥವಾ ಹೋಗುವುದು ಅದನ್ನವಲಂಬಿಸಿದೆ, ಎಂದು ಪರಿಪರಿಯಾಗಿ ವಿವರಿಸಿದೆವು. ರೈತರು ತಮ್ಮ ಅಭಿಪ್ರಾಯವನ್ನು ಲಿಖಿತರೂಪದಲ್ಲಿ ಕಲೆಕ್ಟರ್‌ಗೆ ಸಲ್ಲಿಸಿದರು. ಅವರು ಯಾವ ದೋಷವೂ ಇಲ್ಲದಂತೆ ಕೆಲಸ ನಿರ್ವಹಿಸಿದರು. ಅವರ ಬಗ್ಗೆ ನಮಗೆ ಅಪಾರ ಗೌರವವಿದೆ, ಏಕೆಂದರೆ ಸರ್ಕಾರ ಮತ್ತು ರಿಲಯನ್ಸ್‌ನ ಒತ್ತಾಯಕ್ಕೆ ಅವರು ಮಣಿಯಲಿಲ್ಲ, ಸಂಪೂರ್ಣವಾಗಿ ವಸ್ತುನಿಷ್ಠವಾಗಿ ನಡೆದುಕೊಂಡರು. ಎಲ್ಲವನ್ನೂ ಮುಕ್ತವಾಗಿ, ಪಾರದರ್ಶಕವಾಗಿ, ನಡೆಸಿದರು. ಈಗಲೂ ರೈತರ ಅಭಿಪ್ರಾಯದ ಪತ್ರಗಳು ಅವರಲ್ಲೇ ಇವೆ.

**ಹೊ :** ಹಾಗಿದ್ದರೆ ಸರ್ಕಾರ ಏನು ಮಾಡಿತು ?

**ಸಂ :** ರೈತರ ಬಹುಮತ ಅಭಿಪ್ರಾಯ ಏನಾಗಿತ್ತೆಂದು ನಮಗೆ ತಿಳಿಯಿತು, ರೈತರಿಗೂ ತಿಳಿದಿತು. ನಮಗೆ ತಿಳಿದಿತ್ತೆಂದು ಸರ್ಕಾರಕ್ಕೂ ತಿಳಿದಿತ್ತು. ಆದ್ದರಿಂದ ಸರ್ಕಾರ [illegible] ಪ್ರದರ್ಶಿಸಲು [illegible]; ಸಾರ್ವಜನಿಕ ಅಭಿಪ್ರಾಯ ಯಾವ ಕಡೆಗೆ [illegible] ಪ್ರಕಟವಾದ [illegible]

ಈ ಸಂದರ್ಶನದ ತರುವಾಯದಲ್ಲಿ ನಾನು, ಡಾ॥ ಎನ್. ಗಾಯತ್ರಿ ಮತ್ತು ಬಿ. ಮೈತ್ರಿ ಲೋನಾವಾಲ್ಕಕ್ಕೆ ತೆರಳಿದೆವು. ಅಲ್ಲಿ ಕೈವಲ್ಯಧಾಮದ ಕಾರ್ಯದರ್ಶಿ ಶ್ರೀ ಓ. ಪಿ. ತಿವಾರಿಯವರ ಬಳಿ ಈ ಸಂದರ್ಶನದ ವಿವರಗಳನ್ನು ಪ್ರಸ್ತಾಪಿಸಿದೆ. ಅವರು ಪೇಣ್-ಉರಣ್ ರೈತರ ಹೋರಾಟಕ್ಕೆ ಬೆಂಬಲ ನೀಡಿದ್ದಾರಾದರೂ ಅದರ ಯಶಸ್ಸಿನ ಬಗ್ಗೆ ಸಂಶಯ ವ್ಯಕ್ತಪಡಿಸುತ್ತಾರೆ. ಅದಕ್ಕೆ ಅವರ ಅನುಭವವೇ ಆಧಾರವೆನ್ನುತ್ತಾರೆ. ಅವರ ವಿವರಣೆ ಸಂಕ್ಷಿಪ್ತವಾಗಿ ಹೀಗಿದೆ: ಮುಂಬೈ ಬಂದರಿನಿಂದ ಅಲಿಬಾಗ್‌ಗೆ ನೌಕಾಪ್ರಯಾಣ ಸಾಧ್ಯವಿದೆ. ಉರಣ್ ಇರುವುದು ಅಲಿಬಾಗ್‌ನಿಂದ ೧೫ ಕಿಲೋಮೀಟರ್ ದೂರದಲ್ಲಿ. ರಿಲಯನ್ಸ್‌ನ ಒಂದು ಯೋಜನೆ ಸಮುದ್ರದಾಳದಲ್ಲಿ ಒಂದು ಸುರಂಗ ನಿರ್ಮಿಸಿ ವಾಹನ ಸಂಚಾರಕ್ಕೆ ಅವಕಾಶ ಕಲ್ಪಿಸಿಕೊಳ್ಳುವುದು. (ಬ್ರಿಟನ್ ಮತ್ತು ಫ್ರಾನ್ಸ್‌ಗಳ ನಡುವಿನ ಸುರಂಗದಂತೆ). ಆಗ ಮುಂಬೈನಿಂದ ಈ ಪ್ರದೇಶಕ್ಕೆ ಬರಲು ಕೆಲವು ನಿಮಿಷಗಳು ಸಾಕು, ಈಗಿನಂತೆ ಸಂಚಾರ ದಟ್ಟಣೆಯನ್ನು ದಾಟಿ ಪನ್ವೇಲ್ ಮುಖಾಂತರ ಬರಬೇಕಾಗಿಲ್ಲ. ರಿಲಯನ್ಸ್ ಭೂಮಿ ಪಡೆದುಕೊಳ್ಳುವ ಹುನ್ನಾರವನ್ನು ಕೈಬಿಟ್ಟಿಲ್ಲ. ಯಾರದೋ ಭೂಮಿಯಲ್ಲಿ ಯಾರೋ ಒಂದಷ್ಟು ಮನೆಗಳನ್ನು ಕಟ್ಟಿ, ಭೂಮಿಯು ರಿಲಯನ್ಸ್‌ಗೆ ಸೇರಿದಾಗ ಅದಕ್ಕೆ ಪರಿಹಾರ ಪಡೆದುಕೊಳ್ಳಲು ಸಜ್ಜಾಗಿ ನಿಂತಿದ್ದಾರೆ. ಉದಾಹರಣೆಗೆ, ಅಲಿಬಾಗ್‌ನಿಂದ ಹತ್ತು ಕಿಲೋಮೀಟರ್ ದೂರದಲ್ಲಿ ನಾರಂಗಿ ಇದೆ. (ಇದು ಕನಕೇಶ್ವರ ಬೆಟ್ಟದ ಬಳಿ ಇದೆ, ಮಾವಿನ ತೋಪುಗಳ ಜಾಗ, ನಾನು ಹಲವು ಬಾರಿ ಅಲ್ಲಿಗೆ ಹೋಗಿಬಂದಿದ್ದೇನೆ). ಅಲ್ಲಿ ಕೈವಲ್ಯಧಾಮಕ್ಕೆ ಸೇರಿದ ಐವತ್ತು ಎಕರೆ ಜಮೀನಿದೆ, ೧೯೨೦-೩೦ರ ದಶಕದಲ್ಲಿ ಕೊಂಡಿದ್ದದ್ದು. ಅದರಲ್ಲಿ ಐದು ಎಕರೆಯನ್ನು ಕಬಳಿಸಲು ಯಾರೋ ಆಗಲೆ ಅನಧಿಕೃತ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ರಿಲಯನ್ಸ್ ಏಜೆಂಟರು ತಮಗೆ ಖಾಸಗಿಯಾಗಿ (ಅಂದರೆ, ಕಂಪನಿಗಲ್ಲ) ೫೦ ಎಕರೆಯನ್ನೂ ಮಾರಿಬಿಡುವಂತೆ ಒತ್ತಾಯಿಸುತ್ತಿದ್ದಾರೆ, ಅದಕ್ಕೆ ಐದು ಕೋಟಿ ರೂಪಾಯಿ ಕೊಡಲು ಮುಂದಾಗಿದ್ದಾರೆ. ಇಲ್ಲಿ ಸೆಜ್‌ನ ಹೆಸರೇ ಇಲ್ಲ, ಎಲ್ಲಾ ಖಾಸಗಿ ವ್ಯವಹಾರ. ಆದರೆ ಈ ಖಾಸಗಿ ಜನ ರಿಲಯನ್ಸ್‌ನ ಏಜೆಂಟರು. ತಾವು ''ಖಾಸಗಿ''ಯಾಗಿ ಕೊಳ್ಳುವುದು ರಿಲಯನ್ಸ್‌ಗಾಗಿ, ರಿಲಯನ್ಸ್ ಪರವಾಗಿ. ನಂತರ ಅವರೆಲ್ಲಾ ಭೂಮಿಯನ್ನು ರಿಲಯನ್ಸ್‌ಗೆ ಮಾರಿದಂತೆ ಮಾಡಿ ಹಸ್ತಾಂತರಿಸುತ್ತಾರೆ. ಇದು ಒಳಗೊಳಗೇ ನಡೆಯುತ್ತಿರುವ ವ್ಯವಹಾರ.

ಹಾಗಿದ್ದರೆ, ಅಂತಿಮವಾಗಿ ಗೆಲ್ಲುವವರು ಯಾರು? ಸರ್ಕಾರವು ರೈತರನ್ನು ರಕ್ಷಿಸುತ್ತದೆಯೋ, ಅಥವಾ ಭ್ರಷ್ಟಾಚಾರದ ಬೆಂಕಿಯನ್ನು ಹೊತ್ತಿಸಿ ಕಂಪನಿಯ ಪೋಷಕನಾಗುತ್ತದೆಯೋ? ರಿಲಯನ್ಸ್ ಆಗಲಿ ಬೇರೆ ಭಂಡ ಬಂಡವಾಳಶಾಹಿ ಕಂಪನಿಗಳಾಗಲಿ ಕಾಡಿನ ಹುಲಿಗಳಿದ್ದಂತೆ; ಅವು ತಮ್ಮ ಪಟ್ಟೆಗಳನ್ನು ಬದಲಾಯಿಸಿಕೊಳ್ಳುವುದಿಲ್ಲ. ಕಾಡಿನ ಹುಲಿಗಳನ್ನು ರಕ್ಷಿಸಬೇಕು, ನಿಜ; ಆದರೆ ನಾಡಿನ ಹುಲಿಗಳಿಗೆ ಏನು ಮಾಡಬೇಕು? ಪೇಣ್-ಉರಣ್ ಪ್ರದೇಶದ ರೈತರೊಡನೆ ನಾಡಿನ ಇಡೀ ಜನತೆ ತೀರ್ಮಾನಿಸಬೇಕಾಗಿದೆ.

- ಜಿ ಆರ್.

ಸರ್ಕಾರದ ತಂತ್ರವಾಯಿತು. ಈ ಮಧ್ಯೆ ನಾವು ಇನ್ನೊಂದು ಕೆಲಸ ಮಾಡಿದ್ದೆವು : ಸಹಕಾರಿ ಬ್ಯಾಂಕುಗಳಿಂದ ಮತ್ತು ಬೇರೆ ಬ್ಯಾಂಕುಗಳಿಂದ ಸಾಲ ಪಡೆಯಲು ರೈತರು ತಮ್ಮ ಭೂಮಿಯನ್ನು ಒತ್ತೆಯಿಟ್ಟಿದ್ದರಲ್ಲಾ, ಆದ್ದರಿಂದ ಬ್ಯಾಂಕುಗಳೂ ತಮ್ಮ ಅಭಿಪ್ರಾಯವನ್ನು ಕಲೆಕ್ಟರ್‌ಗೆ ಸಲ್ಲಿಸುವಂತೆ ವಿನಂತಿಸಿಕೊಂಡೆವು.

**ಹೊ :** ಅದರಿಂದೇನು ಪ್ರಯೋಜನ ? ಭೂಮಿ ಕೊಳ್ಳುವ ರಿಲಯನ್ಸ್‌ಗೆ ಅದೇನು ದೊಡ್ಡ ಹೊರೆಯೆ ?

**ಸಂ :** ಹೊರೆಯಲ್ಲದಿರಬಹುದು, ಆದರೆ ಕಾನೂನಿನ ತೊಡಕಾದರೂ ಇರುತ್ತದಲ್ಲ! ಜೊತೆಗೆ ಇನ್ನೊಂದು ವಿಷಯವಿತ್ತು. ಹೆಟಾಣೆ ಎಂಬ ಹಳ್ಳಿಯ ಬಳಿ ನದಿಗೆ ಅಡ್ಡಕಟ್ಟೆ ಹಾಕಲಾಗಿದೆ. ಅದಕ್ಕೆ ೩.೨೫ ಕೋಟಿ ರೂಪಾಯಿ ಖರ್ಚಾಗಿದೆ. ಅದರ ಅಚ್ಚುಕಟ್ಟಿನಲ್ಲಿ ೨೨ ಹಳ್ಳಿಗಳು ಬರುತ್ತವೆ. ಆ ಹಳ್ಳಿಗಳಿಗೆ ಅಣೆಕಟ್ಟೆಯಿಂದ ನೀರು ಕೊಡಬೇಕೆಂಬ ನಿರ್ಬಂಧವಿಲ್ಲ, ಹಾಗೇನೂ ಒಪ್ಪಂದವಿಲ್ಲ, ಎಂದು ಸರ್ಕಾರ ಹೇಳಿತು. ಅಂದರೆ, ಅವರು ಭೂಮಿಯನ್ನು ಕೊಟ್ಟುಬಿಡಲಿ ಎಂಬುದು ಸರ್ಕಾರದ ಒತ್ತಡ ತಂತ್ರ. ಅಲಿಬಾಗ್‌ನಲ್ಲಿರುವ ಕಲೆಕ್ಟರ್ ಹೇಳಿದರು, ಸರ್ಕಾರದ ಹೇಳಿಕೆ ತಪ್ಪು; ಅಣೆಕಟ್ಟು ಕಟ್ಟಿದ್ದೇ ಈ ಹಳ್ಳಿಗಳಿಗಾಗಿ ಎಂಬುದು ದಾಖಲೆಗಳಲ್ಲಿದೆ, ಎಂದು. ಅಂತಹ ಕಲೆಕ್ಟರ್‌ಗಳು ನಿಮಗೆ ಎಷ್ಟು ಜನ ಸಿಕ್ಕುತ್ತಾರೆ? ಅವರು ಹಾಗೆಂದನಂತರ ಪರಿಸರ ವಿಭಾಗವೂ ರೈತರ ಪರವಾಗಿ ನಿಂತಿತು, ಸೆಜ಼್ ಹೇಗೆ ಪ್ರತಿಕೂಲವೆಂದು ವರದಿ ನೀಡಿತು.

**ಹೊ :** ಅದು ನಿಮಗೆ ಪ್ರಶಸ್ತವಾದ ಅಸ್ತ್ರವಾಗಿದ್ದಿರಬೇಕಲ್ಲವೆ ?

**ಸಂ :** ನಾವು ನೇರವಾಗಿ ಸಾರ್ವಜನಿಕ ಅಭಿಪ್ರಾಯದ ವಿವರಗಳನ್ನು ಪ್ರಕಟಿಸಿ ಬಹುಮತ ಸೆಜ಼್ ವಿರುದ್ಧವಾಗಿದ್ದಿತೆಂದು ಇಡೀ ರಾಜ್ಯಕ್ಕೆ ತಿಳಿಸಿಬಿಟ್ಟೆವು. 'ಭೂಮಿಯನ್ನು ಬಿಡುವುದಿಲ್ಲ' ಎಂಬುದು ರೈತರ ಒಕ್ಕೊರಲಿನ ಘೋಷಣೆಯಾಗಿತ್ತು. ಈಗ ಎಂತಹ ವಾತಾವರಣ ಉಂಟಾಗಿದೆಯೆಂದರೆ, ಸರ್ಕಾರ ಯಾವ ಯೋಜನೆಗೆ ಭೂಮಿ ಪಡೆಯಲು ಹೊರಟರೂ ರೈತರು ಹೇಳುತ್ತಿದ್ದಾರೆ, 'ನಮ್ಮ ಅಭಿಪ್ರಾಯ ಪಡೆಯಿರಿ', ಎಂದು.

**ಹೊ :** ಇದೊಂದು ಅದ್ಭುತ, ಅನುಕರಣೀಯ ಸಾಧನೆ.

**ಸಂ :** ಜನತೆಗೆ ಮನದಟ್ಟು ಮಾಡಿಕೊಟ್ಟರೆ ಅವರು ಗಟ್ಟಿಯಾಗಿ ನಿಲ್ಲುತ್ತಾರೆ, ಭೂಮಿ ರಕ್ಷಿಸಿಕೊಳ್ಳುತ್ತಾರೆ. ಈಗ ಹಳ್ಳಿಗಳಲ್ಲಿ ರೈತರು ಹೇಳುತ್ತಾರೆ, ಒಂದು ಕೋಟಿ ರೂಪಾಯಿ ಕೊಟ್ಟರೂ ಭೂಮಿ ಕೊಡುವುದಿಲ್ಲ, ಎಂದು. ಎಷ್ಟೋ ಹಳ್ಳಿಗಳಿಗೆ ರಿಲಯನ್ಸ್ ಮತ್ತೆ ತನ್ನ ಏಜೆಂಟರನ್ನು ಕಳಿಸಿ ರೈತರ ಮನವೊಲಿಸಲು ಯತ್ನಿಸಿತು. ಹಳ್ಳಿಗಳು ಅವರಿಗೆ ಪ್ರವೇಶ ನಿರಾಕರಿಸಿದುವು. ಈಗಲೂ ಪ್ರಯತ್ನಗಳನ್ನು ಕೈಬಿಟ್ಟಿಲ್ಲದಿರಬಹುದು. ಇನ್ನು ಮುಂದೆ ಏನೆಂಬುದನ್ನು ಕಾದು ನೋಡಬೇಕು.

**ಹೊ :** ಸೆಜ಼್‌ಗೆ ವಿರೋಧವಾದರೂ ಏಕೆ ? ಅದು ಅಭಿವೃದ್ಧಿ ಮಾರ್ಗವೆಂದು ಕೆಲವು ಅರ್ಥಶಾಸ್ತ್ರಜ್ಞರೂ ಹೇಳುತ್ತಿರುತ್ತಾರಲ್ಲ...

**ಸಂ :** ಅಭಿವೃದ್ಧಿಯೆಂದರೆ ಯಾವುದೆಂಬುದರ ವ್ಯಾಖ್ಯಾನ ಅತಿಮುಖ್ಯ. ಸೆಜ಼್ ಶಾಸನ ಬಂದಾಗ ಅದರಲ್ಲೇನಿತ್ತು ಗೊತ್ತೆ? ಸೆಜ಼್ ಪ್ರದೇಶವನ್ನು ವಿದೇಶಿ ಪ್ರದೇಶವೆಂದು ಪರಿಗಣಿಸಲಾಗುತ್ತದೆ, ಎಂದು. ಅಂದರೆ, ಅಲ್ಲಿ ನಮ್ಮ ಕಾನೂನು ಅನ್ವಯವಾಗುವುದಿಲ್ಲ, ಉದ್ಯೋಗಿಗಳನ್ನು ಬೇಕಾದಾಗ ಒದ್ದೋಡಿಸಬಹುದು, ಬೇಕಾದ ಹಾಗೆ ದುಡಿಸಿಕೊಳ್ಳಬಹುದು; ತೆರಿಗೆಯ ವಿನಾಯಿತಿ ಬೇರೆ. ಇದನ್ನು ಆಕ್ಷೇಪಿಸಿದಾಗ ಕೇಂದ್ರ ಸರ್ಕಾರ ಹೇಳಿತು, ಅದನ್ನೆಲ್ಲಾ ಕಿತ್ತುಹಾಕುವ ತಿದ್ದುಪಡಿ ತರಲಾಗುತ್ತದೆ, ಎಂದು. ಈವರೆಗೆ ಯಾವ ತಿದ್ದುಪಡಿಯನ್ನೂ ತಂದಿಲ್ಲ, ಬಹುಶಃ ತರುವುದೂ ಇಲ್ಲ. ಇನ್ನೊಂದು ಅಂಶವಿದೆ, ಅದನ್ನು ವಿಚಾರ ಮಾಡಿ : ಸೆಜ಼್‌ನಲ್ಲಿ ಏನು ಸ್ಥಾಪಿಸುತ್ತಾರೆ ? ಹೊರಗೆಲ್ಲೋ ಇರುವ ಕಾರ್ಖಾನೆಗಳನ್ನು ಇಲ್ಲಿಗೆ ಸ್ಥಳಾಂತರಿಸುತ್ತಾರೆ. ಅಲ್ಲಿಯೂ ಭೂಮಿಯ ಕಬಳಿಕೆ, ಇಲ್ಲೂ ಭೂಮಿಯ ಲಾಭ! ಇನ್ನೇನು ಬೇಕು ? ಕಾರ್ಖಾನೆಯಲ್ಲಿ ಉತ್ಪಾದಿಸುವುದನ್ನೆಲ್ಲಾ ರಫ್ತು ಮಾಡಬೇಕೆಂಬ ನಿರ್ಬಂಧವಿದೆ. ಅದನ್ನು ಹೇಗೆ ಜಾರಿಗೊಳಿಸುತ್ತಾರೆ ? ವಿದೇಶಿ ಮಾರುಕಟ್ಟೆ ಖಾಲಿ ಬಿದ್ದಿದೆಯೆ ನಮ್ಮ ಉತ್ಪಾದನೆಗಳನ್ನು ತುಂಬಿಕೊಳ್ಳಲು ? ಹಾಗಿದ್ದರೆ, ಉತ್ಪನ್ನವನ್ನೇನು ಮಾಡಬೇಕು ? ಯಥಾಪ್ರಕಾರ ನಮ್ಮ ದೇಶದ ಮಾರುಕಟ್ಟೆಗೇ ತುಂಬಬೇಕು ? ''ರಫ್ತು'' ಎಂಬ ನಿಯಮ ಎಲ್ಲಿಗೆ ಹೋಯಿತು! ಒಟ್ಟಿನಲ್ಲಿ, ನಮಗೆ ಅಗತ್ಯವಾಗಿರುವುದು ಜಾಗತೀಕರಣದ ವಿರುದ್ಧವಾಗಿ ಹೋರಾಡಲು ಇಡೀ ದೇಶದಲ್ಲಿ ಒಂದು ವಿಶಾಲವಾದ ಹೋರಾಟದ ವೇದಿಕೆ. ಸೆಜ಼್ ವಿರುದ್ಧದ ಹೋರಾಟ ಅದರ ಒಂದು ಅವಿಭಾಜ್ಯವಾದ ಅಂಗವಾಗಿರುತ್ತದೆ.

**ಹೊ :** ಅನೇಕ ಹೋರಾಟದ ಹೆಜ್ಜೆಗಳನ್ನು ವಿವರಿಸಿದ್ದೀರಿ. ನಿಮಗೆ ಮತ್ತು ಪೇಣ್-ಉರಣ್ ರೈತಬಾಂಧವರಿಗೆಲ್ಲಾ ನಮ್ಮ ಅಭಿನಂದನೆಗಳು. ಹಿಂಬಾಗಿಲಿನಿಂದ ಮತ್ತೆ ರಿಲಯನ್ಸ್ ನುಗ್ಗಿ ಬರದಂತೆ ಕಾಯ್ದುಕೊಳ್ಳಲು ನಿಮಗೆ ಸಾಧ್ಯವಾಗಲೆಂದು 'ಹೊಸತು' ಬಳಗ ಆಶಿಸುತ್ತದೆ. ●

# ದಂಡೆಯಲ್ಲಿ ಸಿಕ್ಕ ಹುಡುಗಿ



ಬಹುಶಃ ಅವಳಿಗೆ
ದಂಡೆಯೆಂದರೆ ಪ್ರೀತಿ.
ಅವಳು ನಡೆದುಬರುವ ಲಾಸ್ಯಕ್ಕೆ
ಹೆಜ್ಜೆಗಳ ತಂಪಾಗಿಸಲು
ಕಡಲ ಅಲೆಗಳು ಓಡಿಬರುತ್ತವೆ.
ತಾಮುಂದು ತಾಮುಂದು ಎಂಬಂತೆ !

ಕಡಲ ಬಣ್ಣವೊಪ್ಪುವ ಉಡುಪಿನಲ್ಲಿ
ಕಣ್ಣ ಸೆಳೆಯುವ ಮುಖದಲ್ಲಿ
ಸಂಜೆ ಮುಗ್ಧತೆ ಮನೆಮಾಡಿದೆ.
ಮರಗಳಲ್ಲಿ ಮರೆಯಾಗುವ ಮೊದಲು
ಬೆಳ್ಳಕ್ಕಿಗಳು ಇವಳನ್ನೊಮ್ಮೆ
ಇಣುಕಿ ಹೊರಟಿವೆ.
ಕೊಂದುಬಿಡಲೇ ಬೆಳ್ಳಕ್ಕಿಗಳ !

ತನಗೆ ಇದಿರಾಗುವ ಸಮುದ್ರಕ್ಕೆ
ಸಮನಾಗಿತೋರುವ
ಅವಳ ನಗುವಿನಲ್ಲಿ
ಕವಿತೆಗೆ ಕಳೆದುಹೋಗುವ ಭಯ !
ತಣ್ಣನೆ ಗಾಳಿಯೂ ಸುಮ್ಮನಿರಲಾಗದೇ
ತನ್ನ ಎದೆ ಚಾಚುತ್ತಿದೆ
ಒಂದೇ ಸವನೆ ಅವಳ ಕಡೆಗೆ !

ನಡಿಗೆಯಲ್ಲೇ ಇಡೀ ದಂಡೆ ತುಂಬುವ
ಅವಳ ನಿಲುವು ಎದೆಯಲ್ಲಿ ಸ್ಥಾಯಿಯಾಗಿದೆ.
ಮತ್ತೆ ಮತ್ತೆ ಕೇಳಿ ಬರುತ್ತಿದೆ
ಈಗಲೂ ಭಾವದೊಡಲಲ್ಲಿ
ಅವಳ ನಡಿಗೆಯ ಸದ್ದು !

**ಫಾಲ್ಗುಣ ಗೌಡ ಅಚವೆ**
'ವಿಶಾಲಾಕ್ಷಿ ನಿಲಯ', ಹೋಟೇಲ್ ಭದ್ರಾ ಎದುರು, ಪಂಚರಶಿವಾಡ, ಕಾರವಾರ - ೫೮೧ ೩೦೩



# ನಲಿಯುತ್ತಾ ಕಲಿಸುವ, ಕಲಿಸುತ್ತಾ ಬೆಳೆಸುವ ಅರವಿಂದ ಗುಪ್ತರ ಆಟಿಕೆಗಳು ಮತ್ತು ಪುಸ್ತಕಗಳು




**ಒಂ**ದು ಬಿಲಿಯನ್ ಜನರಿಗೆ ಒಂದು ಮಿಲಿಯನ್ ಪುಸ್ತಕಗಳು ಎಂಬ ಕನಸು ಹೊತ್ತು, ಸಹಸ್ರಾರು ಅಪರೂಪದ, ಅತ್ಯುಪಯುಕ್ತ ಪುಸ್ತಕಗಳನ್ನು, ಆಟಿಕೆಗಳನ್ನು, ಚಲನಚಿತ್ರಗಳನ್ನು ತಮ್ಮ ಅಂತರಜಾಲ ತಾಣದಲ್ಲಿ (www.arvindguptatoys.com) ಪ್ರದರ್ಶಿಸಿ, ಉಚಿತವಾಗಿ ಪಡೆದುಕೊಳ್ಳುವಂತೆ ಮಾಡಿರುವ ಅರವಿಂದ ಗುಪ್ತರ ಹಲವು ಪುಸ್ತಕಗಳು ಇದುವರೆಗೆ ಇಂಗ್ಲಿಷ್, ಹಿಂದಿ, ಮರಾಠಿ ಮೊದಲಾದ ೧೨ ಭಾಷೆಗಳಲ್ಲಿ ಲಕ್ಷಾಂತರ ಪ್ರತಿಗಳು ಮಾರಾಟವಾಗಿ ಮಕ್ಕಳ ಮನಸೆಳೆದಿದ್ದವು, ಅವರನ್ನು ವೈಜ್ಞಾನಿಕ ಚಟುವಟಿಕೆಗಳಿಗೆ ಪ್ರೇರೇಪಿಸಿದ್ದವು ಮತ್ತು ಕಸದಿಂದ ರಸ ತೆಗೆಯುವ ಅನುಭವ ದೊರಕಿಸಿ ಕೊಟ್ಟಿದ್ದವು. ಈ ವರ್ಷದ ಕನ್ನಡ ರಾಜ್ಯೋತ್ಸವದ ಸಂದರ್ಭದಲ್ಲಿ ನೂರಾರು ಚಟುವಟಿಕೆಗಳಿಂದ, ಅಮೂಲ್ಯ ಅನುಭವ ಕಥನಗಳಿಂದ ಕೂಡಿರುವ ಅರವಿಂದ ಗುಪ್ತರ ಎರಡು ಕೃತಿಗಳನ್ನು ಅವರಂತೆಯೇ ಕಲಿಕಾ ಚಟುವಟಿಕೆಗಳಲ್ಲಿ ತೊಡಗಿರುವ ವಿ.ಎಸ್.ಎಸ್. ಶಾಸ್ತ್ರಿಯವರು **ಮಾಡಿ ಕಲಿ** ಮತ್ತು **ಆಹಾ ! ಎಷ್ಟೊಂದು ಚಟುವಟಿಕೆಗಳು** ಎಂಬ ಶೀರ್ಷಿಕೆಗಳಲ್ಲಿ ಕನ್ನಡಕ್ಕೆ ತಂದಿದ್ದು ಅವನ್ನು ಬೆಂಗಳೂರಿನ ನವಕರ್ನಾಟಕ ಪ್ರಕಾಶನವು ಪ್ರಕಟಿಸಿದೆ.

ಕಾಗದವನ್ನು ಮಡಿಸಿ ಸಿದ್ಧಮಾಡುವ (ಓರಿಗಾಮಿ) ಸರಳ ಆಟಿಕೆಗಳಿಂದ ಹಿಡಿದು ಕಸವೆಂದು ಬಿಸಾಡುವ ನೂರಾರು ಸಣ್ಣಪುಟ್ಟ ವಸ್ತುಗಳಿಂದ ಹತ್ತು ಹಲವು ವೈಜ್ಞಾನಿಕ ಚಟುವಟಿಕೆಗಳನ್ನು ಮಾಡಿ, ಕಲಿತು, ಕಲಿಸುವ, ವಿಜ್ಞಾನದ ಕಲಿಕೆಯನ್ನು ಸರಳವಾಗಿ ಮಕ್ಕಳೇ ಮಾಡಿ, ವಿನ್ಯಾಸ, ಮಾದರಿಗಳನ್ನು ರಚಿಸಿ ತೋರಿಸುವ, ಗಣಿತ ಕಲಿಕೆಯ ರುಚಿ ಹತ್ತಿಸುವ ಕೃತಿ **ಮಾಡಿ ಕಲಿ**ಯಲ್ಲಿ ಸುಮಾರು ೨೦೦ಕ್ಕೂ ಹೆಚ್ಚು ಮತ್ತು ಇದರ ಮುಂದುವರಿದ ಭಾಗದಂತೆ ಕಾಣುವ **ಆಹಾ ! ಎಷ್ಟೊಂದು ಚಟುವಟಿಕೆಗಳು** ಕೃತಿಯಲ್ಲಿ ಸುಮಾರು ೧೪೦ಕ್ಕೂ ಹೆಚ್ಚು ಆಟಿಕೆಗಳು ಮತ್ತು ಮಾದರಿಗಳು ಇದ್ದು, ಇವುಗಳನ್ನು ಏನೇನೂ ವೆಚ್ಚವಿಲ್ಲದೇ ಅತ್ಯಂತ ಕಡಿಮೆ ಸಮಯದಲ್ಲಿ ಮಾಡಿ ತೋರಿಸಿ ಆನಂದಿಸಬಹುದು ಎಂಬುದನ್ನು ಸಚಿತ್ರವಾಗಿ ವಿವರಿಸುತ್ತವೆ. ಮಧ್ಯೆ ಮಧ್ಯೆ ನೀಡಲಾಗಿರುವ ಪದ್ಯಗಳು, ಕತೆಗಳು, ಅನುಭವಗಳು, ನೀತಿಕತೆಗಳು ವಿದ್ಯಾರ್ಥಿಗಳು, ಶಿಕ್ಷಕರು, ಪೋಷಕರು ಮತ್ತು ಶಿಕ್ಷಣ ಚಿಂತಕರಿಗೆ ಮಾರ್ಗದರ್ಶಿಯಾಗಿವೆ.

ಅನೇಕ ಶ್ರೇಷ್ಠ ವಿಜ್ಞಾನಿಗಳು ತಮ್ಮಲ್ಲಿದ್ದ ಸರಳ ಉಪಕರಣಗಳ ಸಹಾಯದಿಂದಲೇ ಹೇಗೆ ಕೆಲಸ ಮಾಡಿದರು ಎಂಬುದು ಈ ಕೃತಿಗಳಿಂದ ತಿಳಿಯುತ್ತದೆ.

ಗಗನಚುಂಬಿ ಕಟ್ಟಡವನ್ನು ಅಳೆಯುವ ವಿನೂತನ ವಿಧಾನಗಳನ್ನು ಯೋಚಿಸಿದ ಬಾಲಕ **ನೀಲ್ಸ್ ಬೋರ್**, ಸಂಖ್ಯೆಗಳನ್ನು ಪ್ರೀತಿಸಿದ **ಪಾಲ್ ಎರ್ಡಿಶ್**, ಮಕ್ಕಳನ್ನು ಹುರಿದುಂಬಿಸುತ್ತಿದ್ದ ಜಪಾನೀ ಶಿಕ್ಷಕ **ಶ್ಯಾಂಡ್**, ಭರವಸೆಯನ್ನು ಬಿತ್ತಿ ಆನಂದ ಬೆಳೆಸಿದ ನಿರಕ್ಷರಿ ಕುರುಬ **ಎಲ್‌ಸಿಯಾರ್ಡ್ ಬೂಯಿಫರ್**, ಸದಾ ಕಲಿಯುತ್ತಿದ್ದ **ಬಹುರೂಪಿ ಗಾಂಧಿ**, ಪುನರ್ಬಳಕೆಯನ್ನು ಒತ್ತಾಯಿಸುತ್ತಿದ್ದ **ಭಗವಾನ್ ಬುದ್ಧ**, ಬಾರ್ಬೆನಿಯದ ಬಡಮಕ್ಕಳ ಪ್ರೀತಿಯ ಶಿಕ್ಷಕ **ಡಾನ್ ಮಿಲಾನಿ**, ಬ್ರೆಝಿಲ್ ಶಿಕ್ಷಣತಜ್ಞ **ಪಾಲ್‌ಲೋ ಫ್ರೈರಿ**, ನನ್ನ ಹಳ್ಳಿ ಶಾಲೆಯ ದಿನಚರಿ ಬರೆದ **ಜೂಲಿಯಾ ವೆಬರ್ ಗೋರ್ಡೋನ್**, ಮಕ್ಕಳು ಜಗತ್ತಿನ ಅತಿ ಹಳೆಯ ಶೋಷಿತ ವರ್ಗ ! ಎಂದು ತಿಳಿದು ಮಕ್ಕಳಿಗಾಗಿ ಮಿಡಿದ, ಮಕ್ಕಳೊಂದಿಗೇ ಹಿಟ್ಲರನ ಗ್ಯಾಸ್ ಛೇಂಬರಿನಲ್ಲಿ ಬಲಿಯಾದ ಪೋಲೆಂಡಿನ ಶಿಶು ಶಿಕ್ಷಣ ತಜ್ಞ **ಜಾನೂಸ್ ಕೋರ್‌ಶ್ಯಾಕ್**, ಕೀಟಗಳನ್ನು ಪ್ರೀತಿಸಿದ ಭೂಪ **ಜೀನ್ ಹೆನ್ರಿ ಫೇಬರ್**, ಬಸ್ರಾದಲ್ಲಿಯ ಸಾವಿರ ವರ್ಷಗಳ ಗ್ರಂಥಾಲಯವನ್ನು ರಕ್ಷಿಸಿದ ಗ್ರಂಥಪಾಲಕಿ **ಆಲಿಯಾ** ಮೊದಲಾದವರ ಜೀವನಚಿತ್ರಗಳು ಸಾಮಾನ್ಯರಲ್ಲೂ ಅಸಾಮಾನ್ಯಗುಣಗಳನ್ನು ಗುರುತಿಸುವುದನ್ನು ಹೇಳಿಕೊಟ್ಟರೆ, **ಬರೀ ಪಾಠ ಮಾಡುವುದು** ಮತ್ತು **ರವೀಂದ್ರನಾಥ ಠಾಗೋರರ ಗಿಳಿಗೊಂದು ತಾಲೀಮು** ಕಥೆಗಳು ಶಿಕ್ಷಣ ಪದ್ಧತಿಯ ನಿರರ್ಥಕತೆಯನ್ನು ವಿಡಂಬಿಸಿ ಮಕ್ಕಳಿಗೆ ನಿಜಕ್ಕೂ ಅಗತ್ಯವಾಗಿರುವ ನಲಿಯುತ್ತಾ ಕಲಿಯುವ ಪದ್ಧತಿಯ ಅಗತ್ಯವನ್ನು ಸಾರುತ್ತವೆ.

ಕೈಬೆರಳುಗಳ ಅಚ್ಚಿನಿಂದ ಚಿತ್ರ ರಚನೆ, ಸಂಖ್ಯಾ ಚೀಲ, ಸ್ಪೆಲ್ಲಿಂಗ್ ಬೀಸಣಿಗೆ, ಪದಜೋಡಣೆ, ಟ್ಯಾನ್‌ಗ್ರ್ಯಾಮ್, ಕಾಗದದಿಂದ ವಿವಿಧ ಜ್ಯಾಮಿತೀಯ ಆಕೃತಿಗಳು, ಕಲ್ಲುಗಳು, ಗೋಲಿ, ಬೀಜ, ಎಲೆ, ಚಕ್ಕೆಗಳಿಂದ ಮೋಜು, ಬೆಂಕಿಕಡ್ಡಿ, ಪೊರಕೆ ಕಡ್ಡಿ, ರಬ್ಬರ್‌ಬ್ಯಾಂಡ್, ತಂತಿ, ದಾರ, ಗುಂಡಿ, ಸೂಜಿ, ರಟ್ಟಿನ ಕೊಳವೆ, ಡಬ್ಬಿ, ಕಾಗದದ ಲೋಟ, ಮೊಳೆ ಮೊದಲಾದವುಗಳನ್ನು ಬಳಸಿ ರಚಿಸುವ ವಿವಿಧ ಆಕೃತಿಗಳು, ಮಾದರಿಗಳು, ವಿಜ್ಞಾನ ಚಟುವಟಿಕೆಗಳು, ಗಣಿತ ಅಭ್ಯಾಸಗಳು ಮಕ್ಕಳಲ್ಲಿ ಕಲಿಕೆಯ ಆಸಕ್ತಿ ಕೆರಳಿಸಿ, ಆಡುತ್ತಾ, ನೋಡುತ್ತಾ, ಮಾಡುತ್ತಾ ಕಲಿಯಲು ಪ್ರೇರೇಪಿಸುತ್ತವೆ. ನಲಿಯುತ್ತಾ ಕಲಿಸುವ, ಕಲಿಸುತ್ತಾ ನಲಿಸುವ ಈ ಎರಡೂ ಪುಸ್ತಕಗಳು ಪ್ರತಿ ಮನೆಯಲ್ಲಿ, ಪ್ರತಿ ಶಿಕ್ಷಕ ಹಾಗೂ ಮಗುವಿನ ಕೈಯಲ್ಲಿ ಇದ್ದಲ್ಲಿ ಸಮಯದ ಸದುಪಯೋಗ ಖಂಡಿತ ! ನೀವೂ ಖರೀದಿಸಿ, ಉಡುಗೊರೆ ಕೊಡಿ, ಚಟುವಟಿಕೆಗಳನ್ನು ಮಾಡಿಸಿ, ಆನಂದಿಸಿ.

(ಪ್ರಕಟಣಾ ವರ್ಷ : ೨೦೦೯)

**ಬೇದ್ರೆ ಮಂಜುನಾಥ**
ಕಾರ್ಯಕ್ರಮ ನಿರ್ವಾಹಕರು, ಆಕಾಶವಾಣಿ, ಚಿತ್ರದುರ್ಗ-೫೭೭೫೦೧

# ದೇಶೀ ಭಾಷೆಗಳು ಮತ್ತು ಜಾಗತೀಕರಣ

ಡಾ|| ಅಪ್ಪಗೆರೆ ಸೋಮಶೇಖರ್

**ಭಾ**ಷೆಗೂ ಜಾಗತೀಕರಣಕ್ಕೂ ಎತ್ತಣಿಂದೆತ್ತ ಸಂಬಂಧವಯ್ಯ ? ಸಾಮಾನ್ಯವಾಗಿ ಮೇಲ್ನೋಟಕ್ಕೆ ಹೀಗೆ ಅನ್ನಿಸಿದರೂ ಆಳದಲ್ಲಿ ತಾತ್ವಿಕವಾದ ಸಂಬಂಧ ಹಾಗೂ ಸಂಘರ್ಷಗಳಿರುವುದೂ ಅಷ್ಟೇ ಸತ್ಯ. ಜಾಗತೀಕರಣದ ಸಂದರ್ಭದಲ್ಲಿ 'ಭಾಷೆ'ಯನ್ನು ಎರಡು ನೆಲೆಗಟ್ಟಿನಲ್ಲಿ ಚರ್ಚಿಸಬಹುದಾಗಿದೆ. ಒಂದು,'ಭಾಷೆಗಳ ತಾತ್ವಿಕ ಸಂಬಂಧ', ಎರಡು, 'ಭಾಷೆಗಳ ತಾತ್ವಿಕ ಸಂಘರ್ಷ'.

### ೧. ಭಾಷೆಗಳ ತಾತ್ವಿಕ ಸಂಬಂಧ

ಯಾವುದೇ ಭಾಷೆಯ ಬೆಳವಣಿಗೆ ಇನ್ನೊಂದು ಭಾಷೆಯ ಸಂಬಂಧ ಮತ್ತು ಸಂಪರ್ಕವನ್ನು ಅವಲಂಬಿಸಿರುತ್ತದೆ. ಒಂದು ಭಾಷೆಯ ಜೀವಂತಿಕೆಗೆ ಆ ಭಾಷಾ ಬಳಕೆಯ ನಿರಂತರತೆ ಎಷ್ಟು ಮುಖ್ಯವೋ, ಇತರೆ ಭಾಷೆಗಳೊಟ್ಟಿಗಿನ ಕೊಳುಕೊಡುವಿಕೆಯೂ ಅಷ್ಟೇ ಮುಖ್ಯ. ತೂಕದ ಮಾನದಂಡಗಳು ಆವಿಷ್ಕಾರಗೊಳ್ಳುವುದಕ್ಕೆ ಮುಂಚೆ ಜನಪದರಲ್ಲಿ 'ವಸ್ತು ವಿನಿಮಯ ಪದ್ಧತಿ' ಚಾಲ್ತಿಯಲ್ಲಿತ್ತು. ಅಂದರೆ 'ಸಂತೆ'ಗಳಲ್ಲಿ ಪರಸ್ಪರ ಭೇಟಿಯಾಗುತ್ತಿದ್ದ ರೈತರು ತಾವು ಬೆಳೆದ ದವಸ-ಧಾನ್ಯಗಳನ್ನು ಕೊಟ್ಟು ಅದಕ್ಕೆ ಪ್ರತಿಯಾಗಿ ತಾವು ಬೆಳೆಯದ ದವಸ-ಧಾನ್ಯಗಳನ್ನು ಪಡೆಯುತ್ತಿದ್ದರು. ಸಂತೆಯೊಳಗಿನ ಈ ವಹಿವಾಟು ಕೇವಲ ವಸ್ತುಗಳ ಕೊಳುಕೊಡುವಿಕೆಗೆ ಮಾತ್ರ ಸೀಮಿತವಾಗುತ್ತಿರಲಿಲ್ಲ. ಅವು ರೈತರ, ಜನಪದರ ಭಾಷೆ, ಸಂಸ್ಕೃತಿ, ಆಚಾರ, ವಿಚಾರ, ನಂಬಿಕೆ ಹಾಗೂ ಸಂಬಂಧಗಳ ಪರಸ್ಪರ ವಿನಿಮಯದ ಕೇಂದ್ರಗಳಾಗಿರುತ್ತಿದ್ದವು.

ಜಾಗತೀಕರಣ ಕುರಿತ ವ್ಯಾಖ್ಯಾನ ಈ ಬಗೆಯ 'ಜನಪದರ ಸಂತೆ'ಯ ಅರ್ಥವ್ಯಾಪ್ತಿಗೆ ಒಳಗೊಳ್ಳಬೇಕಾದ ತುರ್ತಿದೆ. ಎಲ್ಲಾ ದೇಶಗಳ ಗುಣಾತ್ಮಕವಾದ ವಸ್ತು, ಭಾಷೆ, ಆಚಾರ, ವಿಚಾರ, ನಂಬಿಕೆ ಹಾಗೂ ಸಂಬಂಧಗಳೂ ದೇಶೀಯ ಗಡಿ ಬಂಧನಗಳನ್ನು ಮೀರಿ ಜಾಗತಿಕ ಸಂತೆಯ ವೇದಿಕೆಯಲ್ಲಿ ಪರಸ್ಪರ ಗೌರವಯುತವಾದ ಕೊಳುಕೊಡುವಿಕೆಯ ಮಾನವೀಯ ವಾತಾವರಣದ ನಿರ್ಮಾಣವೇ ನಿಜವಾದ ಜಾಗತೀಕರಣ. ಭಾಷೆಯ ವಿಚಾರದಲ್ಲಿ ಹೇಳುವುದಾದರೆ, ದೇಶೀಯ ಹಾಗೂ ಜಾಗತಿಕ ಭಾಷೆಗಳು ಪರಸ್ಪರ ಗೌರವ ಹಾಗೂ ನಿರ್ಬಂಧರಹಿತ ಮುಕ್ತ ಸಂವಾದ ಹಾಗೂ ಕೊಳುಕೊಡುವಿಕೆ ಇದ್ದಾಗ ಮಾತ್ರ ಎಲ್ಲಾ ಭಾಷೆಗಳು ಬೆಳೆಯಲು ಹಾಗೂ ತತ್ಕಾಲದಲ್ಲಿ ಜೀವಂತವಾಗಿ ಇರಲು ಸಾಧ್ಯ. ಇದನ್ನು ಜಾಗತೀಕರಣದ ಇವತ್ತಿನ ಸಂದರ್ಭದಲ್ಲಿ ನಾನು, 'ಭಾಷೆಗಳ ತಾತ್ವಿಕ ಸಂಬಂಧ' ಎಂಬುದಾಗಿ ವಿಶ್ಲೇಷಿಸ ಬಯಸುತ್ತೇನೆ. 'ತಾತ್ವಿಕ ಸಂಬಂಧ' ಕೇವಲ ಭಾಷೆಗಷ್ಟೇ ಸೀಮಿತವಾದುದಲ್ಲ; ಅದು ಒಂದು ದೇಶದ ಎಲ್ಲ ಜ್ಞಾನ ಶಾಖೆಗಳ ಅಭಿವ್ಯಕ್ತಿಯ ಅಪರಿಮಿತವಾದ ಅನಿಕೇತನದ ವ್ಯಾಖ್ಯಾನವಾಗಿದೆ.

### ೨. ಭಾಷೆಗಳ ತಾತ್ವಿಕ ಸಂಘರ್ಷ

ಜಾಗತೀಕರಣದ ಸಂದರ್ಭದಲ್ಲಿ ಅಧಿಕಾರಶಾಹಿ, ಶ್ರೀಮಂತ ರಾಷ್ಟ್ರಗಳ 'ಪ್ರಭುತ್ವ ಭಾಷೆ' ಹಾಗೂ ತೃತೀಯ ಜಗತ್ತಿನ ಬಡರಾಷ್ಟ್ರಗಳ 'ದೇಶೀಯ ಭಾಷೆ'ಗಳ ಮುಖಾಮುಖಿಯನ್ನು ಭಾಷೆಗಳ ತಾತ್ವಿಕ ಸಂಘರ್ಷದ ನೆಲೆಗಟ್ಟಿನಲ್ಲಿ ಚರ್ಚಿಸಬಹುದಾಗಿದೆ.

ಪ್ರಭುತ್ವ ರಾಷ್ಟ್ರಗಳು, ತೃತೀಯ ರಾಷ್ಟ್ರಗಳ ಸ್ವಾಭಿಮಾನಿ, ಸ್ವಾವಲಂಬಿ ಬದುಕಿನ ವಿನಾಶದ ಮೇಲೆ ತಮ್ಮ ಶ್ರೀಮಂತಿಕೆಯನ್ನು ಕಟ್ಟಿಕೊಳ್ಳುವುದೇ ಜಾಗತೀಕರಣದ ಬಹುದೊಡ್ಡ ಹುನ್ನಾರವಾಗಿದೆ. ಭಾಷೆಯ ಸಂಬಂಧದಲ್ಲಿ ಹೇಳುವುದಾದರೆ, ಪ್ರಭುತ್ವ ಭಾಷೆಯಾಗಿರುವ ಇಂಗ್ಲಿಷ್ ತೃತೀಯ ಜಗತ್ತಿನ ಅಸಂಖ್ಯಾತ ದೇಶೀಯ ಭಾಷೆಗಳನ್ನು ಆಪೋಶನ ಗೈಯುತ್ತ ತನ್ನ ಏಕಚಕ್ರಾಧಿಪತ್ಯವನ್ನು ಸ್ಥಾಪಿಸುವ ಮೂಲಕ ಇಡೀ ಜಗತ್ತು ಅನಿವಾರ್ಯವಾಗಿ ಇಂಗ್ಲಿಷನ್ನು ಒಪ್ಪಿಕೊಳ್ಳುವ ಹಾಗೆ ಮಾಡಿದೆ. ಇದಕ್ಕೆ ಪ್ರಬಲವಾದ ಕಾರಣವೆಂದರೆ, ಬದುಕಿನ ಅಸ್ತಿತ್ವದ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆಯ ಅನಿವಾರ್ಯತೆಯನ್ನೇ ಜನಮಾನಸದಲ್ಲಿ ಬಿಂಬಿಸಿರುವುದಾಗಿದೆ. ಜೊತೆಗೆ, ಜಾಗತೀಕರಣದ ಸಂದರ್ಭದಲ್ಲಿ ಇಂಗ್ಲಿಷ್ ಬಲ್ಲವ ಮಾತ್ರ ಬದುಕಲು ಸಾಧ್ಯ ಎಂಬುದನ್ನು ಆಯಾ ದೇಶದ ಆಡಳಿತ ವ್ಯವಸ್ಥೆಯ ಮೂಲಕವೇ ಅಲ್ಲಿನ ಜನಸಾಮಾನ್ಯರ ಮೇಲೆ ಒತ್ತಾಯಪೂರ್ವಕವಾಗಿ ಹೇರಿ ಒಪ್ಪಿಕೊಳ್ಳುವಂತೆ ಮಾಡಲಾಗಿದೆ.

ಒಂದು ದೇಶದ ದೇಶೀಯ ಭಾಷೆಯ ವಿನಾಶವೆಂದರೆ, ಆ ಭಾಷೆಯನ್ನಾಡುವ ಜನರ ಹಾಗೂ ಅವರ ಆಚಾರ, ವಿಚಾರ, ಸಂಸ್ಕೃತಿ, ನಂಬಿಕೆ ಹಾಗೂ ಜನಪದ ಜ್ಞಾನಸಂಪತ್ತಿನ ವಿನಾಶವೇ ಸರಿ. ಈ ಹಿನ್ನೆಲೆಯಲ್ಲಿಯೇ ಬೆಲ್ಜಿಯಂನ ಭಾಷಾ ಶಾಸ್ತ್ರಜ್ಞೆ ತೋವ್‌ಸ್ಕೂಟ್‌ನಬ್ ಕಾಂಗಾಸ್ ''ಒಂದು ಜನಾಂಗವನ್ನು ನಾಶಮಾಡಬೇಕೆಂದರೆ ಆ ಜನಾಂಗದ ಭಾಷೆಯನ್ನು ನಾಶಮಾಡಿದರೆ ಸಾಕು'' ಎಂದು ಅಭಿಪ್ರಾಯಪಟ್ಟಿದ್ದಾರೆ. ಜಾಗತೀಕರಣದ ಮೂಲ ಉದ್ದೇಶ ಕೂಡ ಇದಕ್ಕಿಂತ ಭಿನ್ನವಾದುದೇನಲ್ಲ. ಬಹುಸಂಸ್ಕೃತಿಯ ವಿನಾಶದ ಮೇಲೆ ಏಕಸ್ವಾಮ್ಯ ಚಕ್ರಾಧಿಪತ್ಯವನ್ನು ನಿರ್ಮಿಸುವುದು ಜಾಗತೀಕರಣದ ಹುನ್ನಾರ.

ಸ್ವಾತಂತ್ರ್ಯಪೂರ್ವದಲ್ಲಿ ನಮ್ಮನ್ನು ಇಂಗ್ಲೆಂಡಿನ ವಸಾಹತುಶಾಹಿ ವ್ಯವಸ್ಥೆ ಕಣ್ಣೆದುರಿನ ಶತ್ರುವಾಗಿ ಆಳಿತು. ಸ್ವಾತಂತ್ರ್ಯಾನಂತರದಲ್ಲಿ ಅದರಲ್ಲೂ ತೊಂಬತ್ತರ ದಶಕದಿಂದ ಈಚೆಗೆ ಅಮೆರಿಕಾದ ಜಾಗತೀಕರಣ, ಉದಾರೀಕರಣ, ಖಾಸಗೀಕರಣ ಪ್ರಕ್ರಿಯೆಗಳು ಕಣ್ಣಿಗೆ ಕಾಣದ ಶತ್ರುಗಳಾಗಿ ನಮ್ಮನ್ನು ಆಳುತ್ತಿವೆ. ಕಣ್ಣಿಗೆ ಕಾಣುವ ಶತ್ರುವಿಗಿಂತ ಕಣ್ಣಿಗೆ ಕಾಣದ ಶತ್ರು ಹೆಚ್ಚು ಅಪಾಯಕಾರಿ ಎಂಬುದು ಈಗಾಗಲೇ ಸಾಬೀತಾಗಿದೆ.

ಬ್ರಿಟಿಷರ ಆಗಮನದಿಂದ ಉಂಟಾದ ಹಲವಾರು ಮಿತಿಗಳ ನಡುವೆಯೂ

ಜಾಗತೀಕರಣ ಕುರಿತ ವ್ಯಾಖ್ಯಾನ 'ಜನಪದರ ಸಂತೆ'ಯ ಅರ್ಥವ್ಯಾಪ್ತಿಗೆ ಒಳಗೊಳ್ಳಬೇಕಾದ ತುರ್ತಿದೆ. ಎಲ್ಲಾ ದೇಶಗಳ ಗುಣಾತ್ಮಕವಾದ ವಸ್ತು , ಭಾಷೆ, ಆಚಾರ, ವಿಚಾರ, ನಂಬಿಕೆ ಹಾಗೂ ಸಂಬಂಧಗಳೂ ದೇಶೀಯ ಗಡಿ ಬಂಧನಗಳನ್ನು ಮೀರಿ ಜಾಗತಿಕ ಸಂತೆಯ ವೇದಿಕೆಯಲ್ಲಿ ಪರಸ್ಪರ ಗೌರವಯುತವಾದ ಕೊಳುಕೊಡುವಿಕೆಯ ಮಾನವೀಯ ವಾತಾವರಣದ ನಿರ್ಮಾಣವೇ ನಿಜವಾದ ಜಾಗತೀಕರಣ. ಭಾಷೆಯ ವಿಚಾರದಲ್ಲಿ ಹೇಳುವುದಾದರೆ, ದೇಶೀಯ ಹಾಗೂ ಜಾಗತಿಕ ಭಾಷೆಗಳು ಪರಸ್ಪರ ಗೌರವ ಹಾಗೂ ನಿರ್ಬಂಧರಹಿತ ಮುಕ್ತ ಸಂವಾದ ಹಾಗೂ ಕೊಳುಕೊಡುವಿಕೆ ಇದ್ದಾಗ ಮಾತ್ರ ಎಲ್ಲಾ ಭಾಷೆಗಳು ಬೆಳೆಯಲು ಹಾಗೂ ತತ್ಕಾಲದಲ್ಲಿ ಜೀವಂತವಾಗಿರಲು ಸಾಧ್ಯ.

ಭಾರತಕ್ಕಾದ ಅನುಕೂಲಗಳು ಅಪರಿಮಿತ. ಬ್ರಿಟಿಷರು ಭಾರತಕ್ಕೆ ಬಾರದೆ ಇದ್ದಿದ್ದರೆ ಇವತ್ತಿನ ಭಾರತವನ್ನು ಹೀಗೆ ಕಲ್ಪಿಸಿಕೊಳ್ಳಲಿಕ್ಕೂ ಅಸಾಧ್ಯವಾಗಿರುತ್ತಿತ್ತು. ಬ್ರಿಟಿಷರ ಆಗಮನ, ಇಂಗ್ಲಿಷ್ ಶಿಕ್ಷಣದ ಪರಿಣಾಮ ಶತಮಾನಗಳಿಂದ ಶಿಕ್ಷಣದಿಂದ ವಂಚಿಸಲ್ಪಟ್ಟ ಅಸಂಖ್ಯಾತ ಶೋಷಿತ ಸಮುದಾಯಗಳು ಅಕ್ಷರಲೋಕವನ್ನು ಪ್ರವೇಶಿಸಿ ವ್ಯವಸ್ಥೆಯನ್ನೆ ಪ್ರಶ್ನಿಸುವ ಸ್ವಾಭಿಮಾನಿ, ಸ್ವಾವಲಂಬನೆಯ ಬದುಕನ್ನು ಕಟ್ಟಿಕೊಳ್ಳುವಂತಾಯಿತು. ಭಾರತೀಯ ವರ್ಣಾಶ್ರಮ ಜಾತಿಪದ್ಧತಿಯ ವಿರುದ್ಧ ಬಹುದೊಡ್ಡ ಬಂಡಾಯ ಜಾಗೃತಗೊಂಡಿತು. ಚರಿತ್ರೆಯನ್ನು ನೋಡುವ ದೃಷ್ಟಿಕೋನ ಬದಲಾಯಿತು. ಅಸಹಾಯಕ ಮಹಿಳೆ ಸಬಲಗೊಳ್ಳಲು ಅಸಂಖ್ಯಾತ ಅವಕಾಶಗಳು ನಿರ್ಮಾಣಗೊಂಡವು. ಜನತಂತ್ರ ಪ್ರಜಾಪ್ರಭುತ್ವದ ಅಸ್ತಿತ್ವ ಸಾಧ್ಯವಾಯಿತು. ಈ ಹಿನ್ನೆಲೆಯಲ್ಲೇ ಕುವೆಂಪು ಅವರು ನಾನು ಇಂಗ್ಲಿಷ್ ಕಲಿಯದಿದ್ದರೆ ಮಲೆನಾಡಿನ ಯಾರದೋ ದನದ ಕೊಟ್ಟಿಗೆಯಲ್ಲಿ ಸಗಣಿ ಬಾಚುತ್ತಿದ್ದೆ ಎಂದಿದ್ದಾರೆ. ಆದರೆ ಇದೇ ಸಂದರ್ಭದಲ್ಲಿ ಸ್ವಾತಂತ್ರ್ಯಪೂರ್ವದಲ್ಲೆ ೧೮೪೮ರಲ್ಲಿ ಅಸ್ಪೃಶ್ಯರಿಗಾಗಿ, ಮಹಿಳೆಯರಿಗಾಗಿ ಇಂಗ್ಲಿಷ್ ಶಾಲೆ ತೆರೆದ ಜ್ಯೋತಿಬಾ ಫುಲೆ ಹಾಗೂ ಸಾವಿತ್ರಿ ಬಾ ಫುಲೆ ಅವರನ್ನು ಮರೆಯಲು ಸಾಧ್ಯವಿಲ್ಲ. ಹಾಗೆ ಅಂಬೇಡ್ಕರ್ ಅವರು ಕೂಡ ಮೀಸಲಾತಿಯ ವಿಚಾರ ಚರ್ಚೆಗೆ ಬಂದ ಸಂದರ್ಭದಲ್ಲಿ ''ಮೀಸಲಾತಿಗೆ ಬದಲಾಗಿ, ಪ್ರತಿ ಕುಟುಂಬಕ್ಕೂ ೫ ಎಕರೆ ಭೂಮಿ ಮತ್ತು ಹಳ್ಳಿಗೊಂದು ಇಂಗ್ಲಿಷ್ ಶಾಲೆ ಕೊಡಿ, ಎಲ್ಲರೂ ಅಕ್ಷರ-ಅನ್ನದ ವಿಚಾರದಲ್ಲಿ ಸ್ವಾವಲಂಬಿಗಳಾಗಿ, ಸ್ವಾಭಿಮಾನಿಗಳಾಗಿ ಬದುಕುತ್ತಾರೆ'' ಎಂದು ಹೇಳಿದ ಮಾತು ಚರ್ಚಾರ್ಹ ಸಂಗತಿಯಾಗಿದೆ.

ಭಾರತದಂತಹ ತೃತೀಯ ಬಡರಾಷ್ಟ್ರಗಳ ಆರ್ಥಿಕ, ಆಹಾರ, ಉದ್ಯೋಗದ ಸ್ವಾವಲಂಬನೆಯನ್ನು ಕಸಿದುಕೊಳ್ಳುವುದರ ಜೊತೆಗೆ ಇಡೀ ತೃತೀಯ ಜಗತ್ತಿನ ರಾಷ್ಟ್ರಗಳು ಅಮೆರಿಕಾದ ವಸ್ತುಗಳನ್ನು ಮಾರುವ ಮಾರುಕಟ್ಟೆ ಕೇಂದ್ರಗಳಾಗಬೇಕು, ಎಂಬುದು ಜಾಗತೀಕರಣದ ಮೂಲ ಉದ್ದೇಶ, ಅಮೆರಿಕಾದ ಹುನ್ನಾರ. ಬಹುರಾಷ್ಟ್ರೀಯ ಕಂಪನಿಗಳ ಮೂಲ ಉದ್ದೇಶವೂ ಇದೇ ಆಗಿದೆ. ತೃತೀಯ ಜಗತ್ತಿನ ಬಡರಾಷ್ಟ್ರಗಳ ನೀರು, ನೆಲ, ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳನ್ನು ಬಳಸಿಕೊಂಡು ವಸ್ತುಗಳನ್ನು ಉತ್ಪಾದಿಸಿ ಅದೇ ವಸ್ತುಗಳನ್ನು ಅದೇ ಬಡರಾಷ್ಟ್ರಗಳ ಜನರಿಗೆ ಮಾರಿ ಹಣವನ್ನು ದೋಚುವುದು ಬಹುರಾಷ್ಟ್ರೀಯ ಕಂಪನಿಗಳ ಬಹುದೊಡ್ಡ ಧಂಧೆಯಾಗಿದೆ. ಉದಾಹರಣೆಗೆ ಪೆಪ್ಸಿ, ಕೋಕಾಕೋಲ ಕಂಪನಿಗಳು ಇಂತಹ ಬಹುರಾಷ್ಟ್ರೀಯ ಕಂಪನಿಗಳಿಗೆ ಇಡೀ ದೇಶವನ್ನೆ ಗಿರವಿ ಇಡುವಲ್ಲಿ ನಮ್ಮ ರಾಜಕಾರಣ ವ್ಯವಸ್ಥೆ ಸಕ್ರಿಯವಾಗಿರುವುದು ದುರಂತ. ಇಂತಹ ಜನವಿರೋಧಿ ರಾಜಕಾರಣವೇ ವಿಶೇಷ ಆರ್ಥಿಕ ವಲಯ ಕಾಯಿದೆ ಮೂಲಕ ಸಂಪದ್ಭರಿತ ಕೃಷಿಯೋಗ್ಯ ಭೂಮಿಯನ್ನು ಬಹುರಾಷ್ಟ್ರೀಯ ಕಂಪನಿಗಳು ಕಾರ್ಖಾನೆಗಳನ್ನು ಸ್ಥಾಪಿಸಲು ನೀಡಿ ಆ ಭೂಮಿ ನಂಬಿ ಬದುಕುತ್ತಿದ್ದ ರೈತರು ಆತ್ಮಹತ್ಯೆಗೆ ಶರಣಾಗುವ ಹಾಗೆ ಮಾಡಿದೆ. ಅಮೆರಿಕಾದಂತಹ ಶ್ರೀಮಂತ ರಾಷ್ಟ್ರಗಳು ನಮ್ಮ ದೇಶದ ಅನೇಕ ಬಿತ್ತನೆ ಬೀಜ, ಗಿಡಮೂಲಿಕೆ, ಅಮೂಲ್ಯ ಮರಗಳ ಒಡೆತನವನ್ನು ಪೇಟೆಂಟ್ ಮೂಲಕ ಪಡೆದುಕೊಂಡು, ಅವುಗಳ ಮೇಲಿನ ಭಾರತೀಯರ ಹಕ್ಕುಬಾಧ್ಯತೆಗಳನ್ನು ಕಸಿದುಕೊಂಡಿವೆ. ಇದು ಹೀಗೇ ಮುಂದುವರಿದರೆ ಮುಂದೊಂದು ದಿನ ಬೃಹತ್ ಬಂಡವಾಳಶಾಹಿ, ಸಾಮ್ರಾಜ್ಯಶಾಹಿ ರಾಷ್ಟ್ರಗಳು ನಮ್ಮ ಬದುಕು, ಸಂಸ್ಕೃತಿ, ಭಾಷೆ, ಕನಸುಗಳ ಒಡೆತನವನ್ನು ಪೇಟೆಂಟ್ ಮಾಡಿಕೊಳ್ಳುವಲ್ಲಿ ಆಶ್ಚರ್ಯವಿಲ್ಲ. ಆಗ ಭಾರತೀಯರು ಕನಸು ಕಾಣುವುದಕ್ಕೂ ಅಮೆರಿಕಾದವರ ಒಪ್ಪಿಗೆ ಪಡೆಯಬೇಕಾಗುತ್ತದೆ !

ಈಗಾಗಲೇ ಈ ಎಲ್ಲಾ ದುಷ್ಪರಿಣಾಮಗಳನ್ನು 'ಕಾಲ್ ಸೆಂಟರ್'ಗಳಲ್ಲಿ ಕಾಣುತ್ತಿದ್ದೇವೆ. ಅಮೆರಿಕಾದವರ ಅಗತ್ಯಗಳಿಗಾಗಿ ಭಾರತೀಯ ಯುವ ಮನಸ್ಸುಗಳು ಹಣದ ವ್ಯಾಮೋಹಕ್ಕೆ ಒಳಗಾಗಿ ಪ್ರಕೃತಿ ನಿಯಮಕ್ಕೆ ವಿರುದ್ಧವಾಗಿ ಇಡೀ ರಾತ್ರಿ ನಿದ್ರೆಗೆಟ್ಟು ಕೆಲಸ ಮಾಡುವ ಅನಿವಾರ್ಯತೆ ಬಂದೊದಗಿದೆ. ಇದೊಂದು ರೀತಿಯ ಸೊಫಿಸ್ಟಿಕೇಟೆಡ್ ಸ್ಲೇವರಿ. ಇದರ ಪರಿಣಾಮವಾಗಿ ಯುವ ಮನಸ್ಸುಗಳು ಮನೋವಿಕಾರಕ್ಕೆ ಒಳಗಾಗಿ ತಪ್ಪುದಾರಿ ಹಿಡಿದು ತಮ್ಮ ಬದುಕನ್ನು ತಾವೇ ವಿನಾಶದ ಅಂಚಿಗೆ ಕೊಂಡೊಯ್ಯುವಂತಾಗಿದೆ. ಇವೆಲ್ಲದರ ಅಂತಿಮ ಫಲಿತಾಂಶವೆಂದರೆ ಅಮೆರಿಕಾದ ಆರ್ಥಿಕ ಸೂಚ್ಯಂಕ ಕುಸಿದರೆ ಭಾರತದ ಯುವಕರು ನೌಕರಿ ಮತ್ತು ಬದುಕನ್ನೆ ಕಳೆದುಕೊಳ್ಳುವುದಾಗಿದೆ.

## ಹಾಯ್ಕುಗಳು

ಪ್ರಶಸ್ತಿ ಪಡೆದ ನಂತರ
ಪುಟ್ಟ ಮಗುವಿನ ಅಳು
ಕೋಗಿಲೆಯ ಹಾಡು
ಕೇಳದಾದವು

ಡಾ|| ಸಿ. ರವೀಂದ್ರನಾಥ್
ನಂ. ೧೩೩, ೫ನೇ ಕ್ರಾಸ್
೭ನೇ ಹಂತ, ಬೃಂದಾವನ ಬಡಾವಣೆ
ಮೈಸೂರು

ಜಾಗತೀಕರಣದ ಮತ್ತೊಂದು ದುರುದ್ದೇಶ ತೃತೀಯ ಜಗತ್ತಿನ ಬಡರಾಷ್ಟ್ರಗಳ ಯುವಶಕ್ತಿಯನ್ನು ದುರುಪಯೋಗಪಡಿಸಿಕೊಳ್ಳುವ ಮೂಲಕ ಆ ದೇಶದ ಮಾನವ ಶಕ್ತಿಯನ್ನೇ ಕುಂದಿಸುವುದಾಗಿದೆ. ಜೊತೆಗೆ ಇದು ಇಡೀ ತೃತೀಯ ಜಗತ್ತನ್ನು ಅಸಹಾಯಕ ಸ್ಥಿತಿಗೆ ದೂಡುವ ಪಿತೂರಿಯಾಗಿದೆ.

### ಭಾಷೆ ಮತ್ತು ಜಾಗತೀಕರಣ

ಭಾರತ ಅಸಂಖ್ಯಾತ ಜಾತಿಗಳಿರುವ ರಾಷ್ಟ್ರವಾಗಿರುವಂತೆಯೇ ಅಗಣಿತ ಭಾಷೆಗಳ ರಾಷ್ಟ್ರವೂ ಕೂಡ. ಭಾಷೆ ಎಂದರೆ ಕೇವಲ ಅಕ್ಷರಗಳ ಅಭಿವ್ಯಕ್ತಿ ಮಾತ್ರವಲ್ಲ, ಆ ಭಾಷೆಯನ್ನಾಡುವ ಜನಸಮುದಾಯದ ಅನನ್ಯ ಸಂಸ್ಕೃತಿ, ಬದುಕು, ಸಂವೇದನೆ, ಅನುಭವ, ವ್ಯವಸ್ಥೆ ವಿರುದ್ಧದ ಪ್ರತಿಭಟನೆ, ಸಂಬಂಧದ ಕೊಂಡಿ, ವಿವೇಕ, ವಿನಯ, ಭ್ರಾತೃತ್ವ, ವ್ಯಕ್ತಿತ್ವ ಹಾಗೂ ಸ್ವಾಭಿಮಾನಿ ಸ್ವಾವಲಂಬನೆಯ ಆಗರವೇ ಸರಿ. ಒಂದು ಭಾಷೆಯನ್ನು ಕಳೆದುಕೊಂಡರೆ, ಇವನ್ನೆಲ್ಲ ಕಳೆದುಕೊಂಡಂತೆ. ಈ ಹಿನ್ನೆಲೆಯಲ್ಲಿ ಒಂದು ಭಾಷೆಯ ಅಧ್ಯಯನವೆಂದರೆ ಆ ಭಾಷೆಯನ್ನಾಡುವ ಜನಾಂಗದ ಆಮೂಲಾಗ್ರ ಅಧ್ಯಯನವಾಗುತ್ತದೆ. ಭಾಷೆ ಎಂಬುದು ಕೇವಲ ಆ ಭಾಷೆಯನ್ನು ಮಾತನಾಡುವ ಜನಾಂಗವನ್ನು ಮಾತ್ರ ಪ್ರತಿನಿಧಿಸುವುದಿಲ್ಲ; ಅದರೊಟ್ಟಿಗೆ ಆ ಜನಾಂಗದ ಸಂಸ್ಕೃತಿ, ಅವರು ಬದುಕುತ್ತಿರುವ ನೆಲ ಹಾಗೂ ರಾಷ್ಟ್ರವನ್ನು ಪ್ರತಿನಿಧಿಸುತ್ತಿರುತ್ತದೆ. 'ಆಯೆಗೆ ಭಾಷೆ ಇಜ್ಜಿ' ಎಂಬುದೊಂದು ತುಳು ಭಾಷೆಯಲ್ಲಿರುವ ಗಾದೆ. ಇದರರ್ಥ 'ಅವನಿಗೆ ಭಾಷೆ ಇಲ್ಲ' ಎಂದು. ಭಾಷೆ ಎಂದರೆ ಇಲ್ಲಿ 'ವ್ಯಕ್ತಿತ್ವ' ಎನ್ನುವ ಅರ್ಥದಲ್ಲಿ ಬಳಕೆಯಾಗಿದೆ. ಅಂದರೆ 'ಭಾಷೆ' ಮತ್ತು 'ವ್ಯಕ್ತಿತ್ವ' ಬೇರೆ ಬೇರೆಯಲ್ಲ ಎಂಬುದು ತುಳು ಜನಾಂಗದವರ ಅಭಿಪ್ರಾಯವಾಗಿದೆ.

ಪ್ರಜಾಪ್ರಭುತ್ವವಾದಿ ರಾಷ್ಟ್ರಗಳಲ್ಲಿ ಜನಭಾಷೆಗೆ ಹೆಚ್ಚಿನ ಪ್ರಾಧಾನ್ಯತೆ ಇದೆ. ಜನಭಾಷೆ ಆಡಳಿತ ಭಾಷೆಯಾದಾಗ ಮಾತ್ರ ಪ್ರಜಾಪ್ರಭುತ್ವ ಯಶಸ್ವಿಯಾಗಲು ಸಾಧ್ಯ. ಆ ಕಾರಣಕ್ಕಾಗಿಯೇ ರಾಮಮನೋಹರ ಲೋಹಿಯಾ ಅವರು ಹೇಳಿದ್ದು: ''ಜನ ಭಾಷೆಯ ವಿನಾ ಜನತಾ ಸ್ವರಾಜ್ಯ ಸಾಧ್ಯವೇ ಇಲ್ಲ'' ಎಂದು. ''ದೇಶೀ ಭಾಷೆಯಲ್ಲಿ ದ್ರವ್ಯವಿದೆ'' ಎಂದು ಚಿನುವಾ ಅಚಿಬೆ ಹೇಳಿದ್ದು ಕೂಡ ಈ ಹಿನ್ನೆಲೆಯಲ್ಲಿಯೆ. ಆದರೆ ಇಂದು ಭಾರತೀಯ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಬಹುತೇಕವಾಗಿ ಇಂಗ್ಲಿಷ್ ಭಾಷೆ ನಿಯಂತ್ರಿಸುತ್ತಿರುವುದು ದುರಂತ. ಹಾಗಾದರೆ ಇಲ್ಲಿನ ದೇಶೀಯ ಭಾಷೆಗಳ ಸ್ಥಾನಮಾನಗಳೇನು ? ರಾಷ್ಟ್ರೀಯ ಭಾಷಾ ಪರಿಕಲ್ಪನೆ ಇಂದು ಬದಲಾಗಿದೆ. ಈ ಹಿಂದೆ ಹಿಂದಿ ಭಾಷೆಯನ್ನು ರಾಷ್ಟ್ರೀಯ ಭಾಷೆ ಎಂಬುದಾಗಿ ಪರಿಗಣಿಸಲಾಗಿತ್ತು. ಆದರೆ ಪ್ರಸ್ತುತ ರಾಷ್ಟ್ರೀಯ ಭಾಷೆಯ ವ್ಯಾಖ್ಯಾನ ಬದಲಾಗಿದೆ. ಹಿಂದಿ ರಾಷ್ಟ್ರಭಾಷೆಯಾದರೆ, ಇನ್ನುಳಿದ ಅಸಂಖ್ಯಾತ ಭಾರತೀಯ ಭಾಷೆಗಳು, ಬುಡಕಟ್ಟು, ಆದಿವಾಸಿ ಜನರು ಆಡುವ ಭಾಷೆಗಳ ಸ್ಥಾನಮಾನವೇನು ? ಈ ಹಿನ್ನೆಲೆಯಲ್ಲೇ ಜನರಾಡುವ ಭಾರತೀಯ ಭಾಷೆಗಳೆಲ್ಲವೂ ರಾಷ್ಟ್ರ ಭಾಷೆಗಳೆ ಎನ್ನುವ ಅಭಿಪ್ರಾಯ ವ್ಯಕ್ತವಾಗಿದೆ. ತೊವ್‌ಸ್ಕೂಟ್‌ನಬ್ ಕಾಂಗಾಸ್ ಹೇಳಿದ್ದು ಕೂಡ, ''ಪ್ರತಿ ವ್ಯಕ್ತಿಗೂ ಅವರವರ ಭಾಷೆಯನ್ನು ಉಳಿಸಿಕೊಳ್ಳುವ ಹಕ್ಕು ಇರಬೇಕು'' ಎಂದು. ಹಿಂದೂ ಸಂಸ್ಕೃತಿಯೊಂದೇ ಭಾರತೀಯ ಸಂಸ್ಕೃತಿಯಲ್ಲ. ಭಾರತೀಯ ಅಸಂಖ್ಯಾತ ಸಂಸ್ಕೃತಿಗಳಲ್ಲಿ ಹಿಂದೂ ಸಂಸ್ಕೃತಿಯೂ ಒಂದು ಎಂಬ ವಿಶ್ಲೇಷಣೆಯನ್ನು ಭಾರತೀಯ ಭಾಷೆಗಳ ಸಂಬಂಧದಲ್ಲಿಯೂ ವಿಸ್ತರಿಸಬಹುದು. ಈ ಕಾರಣಕ್ಕಾಗಿಯೇ ಲೋಹಿಯಾ ಹೇಳಿದ್ದು, ''ಇಂಗ್ಲಿಷ್‌ನ ಉಚ್ಚಾಟನೆ ಹಿಂದಿಯ ಸ್ಥಾಪನೆಯಲ್ಲ. ಮಾತೃಭಾಷೆಯಲ್ಲಿ ಮಾತಾಡಿ'' ಎಂದು.

ಭಾರತದ ಸಂದರ್ಭದಲ್ಲಿ 'ಭಾಷೆ'ಗಳು ಕೂಡ ಜಾತಿಕೇಂದ್ರಿತ ನೆಲೆಗಳಿಂದ ಬಿಡಿಸಿಕೊಳ್ಳದಿರುವುದು ವಿಪರ್ಯಾಸದ ಸಂಗತಿ. ಒಬ್ಬ ವ್ಯಕ್ತಿ ಆಡುವ ಭಾಷೆಯ ಮೂಲಕ ಆತನ ಜಾತಿಯನ್ನು ಗುರುತಿಸುವ ಪರಿಪಾಠವಿರುವುದು ಭಾರತದಲ್ಲಿ ಮಾತ್ರ. ನಮ್ಮ ರಾಷ್ಟ್ರದಲ್ಲಿ ಭಾಷೆಯು ಕೂಡ ಜಾತಿ ಸೋಂಕಿನಿಂದ ಹೊರತಾಗಿಲ್ಲವೆಂಬುದು ಇದರಿಂದ ತಿಳಿಯುತ್ತದೆ. ಜಾತಿ ಕೇಂದ್ರಿತ ನೆಲೆಯ ಭಾಷೆಗಳ ಅಧ್ಯಯನಕ್ಕೆ ಹೊರಟದ್ದೇ ಆದರೆ ಭಾರತದ ಅಸ್ಪೃಶ್ಯರ ಬದುಕುಗಳು ಗೋಚರಿಸುತ್ತವೆ. ಈ ಅಸ್ಪೃಶ್ಯತಾ ಅಪಮಾನದ ಸಂಕೋಲೆಗಳಿಂದ ಮುಕ್ತರಾಗುವ ಕಾರಣಕ್ಕಾಗಿಯೇ ಶೋಷಿತರು, ವಿವೇಕಶೂನ್ಯರಾಗಿ ಸಂಸ್ಕೃತೀಕರಣ, ಬ್ರಾಹ್ಮಣೀಕರಣಗಳಿಗೆ ಬಲಿಯಾಗುತ್ತಿರುವುದು ದುರಂತದ ಸಂಗತಿ.

"ಕುದಿಯುವ ಬಾಣಲಿಯಿಂದ ಉರಿಯುವ ಬೆಂಕಿಗೆ ಬಿದ್ದ ಹಾಗೆ" ಎಂಬಂತಿದೆ ಇಂದಿನ ಸ್ಥಿತಿ.

**ವಸಾಹತುಶಾಹಿ, ಜಾಗತೀಕರಣ ಹಾಗೂ ಭಾಷೆ**

ಜೀವ ವೈವಿಧ್ಯತೆಯೆ ಭಾಷಾ ವೈವಿಧ್ಯತೆಯ ಮೂಲ ಸೆಲೆ. ಭಾಷಾ ವೈವಿಧ್ಯತೆಯ ವಿನಾಶದ ಮೂಲಬಿಂದು ಜೀವ ವೈವಿಧ್ಯತೆಯ ವಿನಾಶವೇ ಆಗಿದೆ ಎಂಬುದನ್ನು ಹಲವು ಭಾಷಾ ಶಾಸ್ತ್ರಜ್ಞರು ವಿಶ್ಲೇಷಿಸಿದ್ದಾರೆ. ವಸಾಹತುಶಾಹಿ ಹಾಗೂ ಜಾಗತೀಕರಣ ವ್ಯವಸ್ಥೆಗಳು ಜೀವ ವೈವಿಧ್ಯತೆ ಹಾಗೂ ಭಾಷಾ ವೈವಿಧ್ಯತೆಯ ವಿನಾಶದ ಮೇಲೆ ರೂಪಿತ ಗೊಂಡವುಗಳಾಗಿವೆ. ಭಾಷಾಶಾಸ್ತ್ರದ ಅಧ್ಯಯನದ ಪ್ರಕಾರ "ವಸಾಹತುಶಾಹಿಯಿಂದಾಗಿ ಯೂರೋಪ್ ರಾಷ್ಟ್ರಗಳ ಶೇಕಡ ೨೦ರಷ್ಟು ಭಾಷೆಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡಿವೆ. ೧೫೩೦ರ ಹೊತ್ತಿಗೆ ಬ್ರೆಜಿಲ್ ಪೋರ್ಚುಗೀಸರ ವಸಾಹತುಶಾಹಿಯಾಗಿ ಸುಮಾರು ೫೦೦ಕ್ಕೂ ಹೆಚ್ಚು ಭಾಷೆಗಳನ್ನು ಕಳೆದುಕೊಂಡಿದೆ." 'ಅಟ್ಲಾಸ್ ಆಫ್ ದಿ ವರ್ಲ್ಡ್ ಲ್ಯಾಂಗ್ವೇಜಸ್, ಡೆಡ್ ಲ್ಯಾಂಗ್ವೇಜಸ್, ರೆಡ್ ಬುಕ್' ಎಂಬ ಗ್ರಂಥದಲ್ಲಿ ಉಲ್ಲೇಖಿತ ವಾಗಿರುವ ಹಾಗೆ: "ಉತ್ತರ ಅಮೆರಿಕಾ, ಕೆನಡಾ, ಯುನೈಟೆಡ್ ಸ್ಟೇಟ್ಸ್‌ಗಳಲ್ಲಿ ೧೦೦ ವರ್ಷಗಳ ಹಿಂದೆ ಸುಮಾರು ೧೮೭ ಭಾಷೆಗಳಿದ್ದವು. ಇಂದು ಕೇವಲ ೩೮ ಭಾಷೆಗಳು ಮಾತ್ರ ಉಳಿದಿವೆ." ಇನ್ನುಳಿದ ಭಾಷೆಗಳೇನಾದವು? ಅಲಾಸ್ಕಾದಲ್ಲಿದ್ದ ೨೦ ಭಾಷೆಗಳ ಪೈಕಿ ಈಗ ೨ ಭಾಷೆಗಳು ಮಾತ್ರ ಉಳಿದಿವೆ. ಲ್ಯಾಟಿನ್ ಅಮೆರಿಕಾದಲ್ಲಿದ್ದ ೪೦೦ ಭಾಷೆಗಳು ಈಗ ೧೦೮ಕ್ಕೆ ಬಂದು ನಿಂತಿವೆ. ಆಸ್ಟ್ರೇಲಿಯಾದಲ್ಲಿ ಬುಡಕಟ್ಟು ಸಮುದಾಯಕ್ಕೆ ಸಂಬಂಧಿಸಿದಂತೆ ಸುಮಾರು ೨೦೦ ಭಾಷೆಗಳಿದ್ದದ್ದು ಈಗ ಅವುಗಳಲ್ಲಿ ೩೫ ಮಾತ್ರ ಉಳಿದಿವೆ. ಎನ್‌ಸಿಇಆರ್‌ಟಿಯ ಭಾರತದ ಶಿಕ್ಷಣ ಸಮೀಕ್ಷೆಯ ಪ್ರಕಾರ ೧೯೩೦ರಲ್ಲಿ ಶಾಲೆಗಳಲ್ಲಿ ಬಳಸಲ್ಪಡುತ್ತಿದ್ದ ಭಾಷೆಗಳ ಸಂಖ್ಯೆ ಸುಮಾರು ೮೧. ಆದರೆ ನಂತರದ ೨೫ ವರ್ಷಗಳಲ್ಲಿ ಆ ಭಾಷೆಗಳ ಸಂಖ್ಯೆ ೪೧ಕ್ಕೆ ಇಳಿದಿದೆ. ಹಾಗೆಯೆ ಶಿಕ್ಷಣ ಮಾಧ್ಯಮವಾಗಿ ಜಾರಿಯಲ್ಲಿದ್ದ ೪೭ ಭಾಷೆಗಳಲ್ಲಿ ಈಗ ಕೇವಲ ೧೮ ಭಾಷೆಗಳು ಮಾತ್ರ ಉಳಿದಿವೆ. (ಹೆಚ್ಚಿನ ವಿವರಗಳಿಗಾಗಿ ಕೆ. ವಿ. ನಾರಾಯಣ ಅವರ 'ಕನ್ನಡ ಜಗತ್ತು ಅರ್ಧ ಶತಮಾನ' ಪುಸ್ತಕ ಗಮನಿಸಿ). ಈ ಎಲ್ಲಾ ಅಂಕಿ ಅಂಶಗಳೂ ಕೂಡ ವಸಾಹತುಶಾಹಿ ವ್ಯವಸ್ಥೆಯಿಂದಾಗಿ ಭಾಷಾ ಪರಿವಾರದ ಮೇಲಾಗಿರುವ ದುಷ್ಪರಿಣಾಮಗಳನ್ನು ಕಟ್ಟಿಕೊಡುತ್ತವೆ.

ಬ್ರಿಟಿಷರ ವಸಾಹತುಶಾಹಿ ವ್ಯವಸ್ಥೆ ಭಾರತವನ್ನು ಪ್ರವೇಶಿಸಿದ ಮೇಲೆ ರಾಷ್ಟ್ರೀಯ ಭಾಷಾ ಪರಿಕಲ್ಪನೆ, ಶಿಕ್ಷಣ ಮಾಧ್ಯಮ, ಭಾಷಾ ಚರ್ಚೆಗಳು ಹೊಸ ಹುಟ್ಟು-ತಿರುವುಗಳನ್ನು ಪಡೆದುಕೊಂಡವು. ಅದೇ ಸಂದರ್ಭದಲ್ಲಿ ಅನೇಕ ಪ್ರಶ್ನೆಗಳೂ ಭಾಷಿಕ ನೆಲೆಯಲ್ಲಿ ಹುಟ್ಟಿಕೊಳ್ಳಲಾರಂಭಿಸಿದವು. ಆದಿವಾಸಿ, ಬುಡಕಟ್ಟು ಜನಾಂಗಗಳು ಆಡುವ ಭಾಷೆಗಳನ್ನು ಪರಿಗಣಿಸುವ ಬಗೆ ಹೇಗೆ? ತಾಯಿ, ತಂದೆ ಯಾರೆಂದು ಗೊತ್ತಿಲ್ಲದ ಅನಾಮಧೇಯ, ಅನಾಥ ಬೀದಿಮಕ್ಕಳಿಗೆ ಯಾವುದು 'ಮಾತೃಭಾಷೆ'? ಭೂಮಿ, ಮನೆ ಇಲ್ಲದ ನಿರ್ಗತಿಕ, ಶೋಷಿತ ಮತ್ತು ತಳ ಸಮುದಾಯಗಳಿಗೆ ಯಾವುದು 'ದೇಶ ಭಾಷೆ'?

ಜಾಗತೀಕರಣದ ಸಂದರ್ಭದಲ್ಲಿ ಭಾಷಾ ಸಮಸ್ಯೆಯನ್ನು ಬಡವ, ನಿರ್ಗತಿಕ, ಕೆಳಜಾತಿ ಸಮುದಾಯಗಳು, ಶ್ರೀಮಂತ, ಮೇಲ್ಜಾತಿ ಸಮುದಾಯಗಳು, ತಥಾಕಥಿತ ಪ್ರೊಫೆಸರುಗಳು ಹಾಗೂ ಭಾಷಾ ಹೋರಾಟಗಾರರು, ನಿರುದ್ಯೋಗಿ ಯುವ ಸಮುದಾಯ, ಆದಿವಾಸಿ ಬುಡಕಟ್ಟು ಈ ಎಲ್ಲ ಜನಾಂಗ – ಸಮುದಾಯಗಳ ದೃಷ್ಟಿಕೋನದ ನೆಲೆಯಲ್ಲಿ ನಿಂತು ಚರ್ಚಿಸುವ ಅಗತ್ಯತೆ ಇದೆ. ಆಗ ಮಾತ್ರ ಒಂದು ಭಾಷೆಯ ಅಸ್ತಿತ್ವ,



## ಈಗ ಬರುತ್ತೇನೆ

ಸ್ವಲ್ಪ ಸೈರಿಸು ಗೆಳೆಯಾ
ಈಗ ಬರುತ್ತೇನೆ
ನೆರೆಮನೆಗೆ ಯಾರೋ ಧರ್ಮಾಂಧರು
ಬೆಂಕಿ ಹಚ್ಚಿದರಂತೆ
ನನ್ನ ಮನೆಗೆ ಸುತ್ತೂ ತಿರುಗಿ
ಖಾತ್ರಿ ಮಾಡಿಕೊಂಡು ಈಗ ಬರುತ್ತೇನೆ.

ಸ್ವಲ್ಪ ಸಹನೆ ಬೇಕು ಗೆಳೆಯಾ
ಈಗ ಬರುತ್ತೇನೆ
ಪಕ್ಕದ ಮನೆ ಬೇವಾರ್ಸಿ ಹುಡುಗಿ
ಯಾರನ್ನೋ ಕೂಡಿಕೊಂಡು ಪರಾರಿಯಾದಳಂತೆ
ನನ್ನ ಮೊದ್ದುಮಗಳ ಮುಖ ನೋಡಿ
ಖಾತ್ರಿ ಮಾಡಿಕೊಂಡು ಈಗ ಬರುತ್ತೇನೆ.

ಸ್ವಲ್ಪ ತಾಳು ಗೆಳೆಯಾ ಈಗ ಬರುತ್ತೇನೆ
ಆಚೆ ಮನೆ ಎಚ್ಚಕ್ಕ ಆತ್ಮಹತ್ಯೆ ಮಾಡಿಕೊಂಡಳಂತೆ
ನನ್ನ ಮನೆ ಅಡಿಗೆಕೋಣೆ ನೋಡಿ ಖಾತ್ರಿ ಮಾಡಿಕೊಂಡು
ಈಗ ಬರುತ್ತೇನೆ.

ಸ್ವಲ್ಪ ತಾಳ್ಮೆ ಬೇಕು ಗೆಳೆಯಾ ಈಗ ಬರುತ್ತೇನೆ
ಕೆಳಮನೆ ಪುಟಾಣಿ ಮಗು ಈಗ ತಾನೆ
ಕಾಲು ಜಾರಿ ಬಾವಿಗೆ ಬಿತ್ತಂತೆ
ನನ್ನ ಮನೆ ಪಿಳ್ಳಂಗೋವಿ ಕೃಷ್ಣನಿಗೆ
ಮುತ್ತುಕೊಟ್ಟು ಈಗ ಬರುತ್ತೇನೆ.

ಸ್ವಲ್ಪ ಸಮಾಧಾನ ಬೇಕು ಗೆಳೆಯಾ ಈಗ ಬರುತ್ತೇನೆ
ತಿಪ್ಪಾ ಜೋಯಿಸರ ದೇವರ ಕೋಣೆಗೆ
ಕಳ್ಳರು ನುಗ್ಗಿ ದೇವರ ಕಿರೀಟವನ್ನೇ ಹಾರಿಸಿಬಿಟ್ಟರಂತೆ
ನನ್ನ ಕಪಾಟಿನ ಬೀಗ ಮುದ್ರೆ ನೋಡಿ
ಖಾತ್ರಿ ಮಾಡಿಕೊಂಡು ಈಗ ಬರುತ್ತೇನೆ.

ಅವಸರ ಬೇಡ ಗೆಳೆಯಾ ಈಗ ಬರುತ್ತೇನೆ
ಪಕ್ಕದ ಓಣಿಯಲ್ಲಿ ಅನಾಥ ಹೆಣ ಕೊಳೆತು
ದುರ್ನಾತದ ಬಿರುಗಾಳಿ ಎದ್ದಿದೆಯಂತೆ
ನನ್ನ ಮನೆ ಕಿಟಕಿ ಬಾಗಿಲು ಮುಚ್ಚಿ ಈಗ ಬರುತ್ತೇನೆ.

ತರಾತುರಿ ಬೇಡ ಗೆಳೆಯಾ ಈಗ ಬರುತ್ತೇನೆ
ಖಂಡಿತವಾಗಿಯೂ ಬರುತ್ತೇನೆ
ಎದುರುಮನೆ ಪಡಸಾಲೆಗೆ ಯಮರಾಯ
ನುಗ್ಗಿದನಂತೆ; ನನ್ನ ಮನೆ ಖಾಲಿ ಮಾಡಿ
ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು
ನಿನ್ನ ಮನೆಯಲ್ಲೇ ಬಿಡಾರ ಹೂಡುತ್ತೇನೆ.

**ಗೋಪಾಲ ಬಿ. ಶೆಟ್ಟಿ**, 'ಆರಾಧನಾ', ಇಂದ್ರಾಳಿ, ೩ನೇ ಅಡ್ಡರಸ್ತೆ, ಉಡುಪಿ - ೫೭೬ ೧೦೨

ಉಳಿವು-ಅಳಿವು ಹಾಗೂ ಭಾಷೆ-ಬದುಕಿನ ಸಂಬಂಧದ ಅನಿವಾರ್ಯತೆಗಳು ಎದುರಾಗಲು ಸಾಧ್ಯ.

**ಕನ್ನಡ ಭಾಷೆ ಮತ್ತು ಜಾಗತೀಕರಣ**

ಜಾಗತೀಕರಣದ ಈ ಹೊತ್ತಿನಲ್ಲಿ ಕನ್ನಡ ಭಾಷೆಯ ಅಸ್ತಿತ್ವದ ಪ್ರಶ್ನೆ ಬಹುದೊಡ್ಡ ಸವಾಲಿನದಾಗಿದೆ. ಭಾಷಾವಾರು ಪ್ರಾಂತ್ಯಗಳ ಮರುವಿಂಗಡಣೆಯ ನಂತರ ಕರ್ನಾಟಕ ಏಕೀಕರಣಗೊಂಡು, ಕರ್ನಾಟಕ ಅಸ್ತಿತ್ವಕ್ಕೆ ಬಂದು ಸುವರ್ಣ ಕರ್ನಾಟಕ ಮಹೋತ್ಸವವನ್ನು ಆಚರಿಸಿದ್ದರೂ ಕೂಡ ಕನ್ನಡದ ಅಸ್ತಿತ್ವ ಮಾತ್ರ ತೂಗುಯ್ಯಾಲೆಯ ಸ್ಥಿತಿಯಲ್ಲಿಯೇ ಇದೆ. ಸೂರ್ಯನಾಥ ಕಾಮತ್ ಹೇಳುವಂತೆ : ''ಏಕೀಕರಣದ ನಂತರ ಕನ್ನಡ ಆಡಳಿತ ಭಾಷೆಯಾಗುವ ವಿಚಾರದಲ್ಲಿ ಖಚಿತವಾಗಿಯೂ ಹಿನ್ನಡೆಯಾಯಿತು. ಆಡಳಿತ ಭಾಷೆ ಕನ್ನಡವಾಗಬೇಕು, ಇದರಿಂದ ಆಡಳಿತಕ್ಕೆ ಅನುಕೂಲ ಎಂಬ ಆಶಯದಿಂದ ಏಕೀಕರಣವಾಯಿತು. ಆದರೆ ಏಕೀಕರಣದ ಬಗ್ಗೆ ಉತ್ಸಾಹ, ಸಂತಸಗಳಲ್ಲಿ ಮೈಮರೆತ ಕನ್ನಡಾಭಿಮಾನಿಗಳು ಆಡಳಿತ ಭಾಷೆ ಕನ್ನಡವಾಗಬೇಕೆಂಬ ದಿಸೆಯಲ್ಲಿ ತಕ್ಷಣ ಗಮನ ನೀಡಲಿಲ್ಲ. ಆಡಳಿತವೂ ಈ ಬಗ್ಗೆ ಗಮನ ನೀಡಲಿಲ್ಲ''. ('ಆಡಳಿತ ಭಾಷೆಯಾಗಿ ಕನ್ನಡ : ಏಕೀಕರಣದ ನಂತರ' - ಸೂರ್ಯನಾಥ ಕಾಮತ್ : ೧೯೮೫)

೧೯೬೩ರ ಅಕ್ಟೋಬರ್ ೫ರಂದು 'ಕರ್ನಾಟಕ ರಾಜಭಾಷಾ ಅಧಿನಿಯಮ' ಜಾರಿಗೆ ಬಂದರೂ ಕೂಡ ಇದುವರೆಗೂ ಸಮರ್ಪಕವಾಗಿ ಕನ್ನಡ ಭಾಷೆಯನ್ನು ಆಡಳಿತ ಭಾಷೆ ಹಾಗೂ ಶಿಕ್ಷಣ ಮಾಧ್ಯಮ ಭಾಷೆಯನ್ನಾಗಿ ರೂಪಿಸುವಲ್ಲಿ ನಾವು ಸೋತಿದ್ದೇವೆ. ಹಾಗಾಗಿ ಇವತ್ತಿನ ಕನ್ನಡದ ದುಃಸ್ಥಿತಿಗೆ ಕನ್ನಡಿಗರೇ ಹೊಣೆಗಾರರು. ಹೇಮಲತಾ ಮಹಿಷಿ ಅವರು ಹೇಳುವ ಹಾಗೆ : ''ನಮ್ಮ ನೆರೆ-ಹೊರೆಯ ರಾಜ್ಯಗಳೊಂದಿಗೆ ಹೋಲಿಸಿ ನೋಡಿದಾಗ ಕನ್ನಡದ ಅಭಿವೃದ್ಧಿಯ ಬಗ್ಗೆ ಪೂರ್ಣ ತೃಪ್ತಿಯಾಗುವುದಿಲ್ಲ. ಆಡಳಿತದ ಕೆಳಹಂತದಲ್ಲಿ ಸ್ವಲ್ಪಮಟ್ಟಿನ ಪ್ರಗತಿಯಾಗಿದ್ದರೂ ಸಚಿವಾಲಯ ಮಟ್ಟದಲ್ಲಿ ಪೂರ್ಣ ಪ್ರಮಾಣದಲ್ಲಿ ಆಗಿಲ್ಲ. ಕೆಳ ನ್ಯಾಯಾಲಯಗಳಲ್ಲಿ ಕನ್ನಡದ ಅನುಷ್ಠಾನದ ಮಟ್ಟ ತೃಪ್ತಿಕರವಾಗಿಲ್ಲ. ಒಂದೇ ಸಮನೆ ನಡೆದ ಚಳವಳಿಗಳ ಫಲವಾಗಿ ಶಾಲೆಗಳಲ್ಲಿ ಕನ್ನಡವನ್ನು ಒಂದು ವಿಷಯವಾಗಿ ಕಲಿಸುವುದು ಆರಂಭವಾಗಿದ್ದರೂ ಮಾತೃಭಾಷಾ ಮಾಧ್ಯಮದ ಪ್ರಾಥಮಿಕ ಶಾಲೆಗಳು ಇನ್ನೂ ಸಾಕಾರಗೊಂಡಿಲ್ಲ. ಆಂಗ್ಲ ಭಾಷೆ ಕುರಿತ ವ್ಯಾಮೋಹ ಬಿಟ್ಟುಹೋಗಿಲ್ಲ''. (ಕರ್ನಾಟಕದ ಭಾಷಾ ನೀತಿ - ಹೇಮಲತಾ ಮಹಿಷಿ : ೧೯೯೯)

**ಶಿಕ್ಷಣ ಭಾಷಾ ಮಾಧ್ಯಮ ರೂಪಿಸುತ್ತಿರುವ ವರ್ಗ ವ್ಯವಸ್ಥೆ**

ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ೧ರಿಂದ ೧೦ನೇ ತರಗತಿಯವರೆಗೆ ಏಕರೂಪ ಭಾಷಾ (ಕನ್ನಡ ಮಾಧ್ಯಮ) ಶಿಕ್ಷಣ ವ್ಯವಸ್ಥೆಯನ್ನು ಜಾರಿಗೆ ತರಲಾಗಿಲ್ಲ. ಇದರಿಂದಾಗಿ ಹಲವು ಜ್ವಲಂತ ಸಮಸ್ಯೆಗಳು ಎದುರಾಗಿವೆ. ಶತಮಾನಗಳಿಂದ ಭಾರತೀಯ ಜಾತಿ ವ್ಯವಸ್ಥೆ ಮನುಷ್ಯ ಸಮಾಜವನ್ನು ಒಡೆದು ಆಳುತ್ತಿರುವ ಹಾಗೆ ಶಿಕ್ಷಣದಲ್ಲಿ ಕನ್ನಡ-ಇಂಗ್ಲಿಷ್ ಮಾಧ್ಯಮ ವ್ಯವಸ್ಥೆ ಮನುಷ್ಯ ಸಮಾಜದಲ್ಲಿ ಒಂದು ರೀತಿಯ ವರ್ಗ ವ್ಯವಸ್ಥೆಯನ್ನು ಹುಟ್ಟುಹಾಕಿದೆ. ಕಾನ್ವೆಂಟ್‌ಗಳಲ್ಲಿ, ಪ್ರತಿಷ್ಠಿತ ಶಾಲೆಗಳಲ್ಲಿ ಇಂಗ್ಲಿಷ್ ಮಾಧ್ಯಮದಲ್ಲಿ ಓದುವವರಲ್ಲಿ ಹೆಚ್ಚಿನವರು ಶ್ರೀಮಂತರ, ನಗರದ, ಅಧಿಕಾರಿಗಳ, ರಾಜಕಾರಣಿಗಳ, ಪ್ರತಿಷ್ಠಿತರ ಮಕ್ಕಳಾದರೆ ಸರ್ಕಾರಿ ಶಾಲೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ಓದುವವರಲ್ಲಿ ಹೆಚ್ಚಿನವರು ಗ್ರಾಮೀಣ ಪ್ರದೇಶದ ಬಡವರ, ಕೆಳಜಾತಿಯ, ರೈತರ, ಕೂಲಿಕಾರ್ಮಿಕರ ಮಕ್ಕಳೇ ಆಗಿರುತ್ತಾರೆ. ಹಾಗಾಗಿ ಸರ್ಕಾರಿ ಕನ್ನಡ ಮಾಧ್ಯಮ ಶಾಲೆಗಳಲ್ಲಿ ಓದುವ ಮಕ್ಕಳು ಖಾಸಗಿ ಕಾನ್ವೆಂಟ್ ಇಂಗ್ಲಿಷ್ ಮಾಧ್ಯಮಗಳಲ್ಲಿ ಓದುವ ಮಕ್ಕಳೊಂದಿಗೆ ಸ್ಪರ್ಧಿಸಲಾಗದೆ ಅಸಂಖ್ಯಾತ ಅವಕಾಶಗಳಿಂದ ವಂಚಿತರಾಗಿದ್ದಾರೆ. ಇದರ ಸಂಪೂರ್ಣ ನೈತಿಕ ಹೊಣೆಗಾರಿಕೆ ಸಮಾನ ಶಿಕ್ಷಣ ನೀಡದ ನಮ್ಮ ರಾಜಕೀಯ, ಶೈಕ್ಷಣಿಕ ಹಾಗೂ ಸಾಮಾಜಿಕ ವ್ಯವಸ್ಥೆಯದೇ ಆಗಿದೆ. ಹಾಗಾಗಿ ಮನುಷ್ಯ ಸಮಾಜದಲ್ಲಿ ಸಮಾನತೆಯನ್ನು ರೂಪಿಸಬೇಕಾಗಿದ್ದ ಶಿಕ್ಷಣ ವ್ಯವಸ್ಥೆ ಇಂದು ತರತಮ ಭೇದಗಳನ್ನೆ ಸೃಷ್ಟಿಸುತ್ತಿದೆ. ಇವತ್ತಿನ ಸ್ಪರ್ಧಾಜಗತ್ತಿಗೆ ಬೇಕಾಗುವ ತಾಂತ್ರಿಕ ಹಾಗೂ ಉನ್ನತ ಮಟ್ಟದ ಶಿಕ್ಷಣವನ್ನು ಪಡೆಯಲು ಸಾಧ್ಯವಾಗದ, ಆರ್ಥಿಕವಾಗಿ ಸಬಲರಲ್ಲದ ಹಳ್ಳಿಗಾಡಿನ ಬಡ ವಿದ್ಯಾರ್ಥಿಗಳೂ ಸಾಮಾನ್ಯವಾಗಿ ಆರ್ಟ್ಸ್ (ಬಿ.ಎ.) ಓದಿಕೊಂಡು ನಿರುದ್ಯೋಗಿಗಳಾಗಿ ತಮ್ಮ ಬದುಕಿನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿದ್ದಾರೆ. ವಿಪರ್ಯಾಸವೆಂದರೆ, ಇಂಥವರಿಂದಲೇ ಕನ್ನಡ ಭಾಷೆ ಉಳಿದಿದೆ ಎಂಬುದು. ಕನ್ನಡ ಮಾಧ್ಯಮದಲ್ಲಿ ಓದಿ ಯಾವುದೇ ಅವಕಾಶ, ಉದ್ಯೋಗವಿಲ್ಲದೆ ಪರಿತಪಿಸುತ್ತಿರುವ ನಿರುದ್ಯೋಗಿ ಗ್ರಾಮೀಣ ವಿದ್ಯಾರ್ಥಿಯಲ್ಲಿ ತಾನು ಕನ್ನಡ ಮಾಧ್ಯಮದಲ್ಲಿ ಓದಿದ್ದೆ ತಪ್ಪು ಎಂಬ ಭಾವನೆ ಬಂದು ಕನ್ನಡ ಭಾಷೆಯನ್ನು ದ್ವೇಷಿಸುವಂತಹ ವಾತಾವರಣ ನಿರ್ಮಾಣವಾಗಿದೆ. ಕನ್ನಡ ಭಾಷೆಯ ಬಗೆಗೆ ನಮ್ಮ ರಾಜಕಾರಣ ಹಾಗೂ ಅಧಿಕಾರಶಾಹಿ ವ್ಯವಸ್ಥೆಯಲ್ಲಿರುವ ದಿವ್ಯ ನಿರ್ಲಕ್ಷ್ಯವೇ ಇದಕ್ಕೆ ಕಾರಣ. ಇದರೊಟ್ಟಿಗೆ, ಕಾನ್ವೆಂಟ್ ಸಂಸ್ಕೃತಿ ಹಾಗೂ ಮಠಮಾನ್ಯಗಳು ಶಿಕ್ಷಣವನ್ನು ವ್ಯಾಪಾರೀಕರಣಗೊಳಿಸಿರುವ ಪರಿಣಾಮವನ್ನು ಕಡೆಗಣಿಸುವಂತಿಲ್ಲ. ಕನ್ನಡ ಭಾಷೆ ಕಡ್ಡಾಯವಾಗಿ ಶಿಕ್ಷಣ ಮಾಧ್ಯಮ ಭಾಷೆ ಹಾಗೂ ಆಡಳಿತಭಾಷೆಯಾಗಿ ಜಾರಿಗೊಳ್ಳದ ಹೊರತು ಈಗಾಗಲೇ ಹುಟ್ಟಿಕೊಂಡಿರುವ ಅಸಂಖ್ಯಾತ ಭಾಷಿಕ ಸಮಸ್ಯೆಗಳಿಗೆ ಶಾಶ್ವತ ಉತ್ತರವನ್ನು ಕಂಡುಕೊಳ್ಳಲು ಸಾಧ್ಯವಿಲ್ಲ.

**ಅನ್ನದ ಪ್ರಶ್ನೆ ಎದುರು ಭಾಷೆಯ ಅಸ್ತಿತ್ವ**

ಜಾಗತೀಕರಣದ ಇಂದಿನ ದಿನಮಾನಗಳಲ್ಲಿ ಭಾರತದಂತಹ ತೃತೀಯ ಜಗತ್ತಿನ ಜನಸಾಮಾನ್ಯರಿಗೆ ಭಾಷೆ ಎಂಬುದು ಅನ್ನದ ಪ್ರಶ್ನೆಯಾಗಿದೆ. ಹಾಗೆಯೇ ಶಿಕ್ಷಣ ಕೂಡ ಬದುಕಿನ ಅಸ್ತಿತ್ವವನ್ನು ಕಟ್ಟಿಕೊಳ್ಳುವ ಹಾಗೂ ಬಡತನ, ಹಸಿವು ಮೊದಲಾದ ಸಮಸ್ಯೆಗಳ ನಿವಾರಣೆಯ ನಿಟ್ಟಿನಲ್ಲಿ ಬಳಸುವ ಬಹುದೊಡ್ಡ ಮಾನದಂಡವಾಗಿದೆ. ಒಬ್ಬ ಬಡವನಿಗೆ ಮಾತೃಭಾಷೆ, ನಾಡಭಾಷೆ, ದೇಶಭಾಷೆ, ರಾಷ್ಟ್ರಭಾಷೆಗಳಿಗಿಂತ ಅನ್ನ ಮತ್ತು ಉದ್ಯೋಗವನ್ನು ಕಲ್ಪಿಸುವ ಭಾಷೆ ಮುಖ್ಯವಾಗುತ್ತದೆ. ಆ ನಿಟ್ಟಿನಲ್ಲಿ ಇಂದು ಇಂಗ್ಲಿಷ್ 'ಅನ್ನ ಹಾಗೂ ಉದ್ಯೋಗ ನೀಡುವ ಭಾಷೆ' ಯಾಗಿಬಿಟ್ಟಿದೆ. ಇಂಗ್ಲಿಷ್ ಮಾತನಾಡಲು, ಬರೆಯಲು, ಓದಲು ಬರುವವನಿಗೆ ದೊಡ್ಡ ದೊಡ್ಡ ನಗರಗಳಲ್ಲಿ ಉದ್ಯೋಗಾವಕಾಶಗಳು ಹೆಚ್ಚಾಗಿ ಇರುವುದನ್ನು ಕಾಣುತ್ತೇವೆ. ಅಂತಹ ಸಂದರ್ಭದಲ್ಲಿ ಬಡತನದ ಹಿನ್ನಲೆಯಿಂದ ಬಂದ ಒಬ್ಬ ವಿದ್ಯಾರ್ಥಿಗೆ ಸಹಜವಾಗಿ ತನ್ನ ಮಾತೃಭಾಷೆ ಕನ್ನಡಕ್ಕಿಂತ ಅನ್ನ ಕೊಡುವ ಇಂಗ್ಲಿಷ್ ಭಾಷೆ ಹೆಚ್ಚು ಪ್ರಿಯವೆನಿಸುತ್ತದೆ. ಇಂತಹ ಪೈಪೋಟಿಯ ಜಾಗತೀಕರಣದ ಸಂದರ್ಭದಲ್ಲಿ ಕನ್ನಡವನ್ನು 'ಅನ್ನಭಾಷೆ' ಯಾಗಿ ರೂಪಿಸುವ ನಿಟ್ಟಿನಲ್ಲಿ ಪ್ರಾಮಾಣಿಕ ಪ್ರಯತ್ನ ಆಗಬೇಕಿದೆ. ಇದೇ ಸಂದರ್ಭದಲ್ಲಿ ಕನ್ನಡದ ಸೋದರ ಭಾಷೆಗಳಾದ ಕೊಂಕಣಿ, ಕೊಡವ, ತುಳು ಮುಂತಾದ ಭಾಷೆಗಳ ಅಸ್ತಿತ್ವ ಹಾಗೂ ಅವುಗಳ ಸಾಂಸ್ಕೃತಿಕ ಮತ್ತು ಪ್ರಾದೇಶಿಕ ಅಧ್ಯಯನದ ಅಗತ್ಯತೆ ಕೂಡ ಇದೆ.

ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಸಿಕ್ಕಿರುವುದು ಹೆಮ್ಮೆಯ ಸಂಗತಿ. ಆದರೆ ಕನ್ನಡ ಶಿಕ್ಷಣ ಮಾಧ್ಯಮ ಹಾಗೂ ಆಡಳಿತ ಭಾಷೆಯಾಗಿ ಸಂಪೂರ್ಣ ಜಾರಿಯಾಗುವ ನಿಟ್ಟಿನಲ್ಲಿ ಹೋರಾಟಗಳು ಹೆಚ್ಚು ತೀವ್ರವಾಗುವ ಅಗತ್ಯತೆ ಇದೆ. ಆ ಮೂಲಕ ಜಾಗತೀಕರಣ ಸಂದರ್ಭದಲ್ಲಿ ಕನ್ನಡ ಭಾಷೆ ಅಸ್ತಿತ್ವವನ್ನು ಕಾಯ್ದುಕೊಳ್ಳಬೇಕಿದೆ. ಶಾಸ್ತ್ರೀಯ ಸ್ಥಾನಮಾನಕ್ಕಾಗಿ ಉಪವಾಸ ಮಾಡಿದ ನಮ್ಮ ತಥಾಕಥಿತ ಕನ್ನಡಪರ ಹೋರಾಟಗಾರರು ಕನ್ನಡವನ್ನು ಶಿಕ್ಷಣ ಮಾಧ್ಯಮ ಹಾಗೂ ಆಡಳಿತ ಭಾಷೆಯಾಗಿ ಸರ್ಕಾರದ ಮಟ್ಟದಲ್ಲಿ ಜಾರಿಗೊಳಿಸುವ ಸಲುವಾಗಿ ಒಂದು ದಿನವೂ ಉಪವಾಸ ಮಾಡದಿರುವುದು ವಿಪರ್ಯಾಸದ ಸಂಗತಿ. ಕರ್ನಾಟಕದ ಉದ್ದಗಲಕ್ಕೂ ನಾಯಿಕೊಡೆಗಳ ಹಾಗೆ ಹುಟ್ಟಿಕೊಂಡಿರುವ ಕನ್ನಡ ಸಂಘಟನೆಗಳು ಕನ್ನಡ ಭಾಷಾ ಪರವಾದ ಹೋರಾಟಕ್ಕೆ ಬದಲಾಗಿ ತಮ್ಮ ಸ್ವಾರ್ಥ ಹಿತಾಸಕ್ತಿಗಳನ್ನು ಈಡೇರಿಸಿಕೊಳ್ಳುವ ರಾಜಕೀಯ ಸಂಘಟನೆಗಳಾಗಿರುವುದು ಕನ್ನಡದ ದುರಂತ. ಹಾಗೆಯೇ ಸರ್ಕಾರಿ ಸ್ವಾಮ್ಯದ ಪ್ರಾಧಿಕಾರ, ಅಕಾಡೆಮಿ, ಇಲಾಖೆಗಳ ನಿರ್ಲಕ್ಷ್ಯ ಮತ್ತು ಶಾಸನಬದ್ಧ ಅಧಿಕಾರದ ಕೊರತೆಗಳು ಕೂಡ ಕನ್ನಡ ಭಾಷಾ ಸಮಸ್ಯೆಗೆ ಕಾರಣವಾಗಿವೆ.

ಇತರ ಭಾಷೆಗಳನ್ನು ಕಲಿಯುವ ಸಂದರ್ಭದಲ್ಲೇ ಕನ್ನಡ ಭಾಷೆ, ಸಂಸ್ಕೃತಿ, ಕನ್ನಡತನವನ್ನು ಶಾಶ್ವತವಾಗಿ ಕಾಪಾಡಿಕೊಳ್ಳುವ ಅಗತ್ಯ, ಎಚ್ಚರದ ಅವಶ್ಯಕತೆ ಇದೆ. ಆ ನಿಟ್ಟಿನಲ್ಲಿ ಈವರೆಗೆ ನೆನೆಗುದಿಯಲ್ಲಿ ಬಿದ್ದಿರುವ 'ಮಹಿಷಿ ವರದಿ' ಆದಿಯಾಗಿ ಕನ್ನಡ ಭಾಷಾ ಪರವಾದ ವರದಿಗಳನ್ನು ಪ್ರಾಮಾಣಿಕವಾಗಿ ಜಾರಿಗೊಳಿಸುವ ರಾಜಕೀಯ ಸಂಕಲ್ಪದ ತುರ್ತಿದೆ. ಆಗ ಮಾತ್ರ ಜಾಗತೀಕರಣದ ಇವತ್ತಿನ ಒತ್ತಡದ ಸಂದರ್ಭದಲ್ಲಿ ದೇಶೀ ಭಾಷೆಯಾದ ಕನ್ನಡದ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಸಾಧ್ಯ. ಕನ್ನಡ ಭಾಷೆಯನ್ನು ಕೇಂದ್ರೀಕರಿಸಿ ಈವರೆಗೆ ಚರ್ಚಿಸಲ್ಪಟ್ಟ ಮೇಲ್ಕಂಡ ಎಲ್ಲ ವಿಚಾರಗಳನ್ನು ಭಾರತದ ಹಾಗೂ ಜಗತ್ತಿನ ಎಲ್ಲಾ ದೇಶೀಯ ಭಾಷೆಗಳಿಗೆ ಮುಖಾಮುಖಿಯಾಗಿರುವ ಜಾಗತೀಕರಣದ ಸಮಸ್ಯೆ-ಸವಾಲುಗಳ ಸಂದರ್ಭದಲ್ಲಿ ಗಂಭೀರವಾಗಿ ವಿವೇಚಿಸುವ ಅಗತ್ಯವಿದೆ.

**ಡಾ॥ ಅಪ್ಪಗೆರೆ ಸೋಮಶೇಖರ್**
ಸಂಶೋಧಕರು (ಪಿ.ಡಿ.ಎಫ್.)
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸಗಂಗೋತ್ರಿ, ಮೈಸೂರು - ೫೭೦ ೦೦೬

**ಶಿ**ಕ್ಷಣವು ಮಾನವ ಜೀವನದ ಭಾಗವಾಗಿ ಬೆಳೆದುಬಂದಿದೆ. ಇಂದು ಶಿಕ್ಷಣಕ್ಕೆ ಪ್ರಥಮ ಪ್ರಾಶಸ್ತ್ಯ ದೊರಕಿದ್ದು, ಪ್ರತಿಯೊಬ್ಬರಲ್ಲಿ ಅಡಗಿರುವ ಸುಪ್ತ ಚೇತನವನ್ನು ವಿಕಸಿಸುವಂತೆ ಮಾಡುವ ಸರ್ವತೋಮುಖ ಬೆಳವಣಿಗೆಗೆ ನಾಂದಿ ಯಾಗಿದೆ. ಆದ್ದರಿಂದಲೇ ನಮ್ಮ ಭಾರತ ಸರಕಾರವು ಪ್ರಾಥಮಿಕ ಶಿಕ್ಷಣವನ್ನು ಉಚಿತ ಮತ್ತು ಕಡ್ಡಾಯಗೊಳಿಸಿದೆ.

**ಪ್ರಸ್ತಾವನೆ**

ಪರಂಪರಾಗತವಾಗಿ ಬೆಳೆದುಬಂದಿರುವ ಮೂಢನಂಬಿಕೆಗಳನ್ನು ಹೋಗಲಾಡಿಸಿ ನಮ್ಮ ಸಮಾಜದ ಮನೋಭಾವನೆಯನ್ನು ಬದಲಾಯಿಸಿ ರಾಷ್ಟ್ರದ ವಿಕಾಸಕ್ಕೆಡೆಮಾಡುವ ಅತ್ಯಮೂಲ್ಯವಾದ ಮಾರ್ಗವೆಂದರೆ ಶಿಕ್ಷಣ. ಅಭಿವೃದ್ಧಿ ಪಥದಲ್ಲಿ ಮುಂದುವರಿಯುತ್ತಿರುವ ರಾಷ್ಟ್ರಗಳಲ್ಲಿ ಅಗ್ರವಾಗಿರುವ ಭಾರತಕ್ಕೆ ಶಿಕ್ಷಣದ ಸಾರ್ವತ್ರೀಕರಣ ಅತ್ಯಗತ್ಯ. ಆದರೆ ಉತ್ತಮ ಗುಣಮಟ್ಟದ ಶಿಕ್ಷಣವನ್ನು ನಾನಾ ಭಾಷೆ ಮತ್ತು ಸಂಸ್ಕೃತಿಗಳನ್ನೊಳಗೊಂಡ ವಿಶಾಲವಾದ ನಮ್ಮ ದೇಶದ ಪ್ರತಿಯೊಂದು ಗ್ರಾಮಾಂತರ ಪ್ರದೇಶಕ್ಕೆ ಒದಗಿಸುವುದು ಅತ್ಯಂತ ಕಷ್ಟಕರವಾದ ಕಾರ್ಯ. ಸ್ವಾತಂತ್ರ್ಯ ಬಂದಾಗಿನಿಂದ ನಮ್ಮ ದೇಶದಲ್ಲಿ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆಗಳ ಸಂಖ್ಯೆ ಗಣನೀಯವಾಗಿ ವೃದ್ಧಿಸಿದ್ದು, ಹೆಚ್ಚುತ್ತಿರುವ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಶಾಲೆಗಳ ವ್ಯವಸ್ಥೆಯಾಗಿಲ್ಲ. ಅದಲ್ಲದೆ, ಗ್ರಾಮಾಂತರ ಪ್ರದೇಶಗಳಲ್ಲಿ ಶಾಲಾ ಕಟ್ಟಡಗಳ ಹಾಗೂ ಶಿಕ್ಷಕರ ಗುಣಮಟ್ಟದ ಕೊರತೆಯಿಂದ ಶಿಕ್ಷಣದ ಪ್ರಗತಿ ಅಂದುಕೊಂಡಂತೆ ಆಗಿಲ್ಲ.

ಈಗ ಉತ್ತಮ ಶಿಕ್ಷಣ ದೊರೆಯುತ್ತಿರುವ ನಗರದ ಶಾಲಾ ಕಾಲೇಜುಗಳಿಗೂ ಹಾಗೂ ಕುಂದು-ಕೊರತೆಗಳಿಂದ ಬಳಲುತ್ತಿರುವ ಗ್ರಾಮಾಂತರ ಪ್ರದೇಶಗಳಿಗೂ ಉಪಗ್ರಹಗಳಿಂದ ಸಂಪರ್ಕ ಕಲ್ಪಿಸಲು ಸಾಧ್ಯವಾಗಿದೆ. ಆರೋಗ್ಯ ಸ್ವಾಸ್ಥ್ಯ ವ್ಯಕ್ತಿತ್ವ ಸುಧಾರಣೆಗಳ ಬಗ್ಗೆ ಮಾಹಿತಿಗಳನ್ನು ತಿಳಿದ ತಜ್ಞರಿಂದ ಪ್ರತಿಯೊಬ್ಬ ನಾಗರಿಕರಿಗೂ ತಿಳಿಸಬಹುದಾಗಿದೆ. ಉತ್ತಮ ಗುಣಮಟ್ಟದ ಶಿಕ್ಷಕರ ಅಭಾವವಿದ್ದರೂ ದೇಶದ ಎಲ್ಲಾ ಭಾಗಗಳಲ್ಲಿರುವ ವಿದ್ಯಾರ್ಥಿವರ್ಗಕ್ಕೆ ಉಪಗ್ರಹ ಆಧಾರಿತ ಮತ್ತು ತಂತ್ರಜ್ಞಾನ ಶಿಕ್ಷಣ ವ್ಯವಸ್ಥೆಯಿಂದ ಒಳ್ಳೆಯ ಗುಣಮಟ್ಟದ ಶಿಕ್ಷಣವನ್ನು ಒದಗಿಸಬಹುದಾಗಿದೆ.

**ತಂತ್ರಜ್ಞಾನ**

ಇಂದು ಮಾನವ ಸದಾ ತನ್ನ ಉನ್ನತಿಯನ್ನು ಬಯಸುವ ಮನೋಭಾವ ಹೊಂದಿದ್ದು, ಅವನ ಬಯಕೆಯು ನವೀನ ಆವಿಷ್ಕಾರ ಹಾಗೂ ಸಂಶೋಧನೆಗಳಿಗೆ ದಾರಿ ಮಾಡಿದೆ. ಈ ಸಂಶೋಧನಾ ಪ್ರವೃತ್ತಿಯು ವಿಜ್ಞಾನ ಹಾಗೂ ತಂತ್ರಜ್ಞಾನದ ಬೆಳವಣಿಗೆಗೆ ಕಾರಣವಾಗಿದೆ. ವಿಜ್ಞಾನದ ಜ್ಞಾನವನ್ನು ಪ್ರಾಯೋಗಿಕವಾಗಿ ಬೆಳಸಿಕೊಂಡು ದೈನಂದಿನ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಒಂದು ಕ್ರಮಬದ್ಧ ವ್ಯವಸ್ಥೆಗೆ ತಂತ್ರಜ್ಞಾನ ಎನ್ನುವರು. ಇಂದು ತಂತ್ರಜ್ಞಾನ ಎಲ್ಲ ಕ್ಷೇತ್ರಗಳನ್ನು ಪ್ರವೇಶಿಸಿ ತನ್ನ ಪ್ರಭಾವ ಮೆರೆದಿದೆ. ಶಿಕ್ಷಣ ಕ್ಷೇತ್ರ ಇದಕ್ಕೆ ಹೊರತಲ್ಲ.

ಶಿಕ್ಷಣದಲ್ಲಿ ತಾಂತ್ರಿಕತೆಯ ಬಳಕೆ ತುಂಬ ಹಿಂದಿನ ಕಾಲದಿಂದಲೂ ಬಳಕೆಯಲ್ಲಿದೆ. ವ್ಯಕ್ತಿಗಳು ಬೋಧನೆ ಮತ್ತು

> ಶಿಕ್ಷಣ ಎಂಬುದು ಶಾಲೆಯ ನಾಲ್ಕು ಗೋಡೆಗಳ ಮಧ್ಯ ಇರದೆ ಅದು ವಿಶ್ವವ್ಯಾಪಿಯಾಗಬೇಕೆಂದರೆ ಎಲ್ಲ ಹಂತಗಳಲ್ಲೂ ತಾಂತ್ರಿಕ ಶಿಕ್ಷಣ ಅವಶ್ಯವಾದುದು. ಪ್ರಜಾಶಾಸನದಲ್ಲಿ ನಿಜವಾದ ಪ್ರಜೆಗಳನ್ನು ಸೃಷ್ಟಿಸುವುದು ಶಿಕ್ಷಣದ ಧ್ಯೇಯವಾಗಿರಬೇಕು. ಮಕ್ಕಳಿಗೆ ಅನುಶಾಸನ ಮತ್ತು ಶಿಸ್ತನ್ನು ಕಲಿಸುವುದರ ಜೊತೆಗೆ ವೈಜ್ಞಾನಿಕತೆಯನ್ನು ಅಳವಡಿಸಬೇಕು. ಭಾರತವು ವಿವಿಧ ಭಾಷೆ ಸಂಸ್ಕೃತಿಗಳನ್ನೊಳಗೊಂಡ ಭವ್ಯ ದೇಶವಾಗಿದೆ. ಈ ದೇಶದ ಪ್ರತಿಯೊಬ್ಬ ನಾಗರಿಕನಿಗೆ ಶಿಕ್ಷಣ ದೊರಕಿಸುವುದು ಒಂದು ಮಹತ್ತರ ಕೆಲಸ. ಈ ಸಂದರ್ಭದಲ್ಲಿ ಮೂಲಭೂತ ಸೌಕರ್ಯ ಹಾಗೂ ಶಿಕ್ಷಕರ ಕೊರತೆಯಿಂದ ಈ ಸಮಸ್ಯೆ ಮತ್ತಷ್ಟು ಗಂಭೀರವಾಗಿರುವ ಕಾರಣ ಶಿಕ್ಷಣದ ಸಾರ್ವತ್ರೀಕರಣಕ್ಕೆ ತಂತ್ರಜ್ಞಾನ ಅತ್ಯವಶ್ಯಕ.

# ಶಿಕ್ಷಣದ ಸಾರ್ವತ್ರೀಕರಣಕ್ಕೆ ತಂತ್ರಜ್ಞಾನದ ಕೊಡುಗೆ

ಡಾ।। ಎಸ್. ಎಸ್. ಶ್ರೀಗಿರಿ



ಕಲಿಕೆಗೆ ಬಳಸಿದ ಪಠ್ಯಪುಸ್ತಕ, ಮತ್ತಿತರ ಮುದ್ರಣ ಸಾಮಗ್ರಿಗಳಿಂದ ಇಂದು ಇದು ಪ್ರಾರಂಭವಾಯಿತು. ನಂತರ ಕಪ್ಪು ಹಲಗೆ, ಚಿತ್ರಪಟ, ನಕ್ಷೆ ಮಾದರಿಗಳನ್ನು ಬಳಸಲಾಯಿತು. ವಿಜ್ಞಾನದ ಬೆಳವಣಿಗೆಯಾದಂತೆ ಶಿಕ್ಷಣದಲ್ಲಿ ಬೋಧನೆಗಾಗಿ ರೇಡಿಯೋ, ಧ್ವನಿ ಮುದ್ರಣ, ದೂರದರ್ಶನ, ವಿಡಿಯೋಗಳನ್ನು ಬಳಸಲಾಯಿತು. ಇಂದು ಗಣಕಯಂತ್ರ, ಅಂತರಜಾಲ, ಸಿ.ಡಿ., ಫ್ಲಾಪಿ, ಮತ್ತಿತರ ಅತ್ಯಾಧುನಿಕ ತಾಂತ್ರಿಕ ವ್ಯವಸ್ಥೆಯ ಮೂಲಕ ಬೋಧನೆ ಕಲಿಕೆ ಪ್ರಕ್ರಿಯೆ ಸಾಗುವಂತಾಗಿದೆ.

**ಶೈಕ್ಷಣಿಕ ತಂತ್ರಜ್ಞಾನ**

ಶೈಕ್ಷಣಿಕ ತಂತ್ರಜ್ಞಾನ ಎಂಬುದು ಶಿಕ್ಷಣ ಹಾಗೂ ತಂತ್ರಜ್ಞಾನ ಈ ಎರಡೂ ಪದಗಳಿಂದ ಕೂಡಿದೆ. ಶಿಕ್ಷಣ ವರ್ತನೆಯ ಪರಿವರ್ತನಾ ವಿಜ್ಞಾನವಾಗಿದ್ದು, ವ್ಯಕ್ತಿ ಹಾಗೂ ಸಮಾಜದ ಅಭಿವೃದ್ಧಿಯ ಸಾಧನವಾಗಿದೆ. ತಂತ್ರಜ್ಞಾನ ಎನ್ನುವುದು ಒಂದು ಕಾರ್ಯವನ್ನು ಸುಲಭವಾಗಿ, ಶೀಘ್ರವಾಗಿ, ನಯವಾಗಿ ಮತ್ತು ಕಡಿಮೆ ವೆಚ್ಚದಲ್ಲಿ ಹೆಚ್ಚು ಉಪಯುಕ್ತ ಕಾರ್ಯವನ್ನಾಗಿ ಮಾಡುವ ಕೌಶಲ್ಯ ಹಾಗೂ ನಿಪುಣತೆಗೆ ಸಂಬಂಧಿಸಿದ್ದಾಗಿದೆ. ಹಾಗೆಯೇ ಒಂದು ಕಠಿಣ ಕಾರ್ಯವನ್ನು ಸುಲಭವಾಗಿ ಮಾಡಲು ಸಹಾಯಕವಾಗುವ ಸಾಧನ ಅಥವಾ ಯಂತ್ರವನ್ನು ಬಳಸುವ ಜ್ಞಾನವೇ ತಂತ್ರಜ್ಞಾನವಾಗಿದೆ. ಈ ತಂತ್ರಜ್ಞಾನದ ವಿಧಾನ ಹಾಗೂ ಸಾಧನಗಳನ್ನು ಬೋಧನೆ ಕಲಿಕೆ ಪ್ರಕ್ರಿಯೆಯ ಫಲವಾಗುವಂತೆ ಶಿಕ್ಷಣದಲ್ಲಿ ಬಳಸಿಕೊಂಡಿರುವ ಪ್ರಕ್ರಿಯೆ ಶೈಕ್ಷಣಿಕ ತಂತ್ರಜ್ಞಾನವಾಗಿದೆ.

**ಶೈಕ್ಷಣಿಕ ತಂತ್ರಜ್ಞಾನದ ಸ್ವರೂಪ ಹಾಗೂ ಮಹತ್ವ**

ಶೈಕ್ಷಣಿಕ ತಂತ್ರಜ್ಞಾನ ಒಂದು ವೈಜ್ಞಾನಿಕ ಚಿಂತನೆಯ ಫಲವಾಗಿದ್ದು, ಶಿಕ್ಷಣ ಕ್ಷೇತ್ರದಲ್ಲಿ ವಿಜ್ಞಾನ ಹಾಗೂ ತಂತ್ರಜ್ಞಾನ ಕ್ರಮಬದ್ಧ ಅನ್ವಯಕ್ಕೆ ಸಂಬಂಧಿಸಿದ್ದಾಗಿದೆ. ಶಿಕ್ಷಣ ಕ್ಷೇತ್ರದಲ್ಲಿ ಬೋಧನೆ-ಕಲಿಕೆ ಪ್ರಕ್ರಿಯೆಯನ್ನು ವೈಜ್ಞಾನಿಕ ಹಾಗೂ ತಾಂತ್ರಿಕ ವಿಧಾನಗಳ ಮೂಲಕ ಪರಿಣಾಮಕಾರಿಯಾಗಿ ಮಾಡುವ ಕಾರ್ಯವಿಧಾನವಾಗಿದೆ. ಬೋಧನೆ-ಕಲಿಕೆಗೆ ಹೊಸ ಚೈತನ್ಯ ನೀಡಿ ಗರಿಷ್ಠ ಪ್ರಮಾಣದ ಪ್ರಗತಿ ಅತ್ಯಲ್ಪ ಕಾಲದಲ್ಲಿ ಆಗುವಂತೆ ಮಾಡುವ ತಾಂತ್ರಿಕ ವಿಧಾನದಿಂದ ಕೂಡಿದ ವಿಜ್ಞಾನವಾಗಿದೆ. ಕಲಿಸುವ ಹಾಗೂ ಕಲಿಯುವ ವಿಧಾನಕ್ಕೆ ಪ್ರಾವೀಣ್ಯತೆ ಒದಗಿಸಿ ಪ್ರಾಯೋಗಿಕವಾಗಿ ಕಾರ್ಯನಿರ್ವಹಿಸುವಲ್ಲಿ ಸಹಾಯಕವಾಗುವ ತಂತ್ರವಿಧಾನವಾಗಿದೆ. ಶಿಕ್ಷಣದಲ್ಲಿ ಪಾಠೋಪಕರಣ ಕಠಿಣ ಸಾಧನ (ಹಾರ್ಡ್‌ವೇರ್) ಮತ್ತು ಮೃದು ಸಾಧನ (ಸಾಫ್ಟ್‌ವೇರ್)ಗಳಂತಹ ಬಹುಮಾಧ್ಯಮಗಳ ಬಳಕೆ ಮಾಡಿಕೊಂಡು ಕಾರ್ಯ ನಿರ್ವಹಿಸಲಾಗುವುದು. ಅಲ್ಲದೆ ಕೇವಲ ವೈಜ್ಞಾನಿಕ ತತ್ವಗಳು, ವಿಧಾನಗಳು ಹಾಗೂ ಉಪಕರಣಗಳನ್ನು ಅನ್ವಯಿಸಿ ಬಳಸುವುದಕ್ಕೆ ಸೀಮಿತವಾಗಿದೆ. ಅವುಗಳನ್ನು ರೂಪಿಸುವ ಸಂಸ್ಕರಿಸುವ ಮತ್ತು ಬಳಕೆಗೆ ತರುವ ಜವಾಬ್ದಾರಿಯಿಂದ ಕೂಡಿದೆ.

**ಮಹತ್ವ**

* ಬೋಧನೆಯ ಉದ್ದೇಶಗಳನ್ನು ಯಶಸ್ವಿಯಾಗಿ ಈಡೇರಿಸುವುದರೊಂದಿಗೆ ಬೋಧನೆಯು ವರ್ಗಾವಣೆಗೆ ಸಹಾಯಕವಾಗಿದೆ.
* ಬೋಧನಾ ವಿಷಯ ಸಾಮಗ್ರಿಗಳನ್ನು ಅಂತರಜಾಲದ ಮುಖಾಂತರ ಬಿತ್ತರಿಸುವ ಮೂಲಕ ಬಹುಜನತೆಗೆ ಲಭ್ಯವಾಗುವುದು.
* ಬೋಧನಾ ಶ್ರಮ ಕಡಿಮೆ ಮಾಡುತ್ತದೆ.
* ಬಹುಮಾಧ್ಯಮಗಳ ಮೂಲಕ ವ್ಯಾಪಕ ಕಲಿಕಾ ಸನ್ನಿವೇಶಗಳನ್ನು ಒದಗಿಸುತ್ತದೆ.
* ಯಂತ್ರಾಂಶ, ತಂತ್ರಾಂಶ ಹಾಗೂ ಬೋಧನಾ ಯಂತ್ರ ಮತ್ತು ಗಣಕಯಂತ್ರದ ಬಳಕೆ ಮಾಡಿ ಬೋಧನೆ-ಕಲಿಕೆ ಆಗುವಂತೆ ಮಾರ್ಗದರ್ಶನ ಮಾಡಿದೆ.
* ದೂರಶಿಕ್ಷಣ ನೀಡುವಲ್ಲಿ ಉಪಯುಕ್ತವಾಗಿದೆ.

**ತಂತ್ರಜ್ಞಾನದಿಂದ ಉಪಗ್ರಹ ಆಧಾರಿತ ಶಿಕ್ಷಣ**

೧೯೭೫-೭೬ರಲ್ಲಿ ಅಮೆರಿಕಾ ದೇಶದ ಎಡಿ.ಎಸ್-೬ ಎಂಬ ಉಪಗ್ರಹವನ್ನು ಬಳಸಿ ನಮ್ಮ ದೇಶದಲ್ಲಿ ದೂರದರ್ಶನದ ಮೂಲಕ ಪ್ರಥಮ ಉಪಗ್ರಹ ಆಧಾರಿತ ಶಿಕ್ಷಣ ಎಂಬ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ಕರ್ನಾಟಕ, ಬಿಹಾರ, ಆಂಧ್ರಪ್ರದೇಶ, ಉತ್ತರಪ್ರದೇಶ, ಒರಿಸ್ಸಾ ಹಾಗೂ ರಾಜಸ್ಥಾನಗಳಲ್ಲಿರುವ ಸುಮಾರು ೨೪೦೦ಕ್ಕೂ ಹೆಚ್ಚು ಗ್ರಾಮಗಳಲ್ಲಿ ಅಳವಡಿಸಲಾಗಿದ್ದ ನೇರ ಗ್ರಾಹಕ ವ್ಯವಸ್ಥೆ

ಉಪಕರಣಗಳಿಗೆ ಉಪಗ್ರಹದಿಂದ ಬರುವ ನೇರವಾದ ಕಿರಣಜಾಲ ಆಧಾರಿತ ಟಿ.ವಿ. ವ್ಯವಸ್ಥೆಯನ್ನು ಮಾಡಲಾಗಿತ್ತು. ಈ ಕಾರ್ಯಕ್ರಮದಲ್ಲಿ ಜನಸಾಮಾನ್ಯರಿಗೆ ಬೇಕಾಗುವ ಶಿಕ್ಷಣ, ಆರೋಗ್ಯ, ಶುಚಿ, ಕೃಷಿ, ಭೂ-ವ್ಯವಸಾಯ ಇತ್ಯಾದಿ ವಿಷಯಗಳ ಬಗ್ಗೆ ದೂರದರ್ಶನದಲ್ಲಿ ಪ್ರಸಾರ ಮಾಡಲಾಯಿತು. ಎರಡನೆಯದಾಗಿ, 'ಝಬುವಾ ಪ್ರಾಜೆಕ್ಟ್' ಯೋಜನೆಯ ಅಡಿಯಲ್ಲಿ ನಮ್ಮದೇ ಆದ ಇನ್ಸಾಟ್ ಉಪಗ್ರಹಗಳ ಸಹಾಯದಿಂದ ಮಧ್ಯಪ್ರದೇಶದ ೧೧೦೦ ಗ್ರಾಮಗಳಲ್ಲಿ ಶಿಕ್ಷಣದ ಬಗ್ಗೆ ಟಿ.ವಿ. ಕಾರ್ಯಕ್ರಮಗಳನ್ನು ನೇರವಾಗಿ ಪ್ರಸಾರಮಾಡಲಾಗಿತ್ತು. ಈ ಯೋಜನೆಯ ಪರಿಣಾಮವಾಗಿ ಗ್ರಾಮಾಂತರ ಪ್ರದೇಶಗಳ ನಾಗರಿಕರಿಗೆ ಆಡಳಿತ ಕ್ರಮ, ಶಾಸನದ ಕಾರ್ಯಕ್ರಮಗಳ ಬಗ್ಗೆ ಬಹಳಷ್ಟು ಅರಿವು ಮೂಡಿತು.




**ಶಿಕ್ಷಣದ ಸಾರ್ವತ್ರೀಕರಣಕ್ಕೆ ತಂತ್ರಜ್ಞಾನ**

ಶಿಕ್ಷಣಕ್ಕಾಗಿಯೇ ಮುಡುಪಾಗಿರುವ ಜ್ಞಾನದರ್ಶನ ವೆಂಬ ಇಪ್ಪತ್ನಾಲ್ಕು ಗಂಟೆಗಳ ಮಾಧ್ಯಮವಾಹಿನಿ ಈಗಾಗಲೇ ಪ್ರಸಾರವಾಗುತ್ತಲಿದೆ. ವ್ಯಾಸಂಗ ಕ್ರಮ ಆಧಾರಿತ ಕಾರ್ಯಕ್ರಮಗಳನ್ನು ರಾಜ್ಯಮಟ್ಟದಲ್ಲಿ ಶಿಕ್ಷಕರು ಹಾಗೂ ಸಂಬಂಧಪಟ್ಟ ಅಧಿಕಾರಿಗಳಿಂದ ಶಾಲಾಬಾಲಕ - ಬಾಲಕಿಯರಿಗಾಗಿ ಬಿತ್ತರಿಸಲಾಗುತ್ತದೆ. ಬೇರೆ ಬೇರೆ ಭಾಷೆಗಳಲ್ಲಿ ತಯಾರಾಗುತ್ತಿರುವ ಈ ಕಾರ್ಯಕ್ರಮ ಗಳನ್ನು ಆಯಾ ಪ್ರದೇಶಗಳಿಗೆ ಉಪಗ್ರಹ ಪ್ರೇಷಕಗಳ ಮುಖಾಂತರ ಪ್ರಸಾರ ಮಾಡಲಾಗುತ್ತಿದೆ. ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ತಯಾರಿಸುವ ಕಾರ್ಯಕ್ರಮ ಗಳನ್ನು ಶಿಕ್ಷಣ ಮಾಧ್ಯಮ ಸಂಶೋಧನಾ ಕೇಂದ್ರಗಳು ಹಾಗೂ ವಾಕ್-ದೃಶ್ಯ ಸಂಶೋಧನಾ ಕೇಂದ್ರಗಳು ತಯಾರಿಸುತ್ತವೆ. ಈ ರೀತಿಯ ಕಾರ್ಯಕ್ರಮಗಳು ಗ್ರಾಮಾಂತರ ಪ್ರದೇಶಗಳಿಗೆ ಉತ್ತಮ ಗುಣಮಟ್ಟದ ಶಿಕ್ಷಣವನ್ನು ಒದಗಿಸುತ್ತಿವೆ. ಅಭ್ಯಾಸ ಕ್ರಮಾಧಾರಿತ ಕಾರ್ಯಕ್ರಮಗಳನ್ನು ಇಂದಿರಾ ಗಾಂಧಿ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗಾಗಿ ತಂತ್ರಜ್ಞಾನ ಮತ್ತು ಎಜುಸ್ಯಾಟ್ ಉಪಗ್ರಹ ಮಾಧ್ಯಮ ವಾಹಿನಿಯ ಮುಖಾಂತರ ಪ್ರಸಾರ ಮಾಡಲಾಗುತ್ತಿದೆ.

ತಂತ್ರಜ್ಞಾನದಿಂದ ಇನ್ಸಾಟ್ ಉಪಗ್ರಹವನ್ನು ಉಪಯೋಗಿಸಿ ಆಯೋಜಿಸಿದ ಶೈಕ್ಷಣಿಕ ಕಾರ್ಯಕ್ರಮಗಳು ಯಶಸ್ವಿಯಾಗಿವೆ. ಇದರಿಂದ ನಮ್ಮ ದೇಶದ ಶೈಕ್ಷಣಿಕ ಸೇವೆಗಾಗಿಯೇ ಪ್ರತ್ಯೇಕವಾಗಿ ಎಜುಸ್ಯಾಟ್ ಎಂಬ ಉಪಗ್ರಹವನ್ನು ಭೂಸ್ಥಿರ ಕಕ್ಷೆಗೆ ಹಾರಿಬಿಟ್ಟಿರುವುದನ್ನು ಗಮನಿಸಬಹುದು.

ಅತಿಯಾಗಿ ಬೆಳೆಯುತ್ತಿರುವ ದೂರಪ್ರಸಾರ ಆಧಾರಿತ ಪರಸ್ಪರರ ಸಂವಾದದ ಅನುಕೂಲತೆ ಗಳನ್ನೊಳಗೊಂಡ ಶಿಕ್ಷಣ ವ್ಯವಸ್ಥೆಗಾಗಿ ಎಜ್ಯುಸ್ಯಾಟನ್ನು ವಿಶೇಷವಾಗಿ ವಿನ್ಯಾಸಗೊಳಿಸ ಲಾಗಿದೆ. ಭಾರತದ ಎಲ್ಲ ಭಾಗಗಳನ್ನು ತಂತ್ರಜ್ಞಾನದ ಮೂಲಕ ಈ ಉಪಗ್ರಹದ ಪ್ರಸಾರ ವ್ಯಾಪ್ತಿಗೆ ತರಲು ಕ್ಷೇತ್ರೀಯ ಕಿರಣಜಾಲಗಳ ವ್ಯವಸ್ಥೆ ಮಾಡಲಾಗಿದೆ. ಈ ವ್ಯವಸ್ಥೆಯಿಂದ ದೇಶದ ಎಲ್ಲಾ ಪ್ರದೇಶಗಳ ಏಳಿಗೆಗಾಗಿ ಅಂತರಿಕ್ಷ ತಂತ್ರಜ್ಞಾನವನ್ನು ಬಳಸಲಾಗಿದೆ. ದೇಶದ ಗ್ರಾಮಾಂತರ ಪ್ರದೇಶಗಳಲ್ಲಿ ಉನ್ನತ ಶಾಲಾ-ಕಾಲೇಜುಗಳಿಗೆ ಹೋಗಲು ಅವಕಾಶವಿಲ್ಲ ದವರಿಗೆ ಶಿಕ್ಷಣ ಒದಗಿಸುವುದೂ ಈ ಯೋಜನೆಯ ಮುಖ್ಯ ಉದ್ದೇಶವಾಗಿದೆ. ರಾಜ್ಯ ಶಿಕ್ಷಣ ಮಂಡಳಿಗಳು ರಾಷ್ಟ್ರೀಯ ಶೈಕ್ಷಣಿಕ ಸಂಶೋಧನಾ ಹಾಗೂ ತರಬೇತಿ ಪರಿಷತ್ತು, ಮಾಧ್ಯಮಿಕ ಶಿಕ್ಷಣದ ಕೇಂದ್ರೀಯ ಮಂಡಲಿ, ವಿದ್ಯಾಲಯಗಳು ಇತ್ಯಾದಿ ಸಂಸ್ಥೆಗಳಿಂದ ಸ್ಟುಡಿಯೋ ಗಳಲ್ಲಿ ತರಗತಿಗಳನ್ನು ನಿರ್ವಹಿಸಲಾಗುತ್ತದೆ. ಇಂತಹ ತರಗತಿಗಳು ಪರಸ್ಪರ ಮಾತುಕತೆ ಗಳನ್ನೊಳಗೊಂಡ ಅಥವಾ ಪ್ರಶ್ನೋತ್ತರಗಳಿಗೆ ಆಸ್ಪದವಿರುವ ಕಾರ್ಯಾಗಾರಗಳಾಗಿರುತ್ತವೆ.

ವಿಡಿಯೋ ಕಾನ್ಫರನ್ಸ್ ಮುಖಾಂತರ ಪ್ರಶ್ನೆಗಳನ್ನು ಕೇಳಿ ಹೇಳುವ ಯೋಜನೆಗಳು ಜಾರಿಯಲ್ಲಿವೆ, ಹೀಗೆ ಉತ್ತಮ ಗುಣಮಟ್ಟದ ಹಾಗೂ ಸಾಮರ್ಥ್ಯವುಳ್ಳ ಅಧ್ಯಾಪಕರಿಂದ ನಡೆಸಿಕೊಡಲಾಗುವ ತರಗತಿಗಳನ್ನು ಇಡೀ ದೇಶಕ್ಕೆ ಎಜುಸ್ಯಾಟ್ ಮುಖಾಂತರ ಪ್ರಸಾರ ಮಾಡಲಾಗುತ್ತದೆ. ಇಂತಹ ತರಗತಿಗಳನ್ನು ದೂರದರ್ಶನದ ಪ್ರಾಂತೀಯ ಕಾರ್ಯಕ್ರಮ ಗಳ ರೀತಿಯಲ್ಲಿ ರೂಪಿಸಲಾಗುತ್ತದೆ. ಗ್ರಾಮೀಣ ಪ್ರದೇಶದಲ್ಲಿ ನಡೆಸಲಾಗುವ ತರಗತಿ ಗಳಲ್ಲಿ ಹಾಜರಿರುವ ವಿದ್ಯಾರ್ಥಿಗಳು ಪಾಠ ಮಾಡುತ್ತಿರುವ ಶಿಕ್ಷಕರಿಗೆ ಅಥವಾ ದೂರವಾಣಿಯ ತಂತ್ರಜ್ಞಾನದ ಮುಖಾಂತರ ಪ್ರಶ್ನೆಗಳನ್ನು ಕೇಳಲು ಅವಕಾಶ ಇರುತ್ತದೆ. ಇಂತಹ ವ್ಯವಸ್ಥೆಯನ್ನು ಪಡೆಯಲು ಶಾಲಾಕಾಲೇಜುಗಳು, ಪರಸ್ಪರವಾಗಿ ಕಾರ್ಯ ನಿರ್ವಹಿಸುವ ಗ್ರಾಹಕ/ಪ್ರೇಕ್ಷಕ ಟರ್ಮಿನಲ್‌ಗಳನ್ನು ಹೊಂದಿರಬೇಕಾಗುತ್ತದೆ. ಪ್ರಸ್ತುತದಲ್ಲಿ ಕೆಲವು ಆಯ್ದ ಶಾಲಾ ಕಾಲೇಜುಗಳಿಗೆ ಇಸ್ರೊ ಈ ಉಪಕರಣಗಳನ್ನು ಉಚಿತವಾಗಿ ನೀಡುತ್ತಲಿದೆ.

ಈ ಪ್ರಯೋಗಾತ್ಮಕ ಹಂತದ ನಂತರ ಶಾಲಾ ಕಾಲೇಜುಗಳು ಇಂತಹ ಉಪಕರಣಗಳನ್ನು ಸ್ವತಃ ಹೊಂದಿರ ಬೇಕಾಗುತ್ತದೆ. ಇದಲ್ಲದೆ ಇಂತಹ ತರಗತಿಗಳನ್ನು ಸಿ.ಡಿ. ಯಲ್ಲಿ ದಾಖಲಿಸಿ ಅಂತರಜಾಲದ ಮೂಲಕ ಎಲ್ಲರಿಗೂ ಲಭ್ಯವಿರುವಂತೆ ಮಾಡಲಾಗುತ್ತದೆ.

ಉನ್ನತ ತಂತ್ರಜ್ಞಾನವನ್ನು ಬಳಸಿ ಈ ಮೂಲಕ ಯೋಜನೆ ಯನ್ನು ರೂಪಿಸಿರುವ ಇಸ್ರೋ ಭಾರತ ಸರಕಾರದ ಮಂತ್ರಾಲಯದ ಮುಖಾಂತರ ಜನರನ್ನು ಸ್ಪಂದಿಸುತ್ತಿದೆ.

* ಇಂದಿರಾ ಗಾಂಧಿ ರಾಷ್ಟ್ರೀಯ ಮುಕ್ತ ವಿಶ್ವವಿದ್ಯಾಲಯ
* ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತು
* ಭಾರತೀಯ ಕೃಷಿ ಸಂಶೋಧನಾ ಪರಿಷತ್ತು
* ವಿಶ್ವವಿದ್ಯಾಲಯಗಳ ಧನ ಸಹಾಯ ಆಯೋಗ
* ರಾಷ್ಟ್ರೀಯ ಶೈಕ್ಷಣಿಕ ಸಂಶೋಧನಾ ಹಾಗೂ ತರಬೇತಿ ಪರಿಷತ್ತು

ಇವೇ ಮುಂತಾದ ಸಂಸ್ಥೆಗಳಿಂದ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಲು ತಂತ್ರಾಂಶವನ್ನು ಬಳಸಿಕೊಳ್ಳಲಾಗುತ್ತಿದೆ. ಅಲ್ಲದೆ ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯವು ಮುಕ್ತ ಮತ್ತು ದೂರಶಿಕ್ಷಣ ವ್ಯವಸ್ಥೆಗಳನ್ನು ನಮ್ಮ ದೇಶದಲ್ಲಿ ಉತ್ತೇಜಿಸುತ್ತಿದೆ. ಈಗಾಗಲೇ ತಿಳಿದಿರುವಂತೆ ಉಪಗ್ರಹ ಆಧಾರಿತ ದೂರದರ್ಶನ ಮಾಧ್ಯಮವಾಹಿನಿ 'ಜ್ಞಾನದರ್ಶನ' ಮತ್ತು ಎಫ್.ಎಂ. ರೇಡಿಯೋ ಜಾಲ 'ಜ್ಞಾನ-ವಾಣಿ', ಅಂತರಜಾಲದ ಮುಖಾಂತರ ಪರಸ್ಪರ ಸಂವಾದ, ಪ್ರಾಥಮಿಕ ಶಿಕ್ಷಣ, ಅಕ್ಷರಜ್ಞಾನ, ವೃತ್ತಿಪರ ಶಿಕ್ಷಣ ಹಾಗೂ ಶಿಕ್ಷಕರ ತರಬೇತಿಗಳಿಗೆ ಉಪಯೋಗಿಸುವ ಕಾರ್ಯಕ್ರಮಗಳನ್ನು ಮಾನವ ಸಂಪನ್ಮೂಲ ಅಭಿವೃದ್ಧಿ ಮಂತ್ರಾಲಯವು ಹಮ್ಮಿಕೊಂಡಿದೆ. ಈ ಎಲ್ಲ ಮಾರ್ಗಗಳನ್ನು ಕೈಗೊಂಡು ಪ್ರಾಥಮಿಕ ಹಂತದಿಂದ ಉನ್ನತ ಶಿಕ್ಷಣದವರೆಗೂ ಭಾರತದ ಎಲ್ಲ ಪ್ರಜೆಗಳಿಗೂ ಅನುಕೂಲವಾಗುವ ರೀತಿಯಲ್ಲಿ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಲಾಗುತ್ತದೆ.

**ಪರಿಸಮಾಪ್ತಿ**

ಶಿಕ್ಷಣ ಎಂಬುದು ಶಾಲೆಯ ನಾಲ್ಕು ಗೋಡೆಗಳ ಮಧ್ಯೆ ಇರದೆ ಅದು ವಿಶ್ವವ್ಯಾಪಿ ಯಾಗಬೇಕೆಂದರೆ ಎಲ್ಲ ಹಂತಗಳಲ್ಲೂ ತಾಂತ್ರಿಕ ಶಿಕ್ಷಣ ಅವಶ್ಯವಾದುದು. ಪ್ರಜಾಶಾಸನದಲ್ಲಿ ನಿಜವಾದ ಪ್ರಜೆಗಳನ್ನು ಸೃಷ್ಟಿಸುವುದು ಶಿಕ್ಷಣದ ಧ್ಯೇಯವಾಗಿರಬೇಕು. ಮಕ್ಕಳಿಗೆ ಅನುಶಾಸನ ಮತ್ತು ಶಿಸ್ತನ್ನು ಕಲಿಸುವುದರ ಜೊತೆಗೆ ವೈಜ್ಞಾನಿಕತೆಯನ್ನು ಅಳವಡಿಸಬೇಕು. ಭಾರತವು ವಿವಿಧ ಭಾಷೆ ಸಂಸ್ಕೃತಿಗಳನ್ನೊಳಗೊಂಡ ಭವ್ಯ ದೇಶವಾಗಿದೆ. ಈ ದೇಶದ ಪ್ರತಿಯೊಬ್ಬ ನಾಗರಿಕನಿಗೆ ಶಿಕ್ಷಣ ದೊರಕಿಸುವುದು ಒಂದು ಮಹತ್ತರ ಕೆಲಸ. ಈ ಸಂದರ್ಭದಲ್ಲಿ ಮೂಲಭೂತ ಸೌಕರ್ಯ ಹಾಗೂ ಶಿಕ್ಷಕರ ಕೊರತೆಯಿಂದ ಈ ಸಮಸ್ಯೆ ಮತ್ತಷ್ಟು ಗಂಭೀರವಾಗಿರುವ ಕಾರಣ ಶಿಕ್ಷಣದ ಸಾರ್ವತ್ರೀಕರಣಕ್ಕೆ ತಂತ್ರಜ್ಞಾನ ಅತ್ಯವಶ್ಯಕ. ಶಿಕ್ಷಣದಲ್ಲಿ ತಂತ್ರಜ್ಞಾನದ ಅಳವಡಿಕೆಯಿಂದ ಉತ್ತಮ ಶಿಕ್ಷಕರು ನಡೆಸಿಕೊಡುವ ತರಬೇತಿಗಳನ್ನು ಎಲ್ಲ ಗ್ರಾಮಾಂತರ ಪ್ರದೇಶಗಳು ಸೇರಿದಂತೆ ಇಡೀ ದೇಶಕ್ಕೆ ತಂತ್ರಜ್ಞಾನ ಬಳಸಿ ಉಪಗ್ರಹಗಳ ಸಹಾಯದಿಂದ ಪ್ರಸಾರ ಮಾಡಲಾಗುತ್ತದೆ. ಇದರಿಂದಾಗಿ ನಾವಿಂದು ಇಡೀ ದೇಶದಲ್ಲಿ ಶಿಕ್ಷಣ ಸಾರ್ವತ್ರೀಕರಣದ ಕ್ರಾಂತಿಯನ್ನು ಸಾಧಿಸುವಲ್ಲಿ ದಾಪುಗಾಲು ಇಟ್ಟಿದ್ದೇವೆ. ರಾಜ್ಯದಲ್ಲೂ ಕೂಡ ಕೇಳಿ ಕಲಿ, ಚಿಣ್ಣರ ಚುಕ್ಕಿ, ಚುಕ್ಕಿ ಚಿಣ್ಣ, ಮೊದಲಾದ ರೇಡಿಯೋ ಕಾರ್ಯಕ್ರಮಗಳು ಇಂದು ಪ್ರಾಥಮಿಕ ಶಿಕ್ಷಣಕ್ಕೆ ಮೆರಗು ನೀಡಿವೆ. ಅದೇ ರೀತಿ ಉನ್ನತ ಶಿಕ್ಷಣಕ್ಕೆ ಸಂಬಂಧಿಸಿದ ವಿಜ್ಞಾನ ಕಾರ್ಯಕ್ರಮಗಳು ಇಂದು ದೂರದರ್ಶನದ ಉತ್ಕೃಷ್ಟ ಕೊಡುಗೆಯಾಗಿವೆ. ಅಲ್ಲದೆ ಉಪಗ್ರಹ ಆಧಾರಿತ ದೂರಶಿಕ್ಷಣವು ಶಿಕ್ಷಣದ ಸಾರ್ವತ್ರೀಕರಣಕ್ಕೆ ಉನ್ನತ ತಂತ್ರಜ್ಞಾನ ನೀಡಿರುವ ಕೊಡುಗೆ ಎಂದು ಹೇಳಬಹುದು.

ಡಾ|| ಎಸ್. ಎಸ್. ಶ್ರೀಗಿರಿ
ಅತಿಥಿ ಉಪನ್ಯಾಸಕರು, ಗಾಂಧೀ ಅಧ್ಯಯನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩.

## ಗಿರಿಜಾ ಕಲ್ಯಾಣ
(ಒಂದು ಆಧುನಿಕ ಪುರಾಣ)

ಬಿ. ಸುರೇಶ

**ಪುಟ :** ೧೦೦

**ಬೆಲೆ :** ರೂ. ೫೦

**ಅಭಿನವ,** ೧೭/೧೮-೨, ೧ನೇ ಮೈನ್, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು-೪೦

ಪೌರಾಣಿಕ ಹೆಸರುಳ್ಳ, ಜಾನಪದೀಯ ಚೌಕಟ್ಟುಳ್ಳ ಈ ನಾಟಕವು ಗ್ರಾಮೀಣ ರೈತರ ಬದುಕಿಗೆ ಹಿಡಿದ ಕನ್ನಡಿಯಂತಿದೆ. ಕಣ್ತುಂಬ ಕನಸುಗಳನ್ನು ಹೊತ್ತ ಗ್ರಾಮೀಣ ರೈತ ಹೆಣ್ಣುಮಗಳು ಗಿರಿಜಾ ಇಲ್ಲಿನ ಮುಖ್ಯಪಾತ್ರ. ಹಳೆಯ-ಹೊಸ ಮೌಲ್ಯಗಳಲ್ಲಿ ಯಾವುದನ್ನು ಎಚ್ಚರದಿಂದ ಆರಿಸಿಕೊಳ್ಳಬೇಕೆಂಬ ಗೊಂದಲ ಎಳೆಯರಲ್ಲಿರುವುದನ್ನು ನಾಟಕ ಬಿಂಬಿಸುತ್ತದೆ. ಸಮಸ್ಯೆಗಳ ಮಹಾಪೂರದಲ್ಲೇ ಕೊಚ್ಚಿಹೋಗುವ ರೈತಾಪಿ ಜನರ ಬಾಳಿನ ಗೋಳು ಅವರನ್ನು ಆತ್ಮಹತ್ಯೆಯವರೆಗೂ ಎಳೆದೊಯ್ಯುತ್ತದೆ. ಅದಕ್ಕೆ ಸಾಮಾಜಿಕ ವ್ಯವಸ್ಥೆಯೂ ಪೂರಕವಾಗಿರುವುದು ನಮ್ಮ ದುರಂತ. ದೇಶಕ್ಕೇ ಅನ್ನ ನೀಡುವ ರೈತನಿಗೇಕೆ ಈ ನಿರ್ಗತಿಕ ಬಾಳು ಎಂಬ ಚಿಕಿತ್ಸಕ ನೋಟ ಇಲ್ಲಿದೆ. ಸ್ಪಂದನ ತಂಡದಿಂದ ಬಿ. ಜಯಶ್ರೀ ಹಾಗೂ ಹಿಂದಿಯಲ್ಲಿ ಎಂ. ಎಸ್. ಸತ್ಯು ನಿರ್ದೇಶನದಲ್ಲಿ ಅಭಿನಯಿಸಲ್ಪಟ್ಟಿದೆ.

## ಬೆಳ್ಳೇಕೆರೆ ಹಳ್ಳಿಥೇಟರ್
(ಒಂದು ಗ್ರಾಮೀಣ ರಂಗಭೂಮಿಯ ಆತ್ಮಕಥನ)

ಪ್ರಸಾದ್ ರಕ್ಷಿದಿ

**ಪುಟ :** ೨೨೮ + ೪

**ಬೆಲೆ :** ರೂ. ೧೦೦

**ಅಭಿನವ,** ೧೭/೧೮-೨, ೧ನೇ ಮೈನ್, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು-೪೦

ಒಂದು ಊರಿನಲ್ಲಿ ರಂಗಮಂದಿರವೊಂದಿದ್ದು ನಾಟಕಗಳು ನಡೆಯುತ್ತಿದ್ದರೆ ಆ ಊರಿಗೆ ಬಹು ಸಂಖ್ಯೆಯಲ್ಲಿ ಕಲಾವಿದರು ಭೇಟಿ ಕೊಡುತ್ತಿರುತ್ತಾರೆ. ಆತ್ಮೀಯ ಸಂಬಂಧಗಳು ಹಂಚಿಕೊಳ್ಳುತ್ತವೆ. ಊರಿನ ಬಗ್ಗೆ ತಿಳಿದುಕೊಳ್ಳಲು ಅವಕಾಶಗಳು ಲಭಿಸುತ್ತವೆ. ಆ ಊರಿನಲ್ಲೇ ಕೆಲವು ದಿನ ಇರಬೇಕಾದವರಿಗೆ ಮತ್ತು ಅವರನ್ನು ಅತಿಥಿಗಳಂತೆ ನಡೆಸಿಕೊಳ್ಳುವವರಿಗೆ ಊರಿನ ಬಗ್ಗೆ ತಿಳಿದುಕೊಳ್ಳಲು - ತಿಳಿಸಿಕೊಡಲು ಕಾತುರ. ಹೀಗೆ ಬೆಳ್ಳೇಕೆರೆ ಎಂಬ ಪುಟ್ಟ ಗ್ರಾಮದಲ್ಲಿ ರಂಗ ಚಟುವಟಿಕೆಗಳು ನಡೆಯುತ್ತಿದ್ದ ಸಂದರ್ಭದಲ್ಲಿ ಅಂದಂದು, ಅಲ್ಲಲ್ಲಿ ನಡೆದ ವಿಚಾರಗಳನ್ನೆಲ್ಲ ಕಥಾರೂಪವಾಗಿ ದಾಖಲಿಸಿದ್ದಾರೆ. ನಾಟಕಗಳನ್ನು ಹೇಗೆ ಆಡುತ್ತಿದ್ದರು, ಅವರ ಸಾಮೂಹಿಕ ಜವಾಬ್ದಾರಿಗಳು, ಊರಿನ ಜನರ ಸಹಕಾರ, ಇದ್ದಕ್ಕಿದ್ದಂತೆ ಬಿಗಡಾಯಿಸುವ ಪರಿಸ್ಥಿತಿಯನ್ನು ನಿಭಾಯಿಸುವಿಕೆ ಇಂತಹ ಸವಾಲಿನ ಕೆಲಸಗಳನ್ನು ಚಾಕಚಕ್ಯತೆಯಿಂದ ಮಾಡುತ್ತಿದ್ದ ರೀತಿ – ವಿವರ ಈ ಬರಹದಲ್ಲಿದೆ. ಹಾಗಾಗಿ ಇದೊಂದು ಸಾಮೂಹಿಕ ಆತ್ಮಕಥನದಂತಿದೆ.

## ಜಂಗುಂ ಜಕ್ಕುಂ (ಕಾದಂಬರಿ)

ವಿಷ್ಣು ನಾಯ್ಕ

**ಪುಟ :** ೨೧೬ + ೪ + ೪ **ಬೆಲೆ :** ರೂ. ೧೨೦

**ವಿಷ್ಣು ನಾಯ್ಕ,** ಪರಿಮಳ, ಅಂಬಾರಕೊಡ್ಲ, ಅಂಕೋಲಾ (ಉ. ಕ. ಜಿಲ್ಲೆ)

ಕಾದಂಬರಿಯ ಶೀರ್ಷಿಕೆ ಸುಗ್ಗಿಯ ಹಾಡು-ಕುಣಿತದ ಮುಂದಕ್ಕೆ ನೆಗೆ ಎಂಬರ್ಥದ ಸಾಲು. ಸುಮಾರು ಒಂದು ಶತಮಾನಕ್ಕೂ ಹಿಂದಿನ ಗ್ರಾಮ ಜೀವನವನ್ನು ಕಣ್ಣೆದುರಿಗೆ ಕಟ್ಟಿಕೊಡುವ ಈ ಕಾದಂಬರಿಯ ಆಶಯ – ಒಟ್ಟಾಗಿ ಬಾಳಿದಾಗ ಜೀವನದ ಮೌಲ್ಯ ಹೆಚ್ಚಿ ಪರಸ್ಪರ ಸೌಹಾರ್ದ, ಸಂಬಂಧಗಳು ಹೆಚ್ಚಿ ಉಳಿದು ಬೆಳೆಯಲಿ ಎಂಬುದು. ಸಂಘಜೀವಿಯಾಗಿದ್ದ ಮನುಷ್ಯ ಇಂದು ಯಾವು ಯಾವುದೋ ಕಾರಣಗಳಿಗೆ ಸಿಡಿದು ಹಂಚಿಹೋಗಿ 'ದ್ವೀಪ'ಗಳಂಥ ವ್ಯವಸ್ಥೆಯಲ್ಲಿ ಬಾಳ್ವೆ ಮಾಡುತ್ತಿದ್ದಾನೆ. ಕಾದಂಬರಿಯ ಪೂರ್ವಾರ್ಧ ಹಾಗೂ ಉತ್ತರಾರ್ಧ ಈ ಹಳೆಯ ಹಾಗೂ ಹೊಸ ಸಂಸ್ಕೃತಿಪಲ್ಲಟಗಳನ್ನು ನಮಗೆ ಪರಿಚಯಿಸುತ್ತದೆ. ಸ್ವಯಂಕೃತವಾಗಿ ನಾವು ನಾವೇ ತಂದುಕೊಂಡ ಪಲ್ಲಟಗಳಿವು. ಆದರೂ, ನಾವು ಇದರೊಂದಿಗೆ ಅನಿವಾರ್ಯವಾಗಿ ಸಾಗುತ್ತಿದ್ದೇವೆ. ಹಿಂದಿನ ಕಾಲವೇ ಚೆಂದ ಎಂಬ ಧ್ವನಿಯನ್ನು ಎಲ್ಲೆಲ್ಲೂ ಕೇಳುತ್ತೇವೆ. ಎಲ್ಲ ಕಾಲದ ಎಲ್ಲ ಮಗ್ಗುಲುಗಳಿಂದ ಜೀವನವನ್ನು ಕಂಡರೆ ನಮಗೆ ಒಳ್ಳೆಯ ಅಂಶಗಳು ಇಬ್ಬದಿಯಲ್ಲೂ ಗೋಚರಿಸಬಹುದು. ತಮ್ಮ ಊರಿನಲ್ಲಿ ಜನಾನುರಾಗಿಗಳಾಗಿ ಸಮಾಜದ ಒಳಿತಿಗೆ ಶ್ರಮಿಸುತ್ತಿರುವ ಲೇಖಕರು ಅನೇಕ ಪ್ರಶಸ್ತಿಗಳನ್ನು ಗಳಿಸಿದ್ದಾರೆ.



## ಶಕ್ತಿಧಾಮದ ಸತ್ಯಕಥೆಗಳು (ನೈಜ ಘಟನೆಗಳು)

ಜಿ. ಎಸ್. ಜಯದೇವ

**ಪುಟ :** ೧೧೨ **ಬೆಲೆ :** ರೂ. ೬೫

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೫, ಬೆಂಗಳೂರು - ೫೬೦ ೦೦೧

'ಕ್ರೂರ ನಕ್ರಾಕುಲಗಳಿಂದಿರ್ದ ಪೆರ್ಮಡು ಗಂಭೀರ ಜಲಯುತ'ವಾಗಿ ಕಂಗೊಳಿಸುವಂತೆ ಈ ಸಮಾಜ ಮೇಲ್ನೋಟಕ್ಕೆ ಎಲ್ಲ ಸರಿಯಿದ್ದಂತಿದೆ. ಆಳ ತಿಳಿದು, ಇಳಿದು ನೋಡಿದರೆ ದುಷ್ಟರು ಅಲ್ಲಲ್ಲಿ ಹೊಂಚುಹಾಕಿರುತ್ತಾರೆ. ಸಮಾಜದ ಕ್ರೂರ ನಡವಳಿಕೆಗೆ ಬಲಿಯಾಗಿ ಘೋರ ಅಸಹನೀಯ ದುರಂತಕ್ಕೀಡಾಗಿ 'ಶಕ್ತಿಧಾಮ'ವೆಂಬ ಆಶ್ರಮ ಸೇರಿ ಸಾಂತ್ವನ ಪಡೆದ ಆರು ಮಂದಿ ಹೆಣ್ಣುಮಕ್ಕಳ ಸತ್ಯಕಥೆಗಳು ಇಲ್ಲಿವೆ. ಐದು ವರ್ಷದವಳಿದ್ದಾಗಲೇ ಅಪ್ಪನಿಂದ ತ್ಯಜಿಸಲ್ಪಟ್ಟ ಕವಿತಾ, ತನ್ನದಲ್ಲದ ತಪ್ಪಿಗೆ ಜೈಲುಸೇರಿದ ಆಶಾ – ಇಂಥ ಹೆಣ್ಣುಗಳ ಕಥೆ ಹೇಳುತ್ತಲೇ, ಲೇಖಕರು ಸಮಾಜದ ದುರ್ನಡತೆಗಳ ಬಗ್ಗೆ ಆಕ್ರೋಶಭರಿತ ವಿಶ್ಲೇಷಣೆಯನ್ನೂ ಮಾಡುತ್ತಾರೆ. ಕೆಳವರ್ಗಗಳಲ್ಲಿ ಎದ್ದುಕಾಣುವ ಇಂಥ ಘಟನೆಗಳು ಮೇಲ್ವರ್ಗಗಳಲ್ಲಿ ಮುಚ್ಚಿಹೋಗುವುದೇ ಜಾಸ್ತಿ. 'ಶಕ್ತಿಧಾಮ' ಹಾಗೂ 'ದೀನಬಂಧು' ಸಂಸ್ಥೆಗಳನ್ನು ಅಸಹಾಯಕರಿಗಾಗಿ ನಡೆಸುತ್ತಿರುವ ಶ್ರೀ ಜಿ. ಎಸ್. ಜಯದೇವ ಅವರದ್ದು ಸದ್ದಿಲ್ಲದ ಸಮಾಜಸೇವೆ. ಅವರೇ ಹೇಳುವಂತೆ ಕೆಲವೊಂದು ದುಃಸ್ಥಿತಿಗಳಿಗೆ ನಮ್ಮೆಲ್ಲರ ಹೊಣೆಯೂ ಇದ್ದು ಕಥೆ ಕೇಳಿದ ನಾವು ನೆಮ್ಮದಿಯಿಂದಿರಬಲ್ಲೆವಾದರೆ ನಮ್ಮಂತಹ ಪಾಪಿಗಳು ಯಾರೂ ಇಲ್ಲ.

## ಹಿಂದಣ ಅನಂತ



ಲಿಂಗದೇವರು ಹಳೆಮನೆ

**ಪುಟ :** ೧೪೨ + ೬ **ಬೆಲೆ :** ರೂ. ೯೦

**ನಿರಂತರ ಪ್ರಕಾಶನ,** ಕಾಂತರಾಜೇ ಅರಸ್ ರಸ್ತೆ, ಸರಸ್ವತಿಪುರಂ, ಮೈಸೂರು - ೯

ವಚನಸಾಹಿತ್ಯವನ್ನು ಕುರಿತಾದ ಇಲ್ಲಿನ ಬರಹಗಳು ಅದರ ಕ್ರಾಂತಿಕಾರಿ ಮನೋಭಾವನೆಯನ್ನು ಬಿಂಬಿಸುತ್ತವೆ. ಬಸವಣ್ಣನಂತೆ ಇನ್ನೂ ಅನೇಕ ವಚನಕಾರರು ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ವಿಪುಲ ಸಾಹಿತ್ಯವನ್ನು ರಚಿಸಿದ್ದಾರೆ. ಆ ಮೂಲಕ ಅಂದು ಬೇರುಬಿಟ್ಟಿದ್ದ ಮೇಲು-ಕೀಳು ಭಾವನೆಯನ್ನು, ಮೌಢ್ಯಾಚರಣೆಯನ್ನು ಪ್ರಶ್ನಿಸಿ ಖಂಡಿಸಿದ್ದಾರೆ. ಕಠಿಣವಾದ ವೇದ-ಮಂತ್ರ-ಶ್ರುತಿಗಳಿಂದ ಕಾಯಕ ಜೀವಿಗಳ ಹಸಿವು ನೀಗದೆಂದು ಅರಿತ ಜನರು ಆಡುಮಾತಿನ ವಚನ ಸಾಹಿತ್ಯಕ್ಕೆ ಸಂಪೂರ್ಣ ಮನಸೋತರು. ವಚನ ಸಾಹಿತ್ಯ ಪರಿಣಾಮಕಾರಿಯಾಗಿ ಎಲ್ಲರಲ್ಲೂ ಒಂದು ಬಗೆಯ ಎಚ್ಚರ ಮೂಡಿತ್ತು. ಇಲ್ಲಿನ ಬರಹಗಳಲ್ಲಿ ಅಲ್ಲಲ್ಲಿ ವಚನಗಳನ್ನು ಉಲ್ಲೇಖಿಸುತ್ತ, ಅಂದಿನ ಕ್ರಾಂತಿಕಾರಿ ಸಾಹಿತ್ಯವನ್ನು ಶೋಧಿಸುತ್ತ, ವಚನಕಾರರೇಕೆ ಇಷ್ಟೊಂದು ಆಪ್ತರಾಗಿ ಜನರಿಗೆ ಕಂಡಿದ್ದಾರೆಂಬ ಹುಡುಕಾಟವಿದೆ. ಒಟ್ಟಿನಲ್ಲಿ ಇದು ವಚನಸಾಹಿತ್ಯದೊಂದಿಗೆ ವಚನಕಾರರ ವಿಶ್ಲೇಷಣೆಯೂ ಆಗಿದ್ದು ಓದುಗರಿಗೆ ಎರಡೆರಡು ರೀತಿಯಲ್ಲಿ ಪ್ರಯೋಜನ. ಪತ್ರಿಕೆಯ ಅಂಕಣಕ್ಕಾಗಿ, ಬೇರೆ ಬೇರೆ ಸಂದರ್ಭಗಳಿಗಾಗಿ ಶ್ರೀ ಲಿಂಗದೇವರು ಹಳೆಮನೆ ಇದನ್ನು ಬರೆದಿದ್ದು ಇಲ್ಲಿ ಸಂಗ್ರಹಗೊಂಡಿದೆ.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

# ಕ್ಯೂಬಾ ದೇಶದಲ್ಲಿ ಪೋಲಿಯೋ ನಿರ್ಮೂಲನೆ : ನಮ್ಮ ದೇಶದಲ್ಲೇಕೆ ಸಾಧ್ಯವಾಗುತ್ತಿಲ್ಲ ?

೨೦೧೦ರ ಜನವರಿ ೧೦ ಮತ್ತು ಫೆಬ್ರವರಿ ೭ರಲ್ಲಿ ಮತ್ತೆ ಪಲ್ಸ್ ಪೋಲಿಯೋ ಕಾರ್ಯಕ್ರಮ ಹಮ್ಮಿಕೊಂಡಿದ್ದಾರೆ. ಒಳ್ಳೆಯದು. ೧೯೯೫ರಲ್ಲಿ ಪ್ರಾರಂಭವಾದ ಈ ಕಾರ್ಯಕ್ರಮದಡಿ ೨೦೦೦ದ ಹೊತ್ತಿಗೆ ಪೋಲಿಯೋ ರೋಗ ನಿರ್ಮೂಲನೆ ಮಾಡಬೇಕೆಂಬ ಗುರಿಯನ್ನು ಹಮ್ಮಿಕೊಳ್ಳಲಾಗಿತ್ತು. ಆದರೆ ಇದು ಸಾಧ್ಯವಾಗಲಿಲ್ಲ. ಮತ್ತೆ ೨೦೦೫ರ ಹೊತ್ತಿಗೆ ಗುರಿ ಸಾಧಿಸಲು ನಿರ್ಧರಿಸಿ, ಪಲ್ಸ್ ಪೋಲಿಯೋ ಕಾರ್ಯಕ್ರಮ ಮುಂದುವರಿಸಲಾಯಿತು. ಇದೂ ಸಹ ಸಾಧ್ಯವಾಗದೆ ಮತ್ತೆ ೨೦೧೦ರವರೆಗೂ ಈ ಕಾರ್ಯಕ್ರಮ ಮುಂದುವರಿಸಲು ತೀರ್ಮಾನಿಸಲಾಗಿದೆ. ಈ ರೋಗ ನಿರ್ಮೂಲನೆ ಮಾಡಲು ಇನ್ನೆಷ್ಟು ವರ್ಷಗಳು ಬೇಕು ? ಕಾದು ನೋಡಬೇಕು. ಪ್ರತಿವರ್ಷ ಕೈಗೊಳ್ಳುವ ಈ ಪಲ್ಸ್ ಪೋಲಿಯೋ ಕಾರ್ಯಕ್ರಮಕ್ಕೆ ಹರಿದಿರುವ ಹಣದ ಹೊಳೆಯ ಒಂದು ಅಂದಾಜಿನಂತೆ ಒಂದು ಸಾವಿರ ಕೋಟಿ ರೂಪಾಯಿಗಳು ಖರ್ಚಾಗುತ್ತಿವೆ. ಹೀಗೆಯೇ ಇದು ಮುಂದುವರಿದಲ್ಲಿ, ವ್ಯರ್ಥಪ್ರಯತ್ನ ಮುಂದುವರಿದಂತಾಗುತ್ತದೆ, ಅಷ್ಟೆ.



ಇತರೆ ದೇಶಗಳಲ್ಲಿ ಪೋಲಿಯೋ ರೋಗ ನಿರ್ಮೂಲನೆ ಸಾಧ್ಯವಾಗುತ್ತಿರುವಾಗ ನಮ್ಮಲ್ಲೇಕೆ ಸಾಧ್ಯವಾಗುತ್ತಿಲ್ಲ? ಈ ಕುರಿತು ಸ್ವವಿಮರ್ಶೆ ಮಾಡಿಕೊಳ್ಳುವ ಕಾಲ ಸನ್ನಿಹಿತವಾಗಿದೆ. ಪಶ್ಚಿಮ ರಾಷ್ಟ್ರವಾದ ಕ್ಯೂಬಾ ಸಮಾಜವಾದಿ ರಾಷ್ಟ್ರ. ಈ ರಾಷ್ಟ್ರದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸಾಧಿಸಿದ ಪ್ರಗತಿ ಜಗತ್ತಿನೆಲ್ಲಾ ರಾಷ್ಟ್ರಗಳು ಬೆಚ್ಚಿಬೀಳುವಂಥದ್ದು. ೧೯೬೨ರ ಫೆಬ್ರುವರಿ ಮತ್ತು ಏಪ್ರಿಲ್ ತಿಂಗಳಲ್ಲಿ ಎರಡು ಸುತ್ತು ಪಲ್ಸ್ ಪೋಲಿಯೋ ಕಾರ್ಯಕ್ರಮವನ್ನು ಹಮ್ಮಿಕೊಂಡು, ಕೇವಲ ನಾಲ್ಕು ತಿಂಗಳಲ್ಲಿ ಪೋಲಿಯೋ ರೋಗವನ್ನು ನಿರ್ಮೂಲನೆ ಮಾಡಿದ ಜಗತ್ತಿನ ಪ್ರಪ್ರಥಮ ರಾಷ್ಟ್ರ ಕ್ಯೂಬಾ.

ಇತರೆ ದೇಶಗಳಲ್ಲಿ ಪೋಲಿಯೋ ರೋಗ ನಿರ್ಮೂಲನೆ ಸಾಧ್ಯವಾಗುತ್ತಿರುವಾಗ, ನಮ್ಮಲ್ಲೇಕೆ ಸಾಧ್ಯವಾಗುತ್ತಿಲ್ಲ? ಈ ಕುರಿತು ಸ್ವವಿಮರ್ಶೆ ಮಾಡಿಕೊಳ್ಳುವ ಕಾಲ ಸನ್ನಿಹಿತವಾಗಿದೆ. ಪಶ್ಚಿಮ ರಾಷ್ಟ್ರವಾದ ಕ್ಯೂಬಾ ಸಮಾಜವಾದಿ ರಾಷ್ಟ್ರ. ಈ ರಾಷ್ಟ್ರದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ಸಾಧಿಸಿದ ಪ್ರಗತಿ ಜಗತ್ತಿನೆಲ್ಲಾ ರಾಷ್ಟ್ರಗಳು ಬೆಚ್ಚಿ ಬೀಳುವಂಥದ್ದು. ೧೯೬೨ರ ಫೆಬ್ರುವರಿ ಮತ್ತು ಏಪ್ರಿಲ್ ತಿಂಗಳಲ್ಲಿ ಎರಡು ಸುತ್ತು ಪಲ್ಸ್ ಪೋಲಿಯೋ ಕಾರ್ಯಕ್ರಮವನ್ನು ಹಮ್ಮಿಕೊಂಡು, ಕೇವಲ ನಾಲ್ಕು ತಿಂಗಳಲ್ಲಿ ಪೋಲಿಯೋ ರೋಗವನ್ನು ನಿರ್ಮೂಲನೆ ಮಾಡಿದ ಜಗತ್ತಿನ ಪ್ರಪ್ರಥಮ ರಾಷ್ಟ್ರ ಕ್ಯೂಬಾ. ಅಂದಿನಿಂದ ಇಂದಿನವರೆಗೆ ಒಂದೇ ಒಂದು ಪೋಲಿಯೋ ಪ್ರಕರಣವೂ ವರದಿಯಾಗಿಲ್ಲ. ಪೋಲಿಯೋ ರೋಗವನ್ನು ೧೯೬೨ರಲ್ಲಿ, ಮಕ್ಕಳಲ್ಲಿ ಧನುರ್ವಾಯು ರೋಗವನ್ನು ೧೯೭೨ರಲ್ಲಿ, ಡಿಫ್ತೀರಿಯಾವನ್ನು ೧೯೮೦ರಲ್ಲಿ, ದಡಾರವನ್ನು ೧೯೯೩ರಲ್ಲಿ, ನಾಯಿಕೆಮ್ಮನ್ನು ೧೯೯೪ರಲ್ಲಿ, ರೊಬೆಲ್ಲಾ ಮತ್ತು ಮಂಪ್ಸ್ ರೋಗಗಳನ್ನು ೧೯೯೫ರಲ್ಲಿ ನಿರ್ಮೂಲನೆ ಮಾಡಲಾಗಿದೆ. ಈ ಎಲ್ಲಾ ರೋಗಗಳು ಭಾರತದಲ್ಲಿ ಅಸ್ತಿತ್ವದಲ್ಲಿದ್ದು, ನಿರ್ಮೂಲನೆಗೆ ಹಲವು ದಶಕಗಳೇ ಬೇಕಾಗಬಹುದು. ಸಾರ್ವಜನಿಕ ಆರೋಗ್ಯ ಸಮಸ್ಯೆಗಳಾದ ಸೋಂಕು ರೋಗಗಳು, ತಾಯಿ ಮತ್ತು ಮಕ್ಕಳ ಆರೋಗ್ಯ ಸಮಸ್ಯೆ, ಜನಸಂಖ್ಯಾ ನಿಯಂತ್ರಣ, ...ಹೀಗೆ ಹಲವಾರು ಕ್ಷೇತ್ರಗಳಲ್ಲಿ ಕ್ಯೂಬಾ ದೇಶವು ಅದ್ಭುತ ಸಾಧನೆ ಸಾಧಿಸಿ, ಜಗತ್ತಿನ ಎಲ್ಲ ರಾಷ್ಟ್ರಗಳೇ ಅಲ್ಲದೆ ಭಾರತಕ್ಕೂ ಮಾದರಿಯಾಗಿದೆ.



೧೯೫೯ರಲ್ಲಿ ಕ್ಯೂಬಾದ ಸಾರ್ವಜನಿಕ ಆರೋಗ್ಯ ಸ್ಥಿತಿ, ಭಾರತದ ಸಾರ್ವಜನಿಕ ಆರೋಗ್ಯ ಸ್ಥಿತಿ ಎರಡೂ ಒಂದೇ ಬಗೆಯದಾಗಿದ್ದವು. ಅಂದು ಕ್ಯೂಬಾದಲ್ಲಿ ಒಂದೇ ಒಂದು ವಿಶ್ವವಿದ್ಯಾಲಯವಿತ್ತು ಮತ್ತು ಒಂದೇ ಒಂದು ವೈದ್ಯಕೀಯ ಕಾಲೇಜು ಇತ್ತು. ಆರೋಗ್ಯ ಮತ್ತು ವೈದ್ಯಕೀಯ ಕ್ಷೇತ್ರಗಳು ಸಂಪೂರ್ಣವಾಗಿ ಖಾಸಗಿಯವರ ಹಿಡಿತದಲ್ಲಿದ್ದವು. ೧೯೬೦ರಲ್ಲಿ ಆ ದೇಶದಲ್ಲಿದ್ದ ವೈದ್ಯರು ಅಮೆರಿಕಾ ದೇಶಕ್ಕೆ ವಲಸೆ ಹೋದರು. ಹೀಗಾಗಿ ಪ್ರಾಥಮಿಕ ಆರೋಗ್ಯ ಸೇವೆಗಳನ್ನು ಬಡವರಿಗೆ ಮತ್ತು ಗ್ರಾಮೀಣ ಜನರಿಗೆ ಒದಗಿಸಲು ಸಾಧ್ಯವಾಗಲಿಲ್ಲ. ನಂತರದ ದಿನಗಳಲ್ಲಿ, ಗ್ರಾಮೀಣ ಆರೋಗ್ಯ ಮತ್ತು ನೈರ್ಮಲ್ಯ, ಲಸಿಕಾಕರಣ, ವೈದ್ಯಕೀಯ ಸೇವೆಗಳನ್ನು ಗ್ರಾಮೀಣ ಪ್ರದೇಶಗಳಿಗೆ ವಿಸ್ತರಿಸಲಾಯಿತು. ಕ್ಯೂಬಾ ದೇಶವು ತನ್ನ ದೇಶದ ಒಟ್ಟು ಉತ್ಪನ್ನದಲ್ಲಿ ಶೇಕಡ

ವಾಮನ ರಾವ್





೧೬ರಷ್ಟು ಆದಾಯವನ್ನು ಆರೋಗ್ಯ ಕ್ಷೇತ್ರಕ್ಕೆ ಮೀಸಲಿಟ್ಟಿತು. ಭಾರತದಲ್ಲಿ ಕಾಣುವ ಕೊಳಚೆಪ್ರದೇಶಗಳು, ಅನಾರೋಗ್ಯ ಸ್ಥಳಗಳು ಕ್ಯೂಬಾ ದೇಶದಲ್ಲಿ ಕಾಣಿಸಲು ಸಾಧ್ಯವಿಲ್ಲದಂತಹ ವ್ಯವಸ್ಥೆ ರೂಪಗೊಂಡಿತು. ಖಾಸಗಿ ವೈದ್ಯಕೀಯ ಸೇವೆಗಳನ್ನು ಸಂಪೂರ್ಣವಾಗಿ ನಿರ್ಬಂಧಿಸಲಾಗಿದೆ. ಖಾಸಗಿ ಸೇವೆಗಳ ಬೇಡಿಕೆ ಇಲ್ಲದಂತೆ ಮಾಡಲು ದೇಶದಲ್ಲಿ ಉನ್ನತ ತಜ್ಞ ವೈದ್ಯಕೀಯ ಸೇವೆಗಳು ಎಲ್ಲರಿಗೂ ಉಚಿತವಾಗಿ ದೊರಕುವಂತೆ ಅಲ್ಲಿಯ ಸರಕಾರ ವ್ಯವಸ್ಥೆಮಾಡಿದೆ. ಆರೋಗ್ಯ ಕ್ಷೇತ್ರದಲ್ಲಿ ಭ್ರಷ್ಟಾಚಾರವು ಇಲ್ಲವೇ ಇಲ್ಲ. ಅಭಿವೃದ್ಧಿಶೀಲ ದೇಶಗಳಲ್ಲಿರುವ ಸಾರ್ವಜನಿಕ ಸೋಂಕು ರೋಗಗಳ ಸಮಸ್ಯೆಗಳು ಕ್ಯೂಬಾ ದೇಶದಲ್ಲಿಲ್ಲ. ಒಟ್ಟಿನಲ್ಲಿ ಆ ದೇಶದ ಆರೋಗ್ಯ ಸೇವೆಯು ಇಡೀ ಜಗತ್ತಿನಲ್ಲೇ ಅತ್ಯುತ್ತಮವಾದುದು.

೧೯೬೨ರಲ್ಲಿ ಕ್ಯೂಬಾ ದೇಶವು ದೇಶಾದ್ಯಂತ 'ಲಸಿಕಾ ದಿನ'ವನ್ನು ಆಚರಿಸುವ ವ್ಯವಸ್ಥೆ ಮಾಡಿದುದರಿಂದ, ದೇಶದ ಎಲ್ಲ ಗ್ರಾಮೀಣ ಪ್ರದೇಶಗಳಿಗೆ ಲಸಿಕೆ ಸೇವೆಯನ್ನು ಒದಗಿಸಿದಂತಾಗಿದೆ. ಇದರಿಂದ, ಪೋಲಿಯೋ ನಿರ್ಮೂಲನೆಗೆ ಪುಷ್ಟಿ ನೀಡಿದಂತಾಯಿತು. ಅಲ್ಲಿ ಮಲೇರಿಯಾ ರೋಗವನ್ನು ನಿರ್ಮೂಲನ ಮಾಡಲಾಗಿದೆ. ಭಾರತದಲ್ಲಿ ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ ಕುಂಟುತ್ತಾ ಸಾಗಿದುದರಿಂದ ಹಲವು ಪ್ರದೇಶಗಳಿಗೆ, ದೂರದ ಗ್ರಾಮೀಣ ಪ್ರದೇಶಗಳಿಗೆ, ವಲಸೆ ಹೋದವರಿಗೆ, ನಗರದ ಕೊಳಚೆ ಪ್ರದೇಶ ನಿವಾಸಿಗಳಿಗೆ, ಲಸಿಕೆ ಕಾರ್ಯಕ್ರಮ ಸಂಪೂರ್ಣವಾಗಿ ತಲುಪಿಸುವಲ್ಲಿ ವಿಫಲರಾಗಿದ್ದೇವೆ. ಕಾರ್ಯಕರ್ತರಲ್ಲಿ ಕಾರ್ಯತತ್ಪರತೆ ಕಡಿಮೆ, ಭ್ರಷ್ಟಾಚಾರ, ಉದಾಸೀನ ಮನೋಭಾವ, ಬೇಜವಾಬ್ದಾರಿತನ ಮುಂತಾದವು ಆಡಳಿತಾಂಗ ದಲ್ಲಿರುವುದರಿಂದ, ಲಸಿಕೆ ಕಾರ್ಯಕ್ರಮಕ್ಕೆ ಹಿನ್ನಡೆ ಉಂಟಾಗಿದೆ. 'ಪೋಲಿಯೋ ರೋಗ' ಎಂಬ ಕೇವಲ ಒಂದೇ ಒಂದು ರೋಗ ನಿರ್ಮೂಲನೆಗೆ ೧೯೯೬ರಿಂದ ಪ್ರತಿ ವರ್ಷ ಒಂದು ಸಾವಿರ ಕೋಟಿ ರೂಪಾಯಿಗಳು ವ್ಯಯವಾಗುತ್ತಿವೆ. ಹೀಗಾಗಿ ಈ ಕಾರ್ಯಕ್ರಮದ ಬಗ್ಗೆ ಮರುಚಿಂತನೆ ಮಾಡಬೇಕಾಗಿದೆ. ಸಾರ್ವತ್ರಿಕ ಲಸಿಕೆ ಕಾರ್ಯಕ್ರಮಕ್ಕೆ ನವಚೈತನ್ಯ ನೀಡಿ, ಲಸಿಕೆಯ ಗುಣಮಟ್ಟದ ಕಡೆಗೆ ಹೆಚ್ಚಿನ ಗಮನ ನೀಡುವುದರ ಜೊತೆಗೆ, ಅದನ್ನು ಸಾರ್ವತ್ರಿಕಗೊಳಿಸಬೇಕಾಗಿದೆ. ಪ್ರಾಥಮಿಕ ಆರೋಗ್ಯ ರಕ್ಷಣಾ ಕಾರ್ಯಕ್ರಮದಡಿ ಲಸಿಕೆ ಹಾಕುವ ಕಾರ್ಯಕ್ರಮವನ್ನು ತಾಂತ್ರಿಕವಾಗಿ, ಹಣಕಾಸಿನ ಮತ್ತು ಆಡಳಿತಾತ್ಮಕವಾಗಿ ಜೀವ ತುಂಬಿ ಬಲಪಡಿಸಬೇಕಾದ ಅಗತ್ಯ ತುರ್ತಾಗಿ ಆಗಬೇಕು. ವಿದೇಶಿಯರ ಅನುಕರಣೆ ಮಾಡಿ ನಿರ್ಮೂಲನಾ ಕಾರ್ಯಕ್ಕೆ ಕೈಹಾಕದೆ, ಸ್ಥಳೀಯ ಸಮಸ್ಯೆಗಳು ಮತ್ತು ಮೂಲಭೂತ ಸೌಕರ್ಯಗಳನ್ನು ಗಮನದಲ್ಲಿಟ್ಟುಕೊಂಡು, ಯೋಜನೆಗಳನ್ನು ರೂಪಿಸಿ, ಜಾರಿಗೊಳಿಸಿದಲ್ಲಿ ಮಾತ್ರ, ಕ್ಯೂಬಾದಂತೆ ಇಲ್ಲಿಯೂ ಕೂಡ ಪೋಲಿಯೋ ಜೊತೆಗೆ ಇತರೆ ಮಾರಕ ಮಕ್ಕಳ ರೋಗಗಳನ್ನೂ ನಿರ್ಮೂಲನೆ ಮಾಡಲು ಸಾಧ್ಯ.

ಭಾರತದಲ್ಲಿ ಏನೆಲ್ಲಾ ಸಾಧನೆ ಮಾಡಿದ್ದೇವೆ. ಉತ್ತಮ ಆರ್ಥಿಕ ಬೆಳವಣಿಗೆ, ಅಣುಸ್ಥಾವರ ಸ್ಥಾಪನೆ, ಚಂದ್ರಯಾನ, ಲಕ್ಷ ಸಂಖ್ಯೆಯಲ್ಲಿ ವೈದ್ಯರು ಹೊರಬರುತ್ತಿರುವುದು, ...ಮುಂತಾದ ಅದ್ಭುತ ಸಾಧನೆಗಳು ನಮ್ಮ ಪಾಲಿಗಿವೆ. ಆದರೆ ಭಾರತದ ಸಾರ್ವಜನಿಕ ಆರೋಗ್ಯಸೇವೆಯಲ್ಲಿ ಮಾತ್ರ ತುಂಬಾ ದುರ್ಬಲರಾಗಿದ್ದೇವೆ. ನಮ್ಮ ಸ್ವಂತ ಸಾಮರ್ಥ್ಯದ ಮೇಲೆ ಸಾರ್ವಜನಿಕ ಆರೋಗ್ಯಸೇವೆಯನ್ನು ಬಲಪಡಿಸಿ, ಪೋಲಿಯೋ ರೋಗದ ಜೊತೆಗೆ ಇತರೆ ಸಾಂಕ್ರಾಮಿಕ ರೋಗಗಳನ್ನು ನಿರ್ಮೂಲನೆ ಮಾಡಲು ವ್ಯವಸ್ಥೆ ಮಾಡಿದಾಗ ಮಾತ್ರ ನಿರೀಕ್ಷಿತ ಗುರಿ ಸಾಧಿಸಲು ಸಾಧ್ಯ.

**ವಾಮನ ರಾವ್**
'ಶ್ರೀ ದತ್ತ ನಿಲಯ', ೧೧ನೇ ಅಡ್ಡರಸ್ತೆ, ಜಯನಗರ ಪೂರ್ವ
ತುಮಕೂರು - ೫೭೨ ೧೦೨

ನವೋದಯ ಮತ್ತು ನವ್ಯಕಾವ್ಯ ಸಂದರ್ಭದಲ್ಲಿ ಬೆಳೆದುಬಂದ ಕವಿ ಡಾ॥ ಬುದ್ದಣ್ಣ ಹಿಂಗಮಿರೆಯವರು ಕನ್ನಡ ಕಾವ್ಯ ಕ್ಷೇತ್ರದ ಗಟ್ಟಿಕವಿ. ಗಡಿಭಾಗದ ಭಾಷೆ-ಸಂಸ್ಕೃತಿಯನ್ನು ತಮ್ಮ ಕಾವ್ಯದಲ್ಲಿ ಎರಕ ಹೊಯ್ದ ಇವರು ಕಾವ್ಯ, ನಾಟಕ, ವಿಮರ್ಶಾ ಕ್ಷೇತ್ರಗಳಲ್ಲಿ ಹೆಸರು ಗಳಿಸಿದವರು. ಡಾ॥ ಹಿಂಗಮಿರೆಯವರು ಕೇವಲ ಕರ್ನಾಟಕದ ಕವಿಯಲ್ಲ; ಜಾಗತಿಕ ಕವಿ! ಇವರ ಕಾವ್ಯ ಸಲಿಲ ವೋಲ್ಗಾದಿಂದ ಕೃಷ್ಣಾವರೆಗೆ ಹರಿದುಬಂದಿದೆ. ರಶಿಯನ್ ಭಾಷೆಯಲ್ಲೂ ಪ್ರಭುತ್ವವನ್ನು ಹೊಂದಿರುವ ಹಿಂಗಮಿರೆಯವರು ಪುಷ್ಕಿನ್‌ನ ಕವಿತೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. 'ಉಕ್ರೇನಿಯಾ ಟು ಕರ್ನಾಟಕ' ಎಂಬ ರಶಿಯನ್ ಗ್ರಂಥದಲ್ಲಿ ಡಾ॥ ಹಿಂಗಮಿರೆಯವರನ್ನು ಕುರಿತು ಬರೆಯಲಾಗಿದೆಯಲ್ಲದೆ ಮಾಸ್ಕೊ ಮತ್ತು ಉಕ್ರೇನಿಯಾ ರೇಡಿಯೋ ಕೇಂದ್ರಗಳು ಹಿಂಗಮಿರೆಯವರ ಸಾಹಿತ್ಯ ಕೃತಿ ಕುರಿತು ಪ್ರಸಾರಮಾಡಿವೆ. ರಶಿಯಾದ ಶ್ರೇಷ್ಠ ಸೋವಿಯತ್ ಲ್ಯಾಂಡ್ ನೆಹರೂ ಪ್ರಶಸ್ತಿಯೂ ಕೂಡ ಇವರಿಗೆ ಲಭಿಸಿರುವುದು ಕನ್ನಡಿಗರ ಹೆಮ್ಮೆಗೆ ಮತ್ತೊಂದು ಕಿರೀಟ!

'ಬುದ್ಧ ಕಾವ್ಯ ದರ್ಶನ' ಡಾ॥ ಹಿಂಗಮಿರೆಯವರ ವಿಶಿಷ್ಟವಾದ ಮಹಾಕಾವ್ಯ ದರ್ಶನವೆಂಬ ಪದವು 'ತೋರು' ಎಂಬರ್ಥದಲ್ಲಿ ಬಳಕೆಯಾಗುತ್ತದೆ. ಕವಿ ಹಿಂಗಮಿರೆಯವರ ಬುದ್ಧ ಕಾವ್ಯ ದರ್ಶನವು ಕಾವ್ಯದ ಮೂಲಕ ಬುದ್ಧನನ್ನು, ಅವನ ಅಗಾಧ ವ್ಯಕ್ತಿತ್ವವನ್ನು ದರ್ಶಿಸುತ್ತದೆ. ಬುದ್ಧದರ್ಶನ ಒಂದರ್ಥದಲ್ಲಿ ಜೀವನ ದರ್ಶನ! ಬದುಕಿನ ಸಾರ್ಥಕ್ಯವು, ಬುದ್ಧ ಕಾವ್ಯ ದರ್ಶನದಿಂದ ಸಾಧ್ಯವೆಂಬುದು – ಇದು ನೆಲದ ಕವಿತೆ. ಕನಸುಗಳನ್ನು ತುಂಬಿಕೊಂಡವರ ಭರವಸೆಯ ಕಾವ್ಯ ಇದು!

> ಯುದ್ಧ ಬಾಂಬುಗಳ ಭೀತಿಯಿಂದ ತತ್ತರಿಸುವಂಥ ಜನಕೆ
> ಹಿಂಸೆಯಿಂದ ಧಗಧಗಿಸುತಿರುವ ಈ ತಪ್ತ ಮನುಜ ಕುಲಕೆ
> ಶಾಂತಿ ಕರುಣೆಗಳ ಧಾರೆಯೆರೆವ ಅಪರೂಪದ ನೆಲದ ಕವಿತೆ
> ವಿಶ್ವಶಾಂತಿಗಿದೊ ಸ್ತೂಪವೆತ್ತಿ ನಿಂತಿಹುದು ಬುದ್ಧಚರಿತೆ.

'ಬುದ್ಧ ಚರಿತೆ'ಯು ಬರೀ ಕಾವ್ಯವಲ್ಲ; ಮನುಷ್ಯನ ಧಾರ್ಮಿಕ ಸಾಂಸ್ಕೃತಿಕ ಬದುಕಿನ ಚಿಜ್ಯೋತಿ! ವೇದ ಉಪನಿಷತ್ತುಗಳು ಮಾನವನ ಬದುಕಿಗೆ ದಾರಿದೀಪಗಳಾಗಿ ತೋರದೆ ಕರ್ಮಠವನ್ನೇ ಹುಟ್ಟುಹಾಕುವ ಸಂದರ್ಭದಲ್ಲಿ ಸುತ್ತಲೂ ವ್ಯಾಪಿಸಿದ ಅಂಧಕಾರವನ್ನು ಹೊಡೆದೋಡಿಸುವ ಅಮೃತ ಘಳಿಗೆಯಲ್ಲಿ ಬುದ್ಧ ಬಂದದ್ದು ಬೆಳಕಾಗಿ! ಹುಟ್ಟು ಸಾವುಗಳ ಹುಟ್ಟ ಕಡೆದು ಹೊಸ ದಂಡೆಯನು ಕಂಡು ರೂಪಿಸಿದವ ಬುದ್ಧ. ಕಾಮ-ಪ್ರೇಮಗಳ ಬಲೆಯಲ್ಲಿ ಸಿಕ್ಕು ತೊಳಲಾಡುವ ಜೀವಿಗಳನ್ನು ಎತ್ತಿ ಉದ್ಧರಿಸಿದವನು, ಕವಿಯೇ ಹೇಳುವಂತೆ :

> ಕಾಲ ಗರ್ಭದಲ್ಲಿ ಹೂತುಹೋದ ಇತಿಹಾಸವನ್ನು ಬಗಿದು
> ಗತಿಸಿದಂಥ ಶತಮಾನದೊಡಲುಗಳ ಬಾಗಿಲನ್ನು ತೆಗೆದು
> ಅಖಿಲ ಜಗಕೆ ಬೆಳಕನಿತ್ತ ಸಿದ್ಧಾರ್ಥ ಚರಿತೆಯನ್ನು
> ಹೇಳುವೆನು ಸರಸಕನ್ನಡದ ಭಾಷೆಯಲಿ ಬುದ್ಧ ಕಾವ್ಯವನ್ನು



# 'ಬುದ್ಧ ಕಾವ್ಯ ದರ್ಶನ' ಅಪರೂಪದ ಕಾವ್ಯಪ್ರಯೋಗ – ಒಂದು ವಿವೇಚನೆ

ಈ ಕಾವ್ಯ ಓದಿದವರಿಗೆಲ್ಲ ವೇದ್ಯವಾಗುತ್ತದೆ.

ಕಾವ್ಯದ ಉದ್ದೇಶವನ್ನು ಸ್ಪಷ್ಟಪಡಿಸುತ್ತ ಕವಿ ಹಿಂಗಮಿರೆಯವರು ಹೇಳುವ ಮಾತುಗಳು ತುಂಬ ಔಚಿತ್ಯಪೂರ್ಣ:

> ಕಾಳು ತುಂಬಿ ಹೊಡೆಯೆತ್ತಿ ನಿಂತ ಹೊಳಿಸಾಲ ಭೂಮಿಯಂತೆ
> ತುಂಬಿ ಹರಿಯುವಾ ಕೃಷ್ಣೆ-ತುಂಗೆಯರ ತುಂಬು ಪಾತ್ರದಂತೆ
> ಬುದ್ಧಕಾವ್ಯ ರುಚಿ ಕಲ್ಲು ಸಕ್ಕರೆಯ ಅಚ್ಚಹರಳಿನಂತೆ
> ಕೊರಡ ಕೊನರಿಸುವ ಭಾವ ಚಿಮ್ಮಿಸುವ ಜೀವಸತ್ವದಂತೆ.

ದಟ್ಟ ದೇಸಿಯ ಛಾಯೆ; ಪ್ರಾದೇಶಿಕ ಭಾಷೆಯಿಂದಾಗಿ ಕಾವ್ಯ ಬೀಗುವ ಗಾಂಭೀರ್ಯದಿಂದ ಕೂಡಿದೆಯಲ್ಲದೆ, ಗಂಭೀರ ಚಿಂತನಕ್ಕೆ ಒಳಗಾಗುವ ಮಹಾಕಾವ್ಯ. ಇದು ಸಪ್ಪನ್ನ ಬ್ಯಾಳಿಯವರ ಸವುಳು ಕಾವ್ಯವಲ್ಲ,

> ಸಪ್ಪನ್ನ ಬ್ಯಾಳಿಯನ್ನುಂಡು ಬರೆದವರ ಸವುಳು ಕಾವ್ಯ ಬೇರೆ
> ಉಪ್ಪು ಖಾರ ಹುಳಿಯೊಗರು ಸವಿದವರ ಕಾವ್ಯ ರುಚಿಯೆ ಬೇರೆ
> ರಾಮ ಚರಿತೆಯನೋ, ಭೀಮಚರಿತೆಯನೊ ಕೇಳಿ ಮತ್ತೆ ಮತ್ತೆ
> ಬಾಯಿ ರುಚಿಕಳಕೊಂಡ ಜನರಿಗಿದೊ ನವ್ಯ ಬುದ್ಧ ಚರಿತೆ

ಎಂದು ಹೇಳುವಲ್ಲಿ ಇವರ ಎಡಪಂಥೀಯ ಧೋರಣೆ ಸ್ಪಷ್ಟವಾಗಿ ಗೋಚರಿಸುತ್ತದೆ.

ಬುದ್ಧನು ಜಾತಿ-ಮತ ಪಂಥಗಳ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ನೊಂದು ಬಂದವರಿಗೆ ಕರುಣೆ ಸುರಿಸುವ ದೇವ. ಜಲಗಾರ ಸುನೀತ, ಸಿಗಾಲ, ಕಶ್ಯಪ, ಶಪ್ಪಿನ, ಪೂರ್ಣ, ಚಾರುದತ್ತೆ, ವಿಶಾಖೆ, ಅಂಗುಲಿಮಾಲ, ಭಾರದ್ವಾಜ, ಅನಾಥಪಿಂಡಕ, ನಂದಕುಮಾರ ಮತ್ತು ಸುಂದರಿ ಕಂಚಿ, ದೇವದತ್ತ ಹೀಗೆ ನೂರಾರು ಜನರ ಸಮಸ್ಯೆಗಳನ್ನು, ಅವುಗಳ ಮೂಲವನ್ನು ಕಂಡುಕೊಂಡು ಅವರಿಗೆಲ್ಲ ನೆಮ್ಮದಿಯ ಬದುಕನ್ನು ನೀಡಿದ್ದು ಕಾವ್ಯದಲ್ಲಿ ಸೊಗಸಾಗಿ ಮೂಡಿಬಂದಿದೆ.

**ಡಾ॥ ಎಂ. ಬಿ. ಹೂಗಾರ**

ಜಗತ್ತಿಗೆ ಬೆಳಕನಿತ್ತ ಮಹಾನ್ ವ್ಯಕ್ತಿಯನ್ನು ಕುರಿತು ಕಾವ್ಯ ಬರೆಯಬೇಕೆಂದು ಬಯಸಿದ ಕವಿ 'ಬುದ್ಧ ದರ್ಶನ' ರಚಿಸುವುದರ ಮೂಲಕ ಅಭಿನಂದನಾರ್ಹರಾಗಿದ್ದಾರೆ.

ಬಯಲ ಬೆನ್ನು ಹತ್ತಿದ ಬುದ್ಧನಿಗೆ ಎಲ್ಲವೂ ಆನಂದಮಯ! ಜರಾ-ಮರಣ-ದುಃಖಗಳಿಗೆ ಮೂಲ ಶೋಧಿಸ ಹೊರಟವನಿಗೆ ಜಗತ್ತೇ ತನ್ನದೆನಿಸಿತಲ್ಲದೆ ಜಗದ ಜಂಜಡಕ್ಕೆ ಹೆದರಲಿಲ್ಲ; ಅದಕ್ಕೆ ಸ್ಪಂದಿಸಿದ. ಆಣವ-ಮಾಯಾ-ಕಾರ್ಮಿಕ ಮಲಗಳ ಬಗ್ಗೆ ತಲೆಕೆಡಿಸಿಕೊಳ್ಳದೆ ತಾನು ಕಂಡ ಸತ್ಯವನ್ನು ಅಧಿಷ್ಠಾನಗೊಳಿಸಲು ಹೊರಟ ಬುದ್ಧ. ಮನುಷ್ಯನ ವ್ಯಕ್ತಿತ್ವ ರೂಪುಗೊಳ್ಳುವುದು ಅವನ ವರ್ಣ-ವರ್ಗ-ರೂಪ ದಿಂದಲ್ಲ; ಅವನ ಅಂತರಂಗದಲ್ಲಾಗುವ ಮಾನವ ಪ್ರೇಮದ ವಿಕಸನದಿಂದ ಎನ್ನುವುದನ್ನು ಲೋಕಕ್ಕೆ ಸಾರಿದ. ಶ್ರೇಣೀಕೃತ ಸಮಾಜದಲ್ಲಿರುವ ದೋಷವನ್ನು ಎತ್ತಿ ತೋರಿಸಿದ. ಯಜ್ಞ – ಯಾಗಾದಿಗಳ ಹೆಸರಿನಲ್ಲಿ ನಡೆಯುವ ಕಂದಾಚಾರವನ್ನು ಟೀಕಿಸಿದ. ಮನುಷ್ಯ ಮನುಷ್ಯರಲ್ಲಿ ಪ್ರೀತಿ-ಅಂತಃಕರಣದ ಬೆಸುಗೆ ಬೆಸೆಯಬೇಕೆಂದು ತಿಳಿಸಿದ. ಬುದ್ಧನು ಸಾರಿದ ಸಂದೇಶಗಳನ್ನು ಡಾ|| ಹಿಂಗಮಿರೆಯವರು ತಮ್ಮ ಕಾವ್ಯದಲ್ಲಿ ಅಲ್ಲಲ್ಲಿ ಉದ್ಧರಿಸಿದ್ದಾರೆ.

ಪ್ರಸ್ತುತ ಕಾವ್ಯವು ೬೦ ಚಿಕ್ಕ-ಪುಟ್ಟ ಸಂಧಿಗಳನ್ನು ಒಳಗೊಂಡಿದ್ದು ಸುಮಾರು ೯೪೪೪ ಪದ್ಯಗಳನ್ನು ಹೊಂದಿದೆ. ಮಗಧ ರಾಜ್ಯದ ರಾಜಧಾನಿ ಪಾಟಲೀಪುತ್ರದ ವರ್ಣನೆಯೊಂದಿಗೆ ಕಾವ್ಯ ಪ್ರಾರಂಭವಾಗುತ್ತದೆ. ಶಾಕ್ಯ ಮತ್ತು ಕೋಲಿಯರಾಳುವ ಆ ಪ್ರದೇಶವನ್ನು ಶುದ್ಧೋದನನು ಆಳುತ್ತಿದ್ದ. ಇವನಿಗೆ ಇಬ್ಬರು ಹೆಂಡಿರು : ಮಹಾದೇವಿ ಮತ್ತು ಪ್ರಜಾಪತಿ; ಅರಸನ ಗೋತ್ರ ಗೌತಮ. ಅರಸ ಶೂರನೂ ದಯಾಮೂರ್ತಿಯೂ ಆಗಿದ್ದ. ಇವನ ಗುಣಸ್ವಭಾವಕ್ಕೆ ಅನುಗುಣನಾದ ಪುತ್ರನೇ ಸಿದ್ಧಾರ್ಥ. ತಂದೆಯ ದಯಾಮಯ ಶೌರ್ಯವನ್ನು ಸಿದ್ಧಾರ್ಥನಲ್ಲಿ ಕಾಣಬಹುದು. ಬಾಲ್ಯದಿಂದಲೇ ಅತ್ಯಂತ ಮಮತಾ ಮೂರ್ತಿಯಾಗಿದ್ದ ಸಿದ್ಧಾರ್ಥ ಯಾರೊಂದಿಗೂ ಕಾಳಗಕ್ಕೆ ಇಳಿದವನಲ್ಲ. ಡಾ|| ಹಿಂಗಮಿರೆಯವರು ಸಿದ್ಧಾರ್ಥನ ಬಾಲ್ಯ ಜೀವನವನ್ನು ತುಂಬ ಪರಿಣಾಮಕಾರಿ ಯಾಗಿ ಚಿತ್ರಿಸುತ್ತಾರೆ :

*ವೈಶಾಖ ಶುದ್ಧ ಪೂರ್ಣಿಮೆಯ ಚಂದ್ರ ಮೂಡಿರಲು ಗಗನದಲ್ಲಿ*
*ಬೆಳ್ಳಿಯಂತೆ ಬೆಳ್ದಿಂಗಳುಕ್ಕಿ ಹರಿದಿತ್ತು ಭೂಮಿಯಲ್ಲಿ;*
*ಕತ್ತಲೆಯ ಮೊತ್ತ ಓಡೋಡುತಿತ್ತು ತಲೆಮರೆಸಿಕೊಂಡು*
*ಬೆಳ್ದಿಂಗಳಲ್ಲಿ ತೊಯ್ದಿತ್ತು ತೇಲುತ್ತ ಕಪಿಲವಸ್ತು ನಗರ.*

ಸಿದ್ಧಾರ್ಥ ಹುಟ್ಟಿದಾಗ ಇಡೀ ಭೂಮಿ ಸಂತೋಷದ ಕ್ಷಣವನ್ನು ಅನುಭವಿಸಿತಂತೆ. ''ಹುಟ್ಟಿದೊಡನೆ ಸಿದ್ಧಾರ್ಥನಂದು ಲುಂಬಿನಿಯ ಬನದೊಳಂದು। ಅಖಿಲಭೂಮಿ ನಿಂತಿತ್ತು ಒಂದು ಕ್ಷಣ ಸಂತೋಷ ಉಕ್ಕಿ ಬಂದು।। ಕಾಡುಮೇಡು ತರು ಮರಗಳೆಲ್ಲ ಹೂಗೊಂಚಲನ್ನು ತೂಗಿ। ಪಕ್ಷಿ ಪ್ರಾಣಿಗಳು ಉಲ್ಲಾಸದಿಂದ ಉತ್ಸಾಹದಿಂದ ಬೀಗಿ।।'' ಹೀಗೆ ಸಿದ್ಧಾರ್ಥ ನೆಲದ ಎದೆಯೊಳಗಿಂದಲೇ ಹುಟ್ಟಿಬಂದು ಲೋಕಕಲ್ಯಾಣದ ಕನಸು ತುಂಬಿಕೊಳ್ಳುತ್ತಾನೆ.

ಸಿದ್ಧಾರ್ಥನ ಬಾಲ್ಯವನ್ನೂ ಕವಿ ತುಂಬ ಸೊಗಸಾಗಿ ವರ್ಣಿಸುತ್ತಾರೆ. ಬೆಳೆವ ಸಿರಿ ಮೊಳಕೆಯಲ್ಲೇ ನೋಡೆಂಬಂತೆ ಮುಂದೆ ವಿರೋಧಿಸಲಿರುವ ಮೂರ್ತಿ ಪೂಜೆಯಂತಹ ಕಂದಾಚಾರಗಳ ಕುರಿತು ಇವನು ಬಾಲ್ಯದ ತುಂಟಾಟಗಳಲ್ಲೇ ಅವುಗಳನ್ನೆಲ್ಲ ವಿರೋಧಿಸುತ್ತಾನೆ :

*''ದೇವರಿಗೆ ನಮಿಸು ಬೇಡಿದ್ದ ಕೊಡುವ ಎಂದೆನಲು ಗೋತಮಿಯು*
*ಇನ್ನೊಂದು ಪಾಪುವನು ಕೊಡಲಿ ನಿನಗೆ ನೋಡುವೆನು ಎನ್ನುತಿದ್ದ''*
*ಗುಲ್ಲು ಮಾಡದೆ ನಡೆದು ಮೆಲ್ಲಗೆ ಕಳ್ಳ ಬೆಕ್ಕಿನಂತೆ*
*ಯಾರು ಇಲ್ಲದಾ ಸಮಯದಲ್ಲಿ ಜಗುಲಿಯನ್ನು ಹೊಕ್ಕು*
*ಅಮ್ಮನಿಗೆ ಪಾಪುವನು ಕೊಡಲಿಲ್ಲವೇಕೆನುತ ಸಿದ್ಧಾರ್ಥ*
*ಕಿತ್ತೆಸೆಯುತ್ತಿದ್ದ ಬಂಗಾರ ಬೆಳ್ಳಿ ಪಂಚಲೋಹಗಳ ದೇವತೆಗಳನ್ನು ।।*

ಕಲ್ಲು-ಮಣ್ಣು-ಲೋಹಗಳಲ್ಲಿ ಭಗವಂತನನ್ನು ಹುಡುಕುವುದು ಹುಚ್ಚುತನ. ಮನುಷ್ಯರ ಅಂತಃಕರಣದಲ್ಲಿಯೇ ನಾವು ಆನಂದವನ್ನು ಕಾಣಬೇಕೆಂಬುದು ಬುದ್ಧನ ಅಭಿಪ್ರಾಯ. ಲೋಕದ ಜನತೆಗೆ ದುಃಖದಿಂದ ಪಾರಾಗಬೇಕೆಂಬ ಬಯಕೆ. ಆದರೆ ಅದರ ಉಪಾಯದ ಹುಡುಕಾಟಕ್ಕೆ ಯಾರೂ ಹೋಗಲಿಲ್ಲ. ಬುದ್ಧ ಒಂದು ದಿನ ಚನ್ನನೊಂದಿಗೆ ಹೋಗುವಾಗ ವೃದ್ಧನನ್ನು, ರೋಗಿಯನ್ನು ಹಾಗೂ ಶವವನ್ನು ಕಂಡು ಮನುಷ್ಯನಿಗೆ ಈ ಅವಸ್ಥೆಗಳಿಂದ ಬಿಡುಗಡೆ ಇಲ್ಲವೆ, ಎಂದು ಯೋಚಿಸುತ್ತಾನೆ. ಹೀಗೆ ದುಃಖವನ್ನುಂಟುಮಾಡುವ ಇವುಗಳಿಗೆ ಏನು ಪರಿಹಾರ ಎಂದು ಚಿಂತಿಸುತ್ತಾನೆ. ಈ











ಸಂದರ್ಭವನ್ನು ಡಾ|| ಹಿಂಗಮಿರೆಯವರು ಕಣ್ಣಿಗೆ ಕಟ್ಟುವಂತೆ ಕಟ್ಟಿಕೊಡುತ್ತಾರೆ :

''ಸಿದ್ಧಾರ್ಥನೊಂದು ದಿನ ತಂದೆ ಶುದ್ಧೋದನನ ಕುರಿತು ಹೇಳಿದನಿಂತು
ಋತುಗಳಿಗೆ ತಕ್ಕಂತೆ ಅರಮನೆಯಲ್ಲಿಟ್ಟು ನನ್ನಲ್ಲಿ ಬೆಳೆಸಿ ನಾನು ಕಂಡದ್ದು ಸುಖವು ಅಲ್ಲ ಅದು ದುಃಖವೆಂದು ಗೊತ್ತಾಗಿ ಸಂಸಾರದಲ್ಲಿ ಸುಖವೆಂಬುದೆಲ್ಲಿ ಇರುವುದೇನೊ ಗೊತ್ತಿಲ್ಲ ನನಗೆ.''

ಸಂಸಾರದಲ್ಲಿರುವ ಸುಖವು ನಿಜವಾದ ಸುಖವಲ್ಲ, ಇದು ಸುಖದ ನೆರಳು. ಮನುಷ್ಯನಿಗೆ ಶಾಶ್ವತವಾದ ಸುಖ ಬೇಕು. ದುಃಖವೆನ್ನುವರು ಎಲ್ಲರನ್ನು ಬೆನ್ನಟ್ಟುತ್ತಿ ರುವುದು ಉಂಟೆಂದು ಹೇಳಿ ಅರಮನೆಯನ್ನೇ ಬಿಡುವ ನಿರ್ಣಯ ಕೈಕೊಳ್ಳುತ್ತಾನೆ. ಅಪ್ರತಿಮ ಸುಂದರ ಮಡದಿ, ಅರಮನೆ, ಬಂಧು-ಬಳಗ, ರಾಜ್ಯ-ದರಬಾರು ಎಲ್ಲವೂ ತೋರಿ ಮಾಯವಾಗುವುದೇ. ಇದ್ಯಾವುದು ಜರಾ-ಮರಣ-ದುಃಖಗಳನ್ನು ಮೀರುವಂತಹದಲ್ಲ ಎಂದು ಬಗೆದು ಮನೆಬಿಟ್ಟ!

ಬುದ್ಧನು ಜಾತಿ-ಮತ ಪಂಥಗಳ ಬಗ್ಗೆ ತಲೆಕೆಡಿಸಿಕೊಳ್ಳಲಿಲ್ಲ. ನೊಂದು ಬಂದವರಿಗೆ ಕರುಣೆ ಸುರಿಸುವ ದೇವ. ಜಲಗಾರ ಸುನೀತ, ಸಿಗಾಲ, ಕಶ್ಯಪ, ಶಪ್ಪಿನ, ಪೂರ್ಣ, ಚಾರುದತ್ತೆ, ವಿಶಾಖೆ, ಅಂಗುಲಿಮಾಲ, ಭಾರದ್ವಾಜ, ಅನಾಥಪಿಂಡಕ, ನಂದಕುಮಾರ ಮತ್ತು ಸುಂದರಿ ಕಂಚಿ, ದೇವದತ್ತ ಹೀಗೆ ನೂರಾರು ಜನರ ಸಮಸ್ಯೆಗಳನ್ನು, ಅವುಗಳ ಮೂಲವನ್ನು ಕಂಡುಕೊಂಡು ಅವರಿಗೆಲ್ಲ ನೆಮ್ಮದಿಯ ಬದುಕನ್ನು ನೀಡಿದ್ದು ಕಾವ್ಯದಲ್ಲಿ ಸೊಗಸಾಗಿ ಮೂಡಿಬಂದಿದೆ.

ಯಜ್ಞಯಾಗಗಳ ಖಂಡನೆ, ಸಾವಿನ ಅನಿವಾರ್ಯತೆ, ಕುರುಡನ ರೋಗನಿವಾರಣೆ ಹೀಗೆ ಹಲವು ವಿಧಾಯಕ ಕಾರ್ಯಗಳನ್ನು ಮಾಡುತ್ತ ಬುದ್ಧ ಸಂಚಾರ ಮಾಡುತ್ತಾನೆ. ಯಶೋಧರೆ – ರಾಹುಲರಿಗೂ ಸನ್ಯಾಸ ದೀಕ್ಷೆ ನೀಡಿ ಸಾಂಸಾರಿಕ ಸಂಕಟದಿಂದ ಅವರನ್ನೂ ಮುಕ್ತಗೊಳಿಸುತ್ತಾನೆ. ಈ ಕಾವ್ಯ ಗ್ರಂಥದಲ್ಲಿ ಬರುವ ಹಲವಾರು ಸಂಗತಿಗಳು ಕಣ್ಣಿಗೆ ಕತೆಯಂತೆ ಕಟ್ಟಿಕೊಳ್ಳುತ್ತವೆ. ಕತೆಯ ಹಂದರದ ಒಳಗೆ ಕಾವ್ಯ ಮೌನವಾಗಿ ಗೀತೆ ನುಡಿಯುತ್ತದೆ.

ಬುದ್ದಣ್ಣ ಹಿಂಗಮಿರೆಯವರ ಈ ಮಹಾಕಾವ್ಯ ಪ್ರಮುಖ ಮೂರು ವಾಹಿನಿಗಳ ಸಂಗಮವಾಗಿದೆ. ಮಗಧ-ಪಾಟಲೀಪುತ್ರ ರಾಜ-ಅರಸೊತ್ತಿಗೆ ಇತ್ಯಾದಿ ಐತಿಹಾಸಿಕ ಸಂಗತಿಗಳೊಂದಿಗೆ ಬುದ್ಧ ಬೋಧಿಸಿದ ಬೌದ್ಧ ಧರ್ಮದ ತತ್ವ ಸಿದ್ಧಾಂತಗಳು ಅವುಗಳನ್ನು ಪ್ರತಿಪಾದನೆ ಮಾಡುವ ಅದ್ಭುತ ಕಾವ್ಯಶೈಲಿ ಈ ಮೂರೂ ಸಂಗತಿಗಳ ಸುಂದರ ಸಂಗಮ ಈ ಮಹಾಕಾವ್ಯ. ಇದು ಇತಿಹಾಸ, ಇದು ಧರ್ಮ, ಇದು ಕಾವ್ಯ ಇವೆಲ್ಲವುಗಳನ್ನು ಮೀರಿನಿಂತ ಮನುಕುಲದ ಏಳ್ಗೆಯ ಹೊಸ ಹಾದಿ !

ಡಾ|| ಎಂ. ಬಿ. ಹೂಗಾರ
ಶಿವಾನಂದ ಕಾಲೇಜ, ಕಾಗವಾಡ, ಬೆಳಗಾವಿ ಜಿಲ್ಲೆ

“ನಿನ್ನ ತಂದೆ ಶೇಷಪ್ಪ ತೀರಿಕೊಂಡಿದ್ದಾನೆ. ಮುಂದಿನ ಕೆಲಸ ನಿನ್ನನ್ನೇ ಅವಲಂಬಿಸಿದೆ. ತಕ್ಷಣ ಹೊರಟು ಬಾ.'' ಊರಿನಿಂದ ಕಾಕಾ ಇಷ್ಟು ಮಾತಾಡಿ ಉತ್ತರಕ್ಕೂ ಕಾಯದೆ ಮುಗಿಸಿಬಿಟ್ಟಿದ್ದ. ಉದಯನಿಗೆ ವಿಷಾದ. ಕಾಕಾ ಸಹ ಅಪ್ಪನ ಹಾಗೆ ಪಕ್ಕಾ ವ್ಯವಹಾರಸ್ಥ. ಭಾವನೆ, ಸಂವೇದನೆಗಳಿಗೆ ಇವರ ಬಳಿ ಜಾಗವೇ ಇಲ್ಲ. ಉದಯ ಸ್ವಲ್ಪ ಹೊತ್ತು ತಣ್ಣಗೆ ಕುಳಿತ.

ತಾನೀಗ ಒಬ್ಬ ಮನುಷ್ಯನಾಗಿರುವುದು ತನ್ನ ಅಪ್ಪ ಎನಿಸಿಕೊಂಡ ಈ ಶೇಷಪ್ಪನ ದಯೆಯಿಂದ ಎನ್ನುವುದೇನೋ ನಿಜ. ಆದರೆ ಅಪ್ಪ ಇದನ್ನೆಲ್ಲ ಕರ್ತವ್ಯವೆಂದು ಮಾಡಿದನೆ? ಊಹು. ಒಂದು ದಿನವೂ ಆತ ತನ್ನನ್ನು ಎತ್ತಲಿಲ್ಲ, ಆಡಿಸಲಿಲ್ಲ, ಹೇಗಿದೀಯ ಎಂದು ವಿಚಾರಿಸಲಿಲ್ಲ. ತನ್ನ ನೆರಳು ಕಂಡರೆ ಸಾಕು ಆತನ ಕಣ್ಣಲ್ಲಿ ತಿರಸ್ಕಾರ. ಮುಖದಲ್ಲಿ ಅವಹೇಳನದ ನಗೆ ಅಂತ ಅಮ್ಮ ಈಗಲೂ ಹೇಳುತ್ತಾಳಲ್ಲ! ಅಂತೂ ಹುಟ್ಟಿಬಿಟ್ಟ. ಹೇಗೋ ಬದುಕಿಕೊಳ್ಳಲಿ ಎಂಬ ಹಾಗಿತ್ತು ಅಪ್ಪನ ಅನಿವಾರ್ಯ ಔದಾರ್ಯ. ಆಗೊಂದು ವೇಳೆ ಅಮ್ಮ ತನ್ನ ಬೆಂಬಲಕ್ಕೆ ಇಲ್ಲದೇ ಹೋಗಿದ್ದರೇ...

ಉದಯ ಎದ್ದ. ಕಣ್ಣಿಗೆ ಕಾಣಿಸಿದ ಬ್ಯಾಗೊಂದನ್ನು ಎಳೆದು ಕೈಗೆ ಸಿಕ್ಕಷ್ಟು ಬಟ್ಟೆ ತುರುಕಿ ಹೆಗಲಿಗೇರಿಸಿ ಹೊರಟ. ಮನಸ್ಸು ಉಧ್ವಸ್ಥಗೊಂಡಿದ್ದರೂ ಅದು ತಾಯಿಯ ಬಗೆಗೆ. ಆದರೆ ಅಪ್ಪ ಸತ್ತಿದ್ದಾನೆ ಎಂದು ಕೇಳಿಯೂ ತನ್ನ ಕಣ್ಣಲ್ಲಿ ನೀರು ತುಂಬಲಿಲ್ಲ. ಹೃದಯ ಮಿಡಿಯಲಿಲ್ಲ. ಕೊನೆಪಕ್ಷ ಆತ ಅಪ್ಪನ ಸ್ಥಾನದಲ್ಲಿ ನಿಂತ ತಪ್ಪಿಗಾದರೂ ತಾನು...



# ಅಧಿಕಾರ

ರಾಮಚಂದ್ರ ಭಾವೆ

ಊಹು – ಉದಯ ತಲೆ ಕೊಡವಿದ. ಇಂಥವನ ಸಾವಿಗೆ ಅಳುವುದು ವ್ಯರ್ಥ. ಮಾಡಿದ ಅತ್ಯಾಚಾರಗಳಿಗಾಗಿ, ಕೊಲೆ ಸುಲಿಗೆಗಳಿಗಾಗಿ ಆತ ಎಂದೋ ಸಾಯಬೇಕಾಗಿತ್ತು. ದೇಶಕ್ಕೆ ಸ್ವಾತಂತ್ರ್ಯ ಬಂದು ಇಷ್ಟು ವರ್ಷಗಳಾದರೂ ಆತ ಮಾತ್ರ ಇನ್ನೂ ಹತ್ತೊಂಬತ್ತನೇ ಶತಮಾನದ ಪಾಳೇಗಾರನಂತೆಯೇ ಬದುಕಿದ್ದ. ಇಂಥ ದುಷ್ಟ, ದುರ್ಮಾರ್ಗಿಯೊಂದಿಗೆ ತನ್ನ ತಾಯಿ ಇಷ್ಟು ವರ್ಷ ಅದು ಹೇಗೆ ಸಂಸಾರ ಮಾಡಿದಳೋ ನೆನೆಸಿಕೊಂಡೊಡನೆ ಉದಯನ ಉಸಿರು ಭಾರ. ತಾಯಿಯ ಶೋಚನೀಯ ಪರಿಸ್ಥಿತಿ ಕಲ್ಪಿಸಿಕೊಂಡ. ಅವನ ಕಣ್ಣಂಚಿನಲ್ಲಿ ನೀರಾಡದೆ ಇರಲಿಲ್ಲ.

ರಾತ್ರಿಯ ಬಸ್ಸು ಹೊರಡುತ್ತಿದ್ದಂತೆ ಮುಸುಕಿದ ಕತ್ತಲೆಯ ಮಧ್ಯೆ ಅವನಿಗೆ ಹಳೆಯ ಸಂಗತಿಗಳ ನೆನಪು. ಅದೊಂದು ದಿನ ಅಮ್ಮ ಹೇಳಿದ್ದನ್ನು ಮರೆಯುವ ಹಾಗೇ ಇಲ್ಲ. ''ಶೇಷ ನನಗೆ ಸೋದರಮಾವ. ಅವನಿಗೆ ನನ್ನನ್ನು ಮದುವೆಯಾಗುವ ಚಪಲ. ಆದರೆ ಅವಗುಣಗಳ ಮೂಟೆಯಾಗಿದ್ದ ಅವನಿಗೆ ನನ್ನನ್ನು ಕೊಡಲು ಅಪ್ಪನಿಗೆ ಇಷ್ಟವಿರಲಿಲ್ಲ. ಶೇಷ ಕೆರಳಿ ''ಬೇರೆಯವನ ಜತೆ ಅವಳ ಮದುವೆ ಹೇಗೆ ಮಾಡುತ್ತೀರೋ ನೋಡಿಯೇ ಬಿಡುತ್ತೇನೆ ಎಂದು ಗುಟುರು ಹಾಕಿದನಂತೆ. ಅವನ ಕುಖ್ಯಾತಿ ಕೇಳಿದ್ದ ಯಾವ ಸಂಬಂಧವೂ ಹೆದರಿಕೆಯ ಕಾರಣ ಕುದುರಲಿಲ್ಲ. ಕೊನೆಗೂ ಒಬ್ಬ ಹುಡುಗ ವರನಾಗಿ ಬಂದ. ಅವರೇ ನಿನ್ನ ತಂದೆ. ಶೇಷ ಈ ಮದುವೆಗೆ ವಿಘ್ನ ತರುತ್ತಾನೆಂದು ಗೊತ್ತೇ ಇತ್ತಲ್ಲ, ಅಪ್ಪ ಒಂದು ಗುಪ್ತ ಜಾಗದಲ್ಲಿ ಮಧ್ಯರಾತ್ರಿಯ ಮುಹೂರ್ತವಿರಿಸಿದ. ಮಾವ ಗೊತ್ತು ಹಚ್ಚುವ ಹೊತ್ತಿಗೆ ನನ್ನ ಮದುವೆ ನೆರವೇರಿಬಿಟ್ಟಿತ್ತು. ಅವನು ಹೂಂಕರಿಸುತ್ತ ಬಂದ. ನಾವಿಬ್ಬರೂ ಅವನ ಕಾಲಿಗೆ ಬಿದ್ದು ಆಶೀರ್ವಾದ ಬೇಡಿದೆವು. ಹತಾಶನಾದ ಮಾವ ನನ್ನ ಬೆರಳಿಗೆ ಉಂಗುರ ಹಾಕಿ ಬಂದ ಹಾಗೆಯೇ ತೆರಳಿಬಿಟ್ಟ. ಮುಂದೆ ನಾಲ್ಕೇ ತಿಂಗಳಿಗೆ ನಿನ್ನ ತಂದೆ ಅಪಘಾತದಲ್ಲಿ ಸಿಕ್ಕು ಸಾವಿಗೀಡಾದರು. ಆಗ ನಾನು ಎರಡು ತಿಂಗಳ ಬಸುರಿ. ಶೇಷಮಾವ, ಅಪ್ಪನೊಂದಿಗೆ ಬಂದು ''ಇವಳ ದುಃಖ ಕಡಿಮೆ ಆಗುವ ತನಕ ಕರೆದುಕೊಂಡು ಹೋಗುತ್ತೀವಿ'' ಅಂದಾಗ ಯಾರಿಂದಲೂ ವಿರೋಧ ಬರಲಿಲ್ಲ. ನಾನು ಹೊರೆಯಾಗುವುದನ್ನು ಗಂಡನ ಮನೆಯವರು ಬಯಸಿರಲಾರರು. ಆಮೇಲೆ ಒಂದು ತಿಂಗಳು ಕಾದಂತೆ ಮಾಡಿ ಮಾವ ಅಪ್ಪನ ಮೇಲೆ ಒತ್ತಡ ತಂದ. ಮಗಳು ವಿಧವೆ ಆಗಿರುವುದಕ್ಕಿಂತ ಇದೇ ಸರಿ ಎಂದು ಅಪ್ಪ ಬಗೆದನೋ, ಇವಳ ಹಣೆಬರಹವೇ ಇಷ್ಟು ಎಂದು ಕೈ ಚೆಲ್ಲಿದನೋ! ಅಂತೂ ಮಾವನೊಂದಿಗೆ ಮದುವೆ ಆಯಿತು. ಆಮೇಲೆ ಹುಟ್ಟಿದವನು ನೀನು. ''ಮಗು ಆರೇ ತಿಂಗಳಿಗೆ ಹುಟ್ಟಿತು'' ಎಂದು ಜನ ಆಡಿಕೊಂಡರಂತೆ. ಆ ಹೊತ್ತಿಗೆ ನನ್ನ ಗಂಡನದು ಸಹಜ ಸಾವಲ್ಲ, ಕೊಲೆ; ಅದನ್ನು ಮಾಡಿಸಿದ್ದು ಶೇಷಮಾವನೇ ಅಂತ ಗೊತ್ತಾಗಿ ಒಂದು ದಿನ ಬಲವಾಗಿ ವಿರೋಧಿಸಿದೆ. ಆಗ ಅವನು

ಉದಯ ತುಸು ಕುತೂಹಲದಲ್ಲಿ ಆಚೀಚೆ ಕಣ್ಣಾಡಿಸಿದ. ಲಕ್ಷ್ಮಣ ಅಲ್ಲೆಲ್ಲೂ ಕಾಣಿಸಲಿಲ್ಲ. ಈತ ನಿಜವಾಗಿ ಶೇಷಪ್ಪನ ಮಗ! ಈ ಸಂಗತಿ ಸಹ ತಾತಾಗೆ, ಬಂಧುಗಳಿಗೆ, ಊರವರಿಗೆ ಗೊತ್ತಿಲ್ಲದೆ ಇಲ್ಲ. ಆದರೂ ಅವನಿಗೆ ತಂದೆಯ ಋಣ ತೀರಿಸಿಕೊಳ್ಳುವ ಅಧಿಕಾರವಿಲ್ಲ ಎಂದುಕೊಂಡಾಗ ಉದಯನಿಗೆ ಪರಿತಾಪ. ಹಾಗೆ ನೋಡಿದರೆ, ಸಂಬಂಧ ಹೇಳಿಕೊಳ್ಳುವುದಾದರೆ ಲಕ್ಷ್ಮಣ ತನಗೆ ತಮ್ಮನಾಗಬೇಕು. ಹಾಗಾಗಿ ಅವನ ಮೇಲೆ ಅದೇನೋ ಒಂದು ಬಗೆಯ ವಾತ್ಸಲ್ಯ. ಓಹ್, ಎಂತಹ ವಿಚಿತ್ರ! ಅವನೊಂದು ತರಹದ ಮಗ, ತಾನೊಂದು ತರಹದ ಮಗ!

ಎಂತಹ ಕ್ರೂರಿ ಎಂಬ ಅನುಭವ ಆಗದೆ ಇರಲಿಲ್ಲ. ಅವನು ಏನಂದ ಗೊತ್ತೇ... ''ಈ ಕೂಸನ್ನು ಸಹ ಕೊಂದೇಬಿಡುತ್ತಿದ್ದೆ. ಆದರೆ ಇದು ನಿನ್ನನ್ನೇ ಹೋಲುತ್ತಿದೆ. ನಿನ್ನ ಮೇಲಿನ ಮೋಹದಿಂದ ಇದನ್ನು ಉಳಿಸುತ್ತಿದ್ದೇನೆ.''

*   *   *

ಬಸ್ಸು ಊರು ತಲುಪಿದಾಗ ಚುಮು ಚುಮು ಬೆಳಗು. ದಟ್ಟವಾಗಿ ಬಿದ್ದ ಮಂಜಿನ ನಡುವೆ ಶಾಲು ಹೊದ್ದು ನಿಂತವರೆಲ್ಲ ಪ್ರೇತಗಳಂತೆ ಭಾಸ. ಗಿರೀಶ ಹತ್ತಿರ ಬಂದ. ಅವನನ್ನು ನೋಡಿ ಅಚ್ಚರಿಯಾಗದಿರಲಿಲ್ಲ. ಕಾಕಾನ ಮಗನಾಗಿದ್ದರೂ ಅವನೆಂದೂ ತನ್ನೊಂದಿಗೆ ಧಾರಾಳಿಯಾಗಿರಲಿಲ್ಲ. ಹೇಳಿಕೊಳ್ಳುವ ಒಡನಾಟವಿರಲಿಲ್ಲ. ಇದಕ್ಕೆ ತಾನು ಶೇಷಪ್ಪನ ಮಗನಲ್ಲದಿದ್ದರೂ ಆಸ್ತಿಗಾಗಿ ಕಾದಿರುವ ಭಾಗಾದಿಯಾಗಿ ಅವನಿಗೆ ತೋರಿರಬಹುದು. ಈಗ ಅವನೊಂದಿಗಿರುವ ಇತರರು ಮೃತನ ಅಪರಕರ್ಮಗಳು ತನ್ನಿಂದ ಆಗಬೇಕು ಎಂಬಂತೆ ಕಾದಿರುವ ಭಾಸ.

ಉದಯ ತುಸು ಕುತೂಹಲದಲ್ಲಿ ಆಚೀಚೆ ಕಣ್ಣಾಡಿಸಿದ. ಲಕ್ಷ್ಮಣ ಅಲ್ಲೆಲ್ಲೂ ಕಾಣಿಸಲಿಲ್ಲ. ಈತ ನಿಜವಾಗಿ ಶೇಷಪ್ಪನ ಮಗ! ಈ ಸಂಗತಿ ಸಹ ತಾತಾಗೆ, ಬಂಧುಗಳಿಗೆ, ಊರವರಿಗೆ ಗೊತ್ತಿಲ್ಲದೆ ಇಲ್ಲ. ಆದರೂ ಅವನಿಗೆ ತಂದೆಯ ಋಣ ತೀರಿಸಿಕೊಳ್ಳುವ ಅಧಿಕಾರವಿಲ್ಲ ಎಂದುಕೊಂಡಾಗ ಉದಯನಿಗೆ ಪರಿತಾಪ. ಹಾಗೆ ನೋಡಿದರೆ, ಸಂಬಂಧ ಹೇಳಿಕೊಳ್ಳುವುದಾದರೆ ಲಕ್ಷ್ಮಣ ತನಗೆ ತಮ್ಮನಾಗಬೇಕು. ಹಾಗಾಗಿ ಅವನ ಮೇಲೆ ಅದೇನೋ ಒಂದು ಬಗೆಯ ವಾತ್ಸಲ್ಯ. ಓಹ್, ಎಂತಹ ವಿಚಿತ್ರ! ಅವನೊಂದು ತರಹದ ಮಗ, ತಾನೊಂದು ತರಹದ ಮಗ!

ಉದಯ ಮನೆಯ ಮೆಟ್ಟಿಲೇರುತ್ತಿದ್ದಂತೆ ಬೆಳಗಿನ ಚಳಿಗೆ ಮುದುರಿ ಕಟ್ಟೆಯ ಮೇಲೆ ಕಾದು ಕುಳಿತವರೆಲ್ಲ ಚಟಪಟ ಎದ್ದರು. ತಮ್ಮ ತಮ್ಮಲ್ಲೇ ''ಬಂದ ಬಂದ'' ಎಂದು ಪಿಸುಗುಟ್ಟಿದರು. ಉದಯನಿಗೆ ಅವರತ್ತ ನೋಡಬೇಕು ಅನಿಸದೆ ಮನೆಯೊಳಗೆ ನಡೆದ. ಇಡೀ ಜೀವನವನ್ನು ಅಶಾಂತವಾಗಿ ಕಳೆದಿದ್ದ ಅಪ್ಪ ಈಗ ಶಾಂತವಾಗಿ ನಡುಮನೆಯಲ್ಲಿ ಮಲಗಿದ್ದ. ಶವದ ತಲೆಗೆ ಬಿಳಿ ಬಟ್ಟೆ ಸುತ್ತಿರುವುದು, ಅಲ್ಲಲ್ಲಿ ರಕ್ತದ ಕಲೆಗಳು, ನೋಡಿ ದಿಗ್ಭ್ರಮೆಯೇನೂ ಆಗಲಿಲ್ಲ. ಅಮ್ಮ ಮಾತ್ರ ಎರಡನೆಯ ಸಲ ಮತ್ತೆ ವಿಧವೆ ಆಗಿದ್ದಳು. ಈ ಎರಡನೆಯ ಗಂಡನಿಗೂ ಸಹಜ ಸಾವು ಬಂದಿರಲಿಲ್ಲ. ಉದಯ ಸಂತಾಪದಲ್ಲಿ ತಾಯಿಯ ಕಡೆ ತಿರುಗಿದ. ಅವಳ ಪರಿಸ್ಥಿತಿ ತೀರ ಶೋಚನೀಯ ಅನ್ನಿಸಿ ಧಾವಿಸಿ ಹೋಗಿ ಅವಳ ಮಡಿಲಲ್ಲಿ ತಲೆ ಇರಿಸಿ ಬಿಕ್ಕಿದ.

ಯಾರೋ ಬೆನ್ನ ಮೇಲೆ ಕೈಯಿರಿಸಿದರು. ಎಚ್ಚರಿಸುವಂತೆ ತುಸು ಒತ್ತಡ ಹಾಕಿ ತಟ್ಟಿದರು. ತಿರುಗಿದರೆ ಕಂಡವನು ಕಾಕಾ. ''ಬಾ'' ಎಂಬಂತೆ ಸನ್ನೆಮಾಡಿ ಹೊರಗೆ ನಡೆದ. ಉದಯ ಎದ್ದು ಹಿಂಬಾಲಿಸಿದ. ಅಲ್ಲಿ ಹೆಚ್ಚು ಜನರಿಲ್ಲದ ಕಡೆ ಗಿರೀಶ ನಿಂತಿದ್ದ. ''ಅವನೇನೋ ಹೇಳುತ್ತಾನೆ ಕೇಳು'' ಎಂದು ಕಣ್ಣಲ್ಲೇ ಕಾಕಾ ನಿರ್ದೇಶಿಸಿದ. ಗಿರೀಶ ಒಂದಷ್ಟು ದುಗುಡ ತುಂಬಿ ಬಂದವನಂತೆ ''ಕೊಲೆ ಕೇಸು ಮಾರಾಯ. ಭಾಳ ಕಷ್ಟ ಆತು'' ಅಂದ. ಇದೆಲ್ಲ ಊಹಿಸಿದ್ದೇ ಆದ್ದರಿಂದ ಉದಯನಲ್ಲಿ ಯಾವ ಕಳವಳವೂ ಸ್ಫುರಿಸಲಿಲ್ಲ. ತನ್ನ ಮಾತಿಗೆ ಅವನು ನಿರ್ವಿಕಾರವಾಗಿ ನಿಂತ ಸ್ಥಿತಿ ನೋಡಿ ಗಿರೀಶ ''ಭಾಳಾ ಖರ್ಚಾತು ಮಾರಾಯ. ನೀನು ಮಾತ್ರ ಹುಷಾರು. ಆದಷ್ಟು ಬೇಗ ಕೆಲಸ ಮುಗಿಸಿದ್ದೇ ಬೆಂಗಳೂರಿಗೆ ಅಮ್ಮನ್ನ ಕರಕೊಂಡು ಹೋಗಿಬಿಡು'' ಅಂದ ಮತ್ತೆ.

''ಯಾಕೆ...?'' ಉದಯನ ದನಿಯಲ್ಲಿ ಬೇಸರವಿತ್ತು.

''ಯಾಕೆ ಅಂತ ಕೇಳುತ್ತಿಯಲ್ಲೋ! ಅವರೆಲ್ಲ ಸೇರಿ ನಿನ್ನನ್ನೇ ಮುಗಿಸಿಬಿಡಬಹುದು. ನಿಮ್ಮ ಇಡೀ ಮನೆತನವನ್ನೇ ಉಡಾಯಿಸಿಬಿಡ್ತೀವಿ ಅಂತ ಬೆದರಿಸಿದ್ದಾರೆ.''

''ಯಾರು ಅವರು ?''

''ನಿಮ್ಮಪ್ಪನ್ನ ಕೊಂದೋರು !''

''ನಾನೇನೋ ಬೆಂಗಳೂರು ಸೇರಿ ಅವರ ಕೈಯಿಂದ ಬಚಾವಾಗ್ತೀನಿ. ಮತ್ತೆ ಇದೇ ಊರಲ್ಲಿ ಉಳಿಯುವ ನಿಮ್ಮಗಳ ಗತಿ ಏನು? ಮನೆತನದ ಯಾರನ್ನೂ ಉಳಿಸಲ್ಲ ಅಂದಿದಾರಲ್ಲ ಅವರು ?''

ಉದಯನ ನೇರ ಮಾತಿಗೆ, ನೆಟ್ಟ ದೃಷ್ಟಿಗೆ ಗಿರೀಶ ಬೆಪ್ಪಾದ. ತನ್ನ ಮಾತಿನ ಬಲೆಯಲ್ಲಿ ತಾನೇ ಸಿಕ್ಕಿಬೀಳಬಹುದು ಎಂದಾತ ಎಣಿಸಿರಲಿಲ್ಲ. ''ಅದು ಹಾಗಲ್ಲ'' ಎಂದೇನೋ ಹೇಳಲು ಹೊರಟವನು ನಾಲಿಗೆ ಕಚ್ಚಿಕೊಂಡ. ಬದಿಯಲ್ಲಿ ನಿಂತು ಮಾತುಗಳನ್ನು ಮೌನವಾಗಿ ಆಲಿಸುತ್ತಿದ್ದ ಕಾಕಾ ಸಹ ಮಗನ ಅವಿವೇಕ ಕಂಡು ಗೊಂದಲಗೊಂಡ. ಅಷ್ಟರಲ್ಲಿ ಲಕ್ಷ್ಮಣ ಅಲ್ಲಿಗೆ ಬಂದ. ಸಂದರ್ಭದ ತೀವ್ರತೆ ಗಮನಿಸಿ ''ಏನು ಏನು'' ಎಂದು ಹತ್ತಿರ ಬಂದ. ಕಾಕಾ ತಕ್ಷಣ ಎಚ್ಚೆತ್ತು ತಮ್ಮನ್ನು ಸಂದಿಗ್ಧದಿಂದ ಪಾರುಮಾಡಿದ ಲಕ್ಷ್ಮಣನತ್ತ ನೋಡಿ ''ನೀನು ಇವನ ಜತೆ ಇರು'' ಎಂದು ಉದಯನಿಗೆ ಜೋಡಿ ಮಾಡಿ ತಾನು ''ಬೇಗ ಹೋಗಿಬಾರೋ'' ಎಂದು ಮಗನ ಮೇಲೆ ಸುಮ್ಮನೆ ಒಂದು ಕಣ್ಣುಬಿಟ್ಟ. ಗಿರೀಶ ಹುಂ ಅಂದವನೇ ಬೈಕಿನ ಹಿಂದೆ ಯಾರನ್ನೋ ಕರೆದು ಕೂರಿಸಿಕೊಂಡು 'ಡರ್' ಅಂತ ಹೋದಮೇಲೆ ಕಾಕಾ ಸಹ ಅಲ್ಲಿ ನಿಲ್ಲಲಿಲ್ಲ.

''ವಿಷಯ ಗೊತ್ತಾಯ್ತು'' ಲಕ್ಷ್ಮಣ ಹೇಳಿದ. ಅವನ ಧ್ವನಿಯಲ್ಲಿ ನಿರುದ್ವೇಗವಿತ್ತು.

''ಹುಂ. ಹೌದು'' ಉದಯ ತಲೆ ಆಡಿಸಿದ.

''ಎಲ್ಲಾ ಹೀಗೆ. ಒಂದು ದಿನ ಕೊಲೆ ಮಾಡಿದವನು, ಮಾಡಿಸುವವನು ತಾನೇ ಕೊಲೆಯಾಗುವುದರಲ್ಲಿ ಏನೂ ವಿಶೇಷವಿಲ್ಲ. ನನ್ನಿಂದಾಗದ ಕೆಲಸವನ್ನು ಬೇರೆ ಯಾರೋ ಮಾಡಿದ್ದಾರೆ ಅಷ್ಟೇ.''

ಲಕ್ಷ್ಮಣನ ರೋಷ ಅರ್ಥವಾಗುವಂತಹುದೇ. ಅಪ್ಪ ಇವನ ತಾಯಿಯನ್ನು ದುರುಪಯೋಗಪಡಿಸಿಕೊಂಡಿದ್ದ. ಹೆಚ್ಚು ಮಾತಾಡಿದರೆ ಎಲ್ಲರನ್ನೂ ಕೊಂದು ಹಾಕಿಯಾನು ಎಂಬ ಭಯ. ಪಾಪ, ಆಕೆಯ ಗಂಡ ಶೇಷಪ್ಪನ ನಡವಳಿಕೆ ಕಂಡು ನಡುಗಿಹೋಗಿದ್ದ. ಅಂತಸ್ತು, ಹಣ, ಜನಬಲ ಯಾವುದರಲ್ಲೂ ಸರಿ ಸಮವಲ್ಲದ ಆತ ಮೌನವಾಗಿ ಉಳಿದ. ಲಕ್ಷ್ಮಣನ ಮಾತಿನಲ್ಲಿ ಹೇಳುವುದಾದರೆ ''ನನ್ನಪ್ಪ ತುಂಬ ಸಭ್ಯ. ಪ್ರತೀಕಾರ ಮಾಡುವ ಮನೋಭಾವ ಅವನದಲ್ಲ. ಸಹಿಸಿದ ಅವಮಾನವನ್ನು''.

''ನಿನ್ನ ಹತಾಶೆ ನನಗೆ ಅರ್ಥವಾಗುತ್ತದೆ'' ಉದಯ ಸಂತೈಸಿದ. ''ಈಗಲೂ ನೀನು ನಿನ್ನಪ್ಪನ ಮಗ ಎಂದು ಜನ ಗುರುತಿಸುವ ಹಾಗೆ ನನ್ನನ್ನು ಸಹ ನನ್ನಪ್ಪನ ಮಗ ಎಂದು ಗುರುತಿಸುವಂತಾಗಿದ್ದರೆ ನಾನೆಷ್ಟೋ ನಿರಾಳವಾಗಿರಲು ಸಾಧ್ಯವಿತ್ತು. ಆದರೆ ಹಾಗೆ ಆಗಲಿಲ್ಲ ಅನ್ನುವುದೇ ವ್ಯಥೆ.''

ಅಷ್ಟು ಹೊತ್ತಿಗೆ ''ಭಟ್ರು ಬಂದಿದಾರೆ. ಕರೀತಿದಾರೆ'' ಎಂದು ಒಬ್ಬ ಹುಡುಗ ಓಡಿಬಂದು ಹೇಳಿದಾಗ ಉದಯ ಮೌನವಾಗಿ ಅವನ ಹಿಂದೆ ಸಾಗಿದ. ಅಲ್ಲಿ ಈಗಾಗಲೇ ತುಂಬ ಜನ ಸೇರಿದ್ದಾರೆ. ಅವನು ವಿವರವಾಗಿ ಅವರೆಲ್ಲರ ಮುಖ ನೋಡಿದ. ಯಾರಿಗೂ ಶೇಷಪ್ಪ ಇಲ್ಲವಾದ ಬಗ್ಗೆ ಸಂತಾಪವಾಗಿದೆ ಅನಿಸಲಿಲ್ಲ. ಅವನೊಂದಿಗೆ ಇವರೆಲ್ಲ ರಕ್ತ ಸಂಬಂಧಿಗಳು ಸ್ನೇಹಿತರು. ಅಭಿಮಾನಿಗಳು ಮತ್ತು ಅಪ್ಪನ ಋಣದಲ್ಲಿ ಬಿದ್ದವರು. ಇಷ್ಟಲ್ಲದೆ ಜಗಳವಾಡಿದವರು, ಬೈದಾಡಿದವರು, ಇನ್ನು ಏಳೇಳು ಜನ್ಮಕ್ಕೂ ಸಂಬಂಧ ಮುಗಿಯಿತು ಎಂದು ಸಾರ್ವಜನಿಕವಾಗಿ ಘೋಷಿಸಿ ಎಳ್ಳುನೀರು ಬಿಟ್ಟೆ ಅಂದಿದ್ದವರು. ಎಲ್ಲರೂ ಅಲ್ಲಿದಾರೆ. ಯಾಕೆ? ಭಯದಿಂದಲೇ! ಈತ ಸತ್ತಿರೋದು ನಿಜವಾ ಸುಳ್ಳಾ ಎಂದು ಖಾತರಿ ಮಾಡಿಕೊಳ್ಳಲೆಂದೆ ?

ಕೊಲೆಯಾಗಿದ್ದರೂ ಅಪ್ಪನ ಮುಖದಲ್ಲಿ ಭಯಾನಕ ಕಳೆ ಇರಲಿಲ್ಲ. ಜೀವಂತ ಇರುವಾಗ ಆತ ಮನಸ್ಸಿನಲ್ಲಿ ಭೀಕರ ಯೋಜನೆಗಳನ್ನು ಹೊಂದಿದ್ದರೂ ಹೊರನೋಟಕ್ಕೆ ಅತೀ ಶೀತಲವಾಗಿ ಕಾಣುತ್ತಿದ್ದ. ಈಗ ಅವನ ಮಗನಾಗಿ ತನಗೆ ಸಿಗುವುದು ಏನು. ಕೇವಲ ಕುಖ್ಯಾತಿ ಮಾತ್ರವೇ ?

ಭಟ್ಟರು ಎದ್ದರು. ಅವರ ಕೆಲಸ

## ಹಾಯ್ಕುಗಳು

ಛಲ ಬಿಡದೆ ಸೂರ್ಯನ
ಬೆನ್ನು ಹತ್ತಿರುವ ಸೂರ್ಯಕಾಂತಿ
ನಮ್ಮೂರ ಘಾಟಿ ಹುಡುಗಿ

*   *   *

ಹಕ್ಕಿಗೆ ಹಣ್ಣುಗಳ ಕೊಟ್ಟ
ಆಲದ ಮರದ ಪೊಟರೆಯಲ್ಲಿ
ಹಾವಿಗೆ ಮೊಟ್ಟೆಗಳೂ ಇವೆ.

ಡಾ|| ಸಿ. ರವೀಂದ್ರನಾಥ್
ನಂ. 133, 5ನೇ ಕ್ರಾಸ್
2ನೇ ಹಂತ, ಬೃಂದಾವನ ಬಡಾವಣೆ, ಮೈಸೂರು

ಮುಗಿದಿತ್ತೆಂದು ಕಾಣುತ್ತದೆ. ''ಚಟ್ಟದ ವ್ಯವಸ್ಥೆ ಆಗಿದೆಯಾ'' ಎಂದು ಕೇಳುತ್ತ ಅವರು ಹೊರಬಂದಾಗ ಅಲ್ಲಿದ್ದ ಬಹುಪಾಲು ಜನ ಅವರನ್ನು ಹಿಂಬಾಲಿಸಿದರು. ಉದಯ ಸಹ ಅನಿವಾರ್ಯವಾಗಿ ಒಂಥರಾ ಹಿಂಸೆಪಡುತ್ತ ಸಾಗಿದ. ಆಗ ಇದ್ದಕ್ಕಿದ್ದಂತೆ ಗೂಳಿಯಂತೆ ನುಗ್ಗಿ ಬಂದ ಕಾಕಾ ಎದುರಿಗೆ ನಿಂತು ಕಣ್ಣು ಕೆಕ್ಕರಿಸಿ ''ಏನು ಹೊರಟೇಬಿಟ್ಟೆಯಲ್ಲ ನೀನೂ...'' ಎಂದ ಏರಿದ ಧ್ವನಿಯಲ್ಲಿ. ಒಂದು ರೀತಿ ಜಬರಿಸಿದಾಗ ಉದಯ ನಿರುಪಾಯನಾಗಿ ನಿಂತ. ಕಾಕಾ ಇಷ್ಟಕ್ಕೆ ಸುಮ್ಮನಾಗದೆ ''ನೀನು ಬಂದಾಗಿನಿಂದ ನೋಡ್ತಿದೀನಿ. ಸತ್ತ ನಿಮ್ಮಪ್ಪನಿಗೆ ಒಂದು ನಮಸ್ಕಾರ ಸಹ ಮಾಡಲಿಲ್ಲ'' ಎಂದು ಆಕ್ಷೇಪಿಸದೆ ಬಿಡಲಿಲ್ಲ. ಉದಯನಿಗೆ ವಿಸ್ಮಯ. ಈಗ ಸುಮ್ಮನಿದ್ದರೆ ಆರೋಪಿಯಾದೇನು ಎಂಬ ಪ್ರಜ್ಞೆಯಲ್ಲಿ ಸಾವಕಾಶವಾಗಿ ಉಸುರಿದ.

''ಸತ್ತವರನ್ನು ದ್ವೇಷಿಸುವಷ್ಟು ಕೃತಘ್ನ ನಾನಲ್ಲ.''

''ಅವನು ಹೋದ ಅಂತ ನಿನ್ನ ಕಣ್ಣಲ್ಲಿ ನೀರೂ ಬಂದಿಲ್ಲವಲ್ಲೋ ?''

''ಅಷ್ಟು ಪ್ರದರ್ಶಿಸಬೇಕಾದ ಅವಶ್ಯಕತೆ ಇಲ್ಲ.''

''ಸತ್ತವರು ದೇವರಿಗೆ ಸಮಾನ ಗೊತ್ತಾ ?''

''ಸತ್ತವರು ಒಣಗಿ ಹೋದ ಕೊರಡಿಗೆ ಸಮಾನ.''

''ಏನು ಮಾತಾಡುತ್ತಾನೆ ನೋಡಿ.'' ಕಾಕಾ ಕೆರಳಿ ಅಲ್ಲಿದ್ದವರನ್ನು ಧ್ವನಿ ಏರಿಸಿ ಗಮನಸೆಳೆದು ಮತ್ತೆ ಕೂಗಿದ ''ಅಪ್ಪ ಅಂದ್ರೆ ಈ ದೇಹ ಮಾತ್ರವಲ್ಲ ಗೊತ್ತಾ ನಿಂಗೆ ?''

''ಈ ದೇಹ ಜೀವ ಕಳೆದುಕೊಂಡಮೇಲೆ ಏನು ಅಂದುಕೊಂಡರೂ ನಡೆಯುತ್ತೆ.''

''ನೀನು ಹೀಗೆಲ್ಲ ಮಾತಾಡಿದರೆ ಸಮಾಜ ನಿನಗೆ ಬಹಿಷ್ಕಾರ ಹಾಕಿಬಿಟ್ಟೀತು ಹುಷಾರು.''

ಕಾಕಾನ ಆವೇಶ ನೋಡಿ ಉದಯನಿಗೆ ನಗು ಬರುವ ಹಾಗಾಯಿತು. ಕಷ್ಟಪಟ್ಟು ತಡೆದುಕೊಂಡ. ಹಿಂದೊಮ್ಮೆ ತಾನು ರಾತ್ರಿ ಸೆಕೆಂಡ್ ಶೋ ಸಿನಿಮಾ ನೋಡಿಬರುವಾಗ – ಕಾಕೂ ತೌರಿಗೆ ಹೋದವೇಳೆ – ಇದೇ ಕಾಕಾನ ಮನೆಯಿಂದ ಹೆಂಗಸೊಬ್ಬಳು ಹೊರಬಂದು ಮುಖ ಮುಚ್ಚಿಕೊಂಡು ಹೊಳೆಯ ಇಳಿಜಾರಿನ ದಾರಿಯಲ್ಲಿ ನಡೆದದ್ದು ನೋಡಿಬಿಟ್ಟಿದ್ದ. ಈ ಕಾಕಾನಿಗೆ ಬಹಿಷ್ಕಾರ ಹಾಕಲು ಈ ಕಾರಣ ಸಾಕಾದೀತೆ? ಉದಯನ ಮುಖದಲ್ಲಿ ಕಂಡೂಕಾಣದ ಮಂದಹಾಸ. ಈ ಅಣ್ಣ ತಮ್ಮ ಎಂಥವರು ಅಂತ ಊರಲ್ಲಿ ಯಾರಿಗೆ ಗೊತ್ತಿಲ್ಲ? ಈ ಕಾಕಾ ವಕೀಲ. ಅಣ್ಣನ ವಿರುದ್ಧ ಕಾನೂನು ಅಸಹಾಯಕವಾಗುವ ಹಾಗೆ ನೋಡಿಕೊಳ್ಳುವುದೇ ಈತನ ಕಸುಬು !

ಅಲ್ಲಿ ಕುಳಿತಿದ್ದವರ್‍ಯಾರೋ ''ಹೋಗಲಿ ಬಿಡಿ'' ಅಂದರು. ಇದರಿಂದ ಕಾಕಾ ಇನ್ನಷ್ಟು ಕೆರಳಿಬಿಟ್ಟ: ''ಅಲ್ರೀ ಅಪ್ಪನ ಬಗ್ಗೆ ಆದರ ಇಲ್ಲದೋನು ಅಪ್ಪ ಮಾಡಿದ್ದ ಆಸ್ತೀನ ಬಿಡತ್ತಾನ ಕೇಳಿ. ಬೇಕಾದ್ರೆ ದೇವರಾಣೆ ಮಾಡಿ ಹೇಳ್ತೀನಿ. ಅಪ್ಪನ ಹೆಣದ ಬೂದಿಯ ಬಿಸಿ ಆರುವ ಮೊದಲೇ ಆಸ್ತೀನೆಲ್ಲ ಇವನ ಹೆಸರಿಗೆ ಹೇಗೆ ಮಾಡಿಸಿಕೋತಾನೆ ನೋಡ್ತಿರಿ. ಇಂಥವರನ್ನೆಲ್ಲ ನಾನು ಬೇಕಾದಷ್ಟು ನೋಡಿದೀನಿ.''

ಅಷ್ಟರಲ್ಲಿ ಭಟ್ಟರು – ''ಸಾಕು. ಸಾಕು. ಹೆಣ ಎದುರಿಗಿಟ್ಟುಕೊಂಡು ಎಂಥದಿದು ?'' ಎಂದು ಗುಟುರು ಹಾಕಿದಾಗ ಕಾಕಾ ಬುಸುಗುಡುತ್ತ ತೆಪ್ಪಗಾದ. ''ನೀನು ಬಾರಪ್ಪ ಇಲ್ಲಿ'' ಎಂದು ತನ್ನನ್ನು ಕರೆದು ಭಟ್ಟರು ಪಾರು ಮಾಡಿದರು ಎಂದುಕೊಂಡ ಉದಯ. ಈ ಸಂದರ್ಭದಲ್ಲಿ ಮಾತಿನಲ್ಲಿ ಕಾವೇರುವುದು ಅವನಿಗೆ ನಿಜವಾಗಿ ಬೇಕಾಗಿರಲಿಲ್ಲ.

*  *  *

ಸ್ಮಶಾನದಿಂದ ಮನೆಗೆ ಬಂದಮೇಲೆ ಉಳಿದವರು ಮೂವರೇ. ಅಮ್ಮ ಅಡಿಗೆ ಮನೆಯಲ್ಲಿ ಖಿನ್ನಳಾಗಿ. ಮನೆಯ ಹೊರವಳದಲ್ಲಿ ತಾನು, ಜತೆಗೆ ಲಕ್ಷ್ಮಣ. ಅವನನ್ನು ನೋಡಿ ಪ್ರೀತಿಯಿಂದ ಕೇಳಿದ.

''ನೀನೇಕೆ ತಲೆ ಬೋಳಿಸಿಕೊಂಡದ್ದು ?''

''ನಮ್ಮಮ್ಮ ಒತ್ತಾಯ ಮಾಡಿದ್ದರಿಂದ.''

''............''

''ಊರಲ್ಲಿ ಎಲ್ಲರೂ ನನ್ನನ್ನು ಶೇಷಪ್ಪನ ಮಗ ಅಂತ ಗುರುತಿಸೋದು ನನಗೆ ಬೇಕಾಗಿಲ್ಲ. ಈ ನಿಮ್ಮಪ್ಪ ನನಗೂ ಅಪ್ಪ ಇರಬಹುದು. ಆದರೆ ನಾನು ಹುಟ್ಟುವ ಮೊದಲಿನ ಸಂದರ್ಭ ಹೇಗಿತ್ತು ಎಂದರೆ ಆತ ನಿಮ್ಮಮ್ಮನನ್ನೂ ಹೊತ್ತುಕೊಂಡು ಬಂದು ಬಲಾತ್ಕಾರದಿಂದ ಮದುವೆಯಾದ. ನೀನು ಹುಟ್ಟಿದರೂ ಅವನಿಗೆ ಸ್ವಂತದ್ದು ಬೇಕಾಗಿತ್ತು. ಆದರೆ ಮೂರು ವರ್ಷಗಳಾದರೂ ನಿನ್ನ ತಾಯಿಯ ಗರ್ಭ ನಿರಾಕರಿಸಿದಾಗ ಆತ ಹೌಹಾರಿದ. ತನ್ನ ತಾಕತ್ತಿನ ಬಗ್ಗೆ ಜನ ಆಡಿಕೊಳ್ಳುತ್ತಿದ್ದಾರೆ ಎಂಬ ಅನುಮಾನ. ತನ್ನ ಸಾಮರ್ಥ್ಯ ನಿರೂಪಿಸಲು ನನ್ನ ತಾಯಿಯನ್ನು ಪ್ರಯೋಗ ಪಶುವಾಗಿ ಬಳಸಿಕೊಂಡ. ಫಲಿತಾಂಶ ನಾನು. ನನ್ನ ಮುಖ ನೋಡಿ ತೃಪ್ತನಾಗಿ ಊರಲ್ಲಿ ಎದೆಯುಬ್ಬಿಸಿ ತಿರುಗಾಡಿದ. ಇಷ್ಟು ಬಿಟ್ಟರೆ ನನ್ನ ಮೇಲೆ ಮಮತೆ ಬೆಳೆಸಿಕೊಳ್ಳುವಂತಹ ಮನುಷ್ಯನಾಗಲಿಲ್ಲ ಅವನು.''

''ಗೊತ್ತಿದೆ.'' ಉದಯ ನಿಟ್ಟುಸಿರುಬಿಟ್ಟ.

''ಇನ್ನೊಂದು ಮಾತು ಹೇಳೋದಿದೆ.''

''ಹೇಳು.''

''ಇನ್ನು ಮೇಲೆ ಈ ಆಸ್ತೀನ ನೀನೊಬ್ಬನೇ ಅನುಭವಿಸೋಕೆ ನಾನು ಬಿಡಲ್ಲ.



ನನ್ನ ಪಾಲು ನನಗೆ ಸಿಗಲೇಬೇಕು.''

''ನನಗಿದೆಲ್ಲ ಬೇಕಾಗಿಲ್ಲ.''

''ನೀನು ಹೀಗೆ ಹೇಳ್ತೀಯ ಅಂತ ನನಗೆ ಗೊತ್ತು. ನೀನು ಬೇಡ ಅನ್ನುವುದನ್ನೇ ಆ ಅಪ್ಪ ಮಗ ಕಾಯುತ್ತಿದ್ದಾರೆ. ಈಗಾಗಲೇ ಅವರು ಏನೋ ತಂತ್ರ ಮಾಡುತ್ತಿರುವ ಹಾಗಿದೆ.''

''ನನಗೆ ಆಸಕ್ತಿ ಇಲ್ಲ.''

''ಆಸ್ತಿ ವಿಷಯ ಅನಾದರ ಮಾಡುವ ಹಾಗಿಲ್ಲ. ಶೇಷಪ್ಪನಿಗೆ ನಾವಿಬ್ಬರೂ ಅನಧಿಕೃತ ಮಕ್ಕಳೇ ತಾನೆ ? ಹಾಗೇ ಅನಧಿಕೃತ ಆಸ್ತಿಯೂ ಬೇಕಾದಷ್ಟಿದೆ. ನಾವು ಮೊದಲು ಅವನ್ನೆಲ್ಲ ಕೈವಶ ಮಾಡಿಕೊಳ್ಳಬೇಕು. ಆ ಕಾಕಾ, ನೀನು ಶೇಷಪ್ಪನ ಮಗ ಅಲ್ಲ ಎಂದು ವಾದ ಹೂಡಿದರೂ...''

''ಅವರ ವಾದ ನಿಜ ತಾನೆ ?''

''ಇರಬಹುದು. ಆದರೆ ಶೇಷಪ್ಪ ನಮ್ಮ ತಾಯಂದಿರ ಶೋಷಣೆ ಮಾಡಿದ್ದಕ್ಕೆ ಪರಿಹಾರ ಕಕ್ಕಿಸೋದು ಬೇಡವೆ !''

ಈ ಸತ್ಯವನ್ನು ಅರಗಿಸಿಕೊಳ್ಳಲಾಗದೆ ಉದಯ ಲಕ್ಷ್ಮಣನ ಮುಖ ನೋಡಿದ. ಅಲ್ಲಿ ನಿರ್ಧಾರ ಗಟ್ಟಿಯಾದ ಮನೋಭಾವವಿತ್ತು.

ರಾಮಚಂದ್ರ ಭಾವೆ
ನಂ. ೭ಬಿ, ರಾಮಚಂದ್ರ ಅಪಾರ್ಟ್‌ಮೆಂಟ್ಸ್, ಕಾಂಗ್ರೆಸ್ ಭವನದ ಹತ್ತಿರ, ರತ್ನಗಿರಿ (ಮಹಾರಾಷ್ಟ್ರ)



ನಭಾವಲೋಕನ

# ಛಾಯಾಗ್ರಾಹಕರಿಗೆ ವಿಶೇಷ ಅವಕಾಶಗಳು

**ಈ** ತಿಂಗಳಲ್ಲಿ ಆಕಾಶ ಶುಭ್ರವಾಗಿರುವುದು ಖಂಡಿತ. ಆದ್ದರಿಂದ ಕ್ಯಾಮೆರಾ ಸಜ್ಜು ಮಾಡಿಟ್ಟುಕೊಳ್ಳಿ; ಹಲವಾರು ಅವಕಾಶಗಳಿವೆ. ತಿಂಗಳ ಆರಂಭದಲ್ಲಿ ಮಂಗಳ ಮುಖ್ಯ ಆಕರ್ಷಣೆ. ಕಿತ್ತಲೆ ಬಣ್ಣದ ಈ ಚುಕ್ಕೆಯನ್ನು ಸಂಜೆ ಪೂರ್ವದಲ್ಲಿ ಸುಲಭವಾಗಿ ಗುರುತಿಸಬಹುದು. ದೂರದರ್ಶಕ ಬಳಸಿದರೆ ಅದರ ಹಿಮಟೋಪಿಗಳು ಕಾಣುವ ಸಾಧ್ಯತೆ ಇದೆ. ಎರಡು ತಿಂಗಳ ಹಿಂದೆ ಇದು ಪ್ರೆಸಿಪಿ ಎಂಬ ನಕ್ಷತ್ರಗುಚ್ಛವನ್ನು ಹಾದುಹೋಗಿತ್ತು. ಆಗ ಮಳೆ ಮೋಡದ ಕಾಟದಿಂದ ನೋಡುವ ಅವಕಾಶ ಸಿಗಲಿಲ್ಲ. ಈಗ ಪುನಃ ಅದು ಹಿಂತಿರುಗಿ ಅಲ್ಲಿಗೇ ಬಂದಿದೆ. 'ಹಿಂತಿರುಗಿ' ಎಂಬುದು ಸೂಕ್ತವಾದ ಶಬ್ದ; ಏಕೆಂದರೆ ಅದು ಹಿನ್ನಡೆಯಲ್ಲಿದೆ; ಅಂದರೆ ಭೂಮಿ ಅದನ್ನು ಹಿಂದೆ ಹಾಕಿ ಮುಂದೆ ಓಡುತ್ತಿದೆ. ರಾತ್ರಿ ಇಡೀ ನೋಡುವ ಅವಕಾಶವಿದೆ.

ಈ ತಿಂಗಳ ಇನ್ನೊಂದು ವಿಶೇಷ ಗುರು ಮತ್ತು ಶುಕ್ರಗಳ ಸಂಗಮ. ಸಂಜೆಯ ಆಕಾಶದಲ್ಲಿ ಪಶ್ಚಿಮದ ಅಂಚಿನಲ್ಲಿ ಸಂಜೆಗೆಂಪಿನಲ್ಲಿ ಈ ಎರಡು ಚುಕ್ಕೆಗಳನ್ನು ಗುರುತಿಸಬಹುದು. ವಾಸ್ತವವಾಗಿ ೧೬ರಂದು ಅವೆರಡೂ ಅಂಟಿಕೊಂಡಂತೆ ಕಾಣುವುದಾದರೂ ತಿಂಗಳ ಮೊದಲಿನಿಂದಲೇ ಅವುಗಳ ಆಟವನ್ನು ನೋಡಬಹುದು. ತಿಂಗಳ ಕೊನೆಗೆ ಗುರು ಮಾಯವಾಗಿ ಶುಕ್ರ ಮಾತ್ರ ಕಾಣುತ್ತದೆ. ಸಂಜೆಯ ಆಕಾಶದಲ್ಲಿ ಪೂರ್ವಕ್ಕೆ ಮಂಗಳ; ಪಶ್ಚಿಮಕ್ಕೆ ಶುಕ್ರ. ಮಧ್ಯರಾತ್ರಿಗೆ ಸ್ವಲ್ಪ ಮುನ್ನ ಉದಯಿಸುವ ಶನಿ ಈಗ ತನ್ನ ಉಂಗುರಗಳ ಪ್ರದರ್ಶನಕ್ಕೆ ಸಿದ್ಧವಾಗುತ್ತಿದೆ. ಶನಿಗ್ರಹ ಇರುವುದು ಕನ್ಯಾರಾಶಿಯಲ್ಲಿ; ಅದರ ಸಮೀಪದ ನೀಲಿ ಬಣ್ಣದ ಚಿತ್ರಾ ನಕ್ಷತ್ರವನ್ನು ಹುಡುಕುವುದೇನೂ ಕಷ್ಟವಿಲ್ಲ. ದೂರದರ್ಶಕ ಇರುವವರು ಈ ನಕ್ಷತ್ರದ ತುಸು ಉತ್ತರಕ್ಕೆ ಕಣ್ಣಾಡಿಸಿದರೆ ಧೂಮಕೇತುವೊಂದು ಕಾಣುವುದು. ಹಾಗೆಯೇ ವೆಸ್ತಾ ಎಂಬ ಕ್ಷುದ್ರಗ್ರಹವೂ ಕಾಣುವುದು. ಇವೆರಡೂ ಚುಕ್ಕೆಗಳ ಹಾಗೆ ಕಾಣುವುದರಿಂದ ದಿನೇ ದಿನೇ ಅವುಗಳ ಚಲನೆಯನ್ನು ಪತ್ತೆ ಮಾಡಿದಲ್ಲಿ ಮಾತ್ರ ಅವು ನಕ್ಷತ್ರಗಳಲ್ಲ ಎಂದು ಕಂಡುಹಿಡಿಯಬಹುದಷ್ಟೇ. ಛಾಯಾಗ್ರಾಹಕರಿಗೆ ಇದೊಂದು ಸವಾಲು!




ಬುಧ ಬೆಳಗಿನ ಜಾವ ದಿಗಂತದ ಅಂಚಿನಲ್ಲಿ ಕಾಣುತ್ತದೆ.

ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಗಳಲ್ಲಿ ಮುಖ್ಯ ಆಕರ್ಷಣೆ ಒರೈಯನ್ - ಮಹಾವ್ಯಾಧ ನಕ್ಷತ್ರ ಪುಂಜ. ಅದರ ಸುತ್ತಲಿನ ವೃಷಭ, ವಿಜಯಸಾರಥಿ (ಆರಿಗ), ಮಿಥುನ ಇವುಗಳೂ ಪ್ರಕಾಶಮಾನವಾದವು. ಅತಿ ಪ್ರಕಾಶಮಾನವಾದ ಲುಬ್ಧಕ (ಸಿರಿಯಸ್) ಮತ್ತು ಅಗಸ್ತ್ಯ (ಕೆನೋಪಸ್) ಇವನ್ನು ಸುಲಭವಾಗಿ ಗುರುತಿಸಬಹುದು. ಈ ಭಾಗಕ್ಕೆ ಹೋಲಿಸಿದರೆ ಪಶ್ಚಿಮ ಖಾಲಿ ಎನ್ನಿಸಬಹುದು. ನೆತ್ತಿಯ ಮೇಲೆ ಕಾಣುವ ಚೌಕವೇ ನಕುಲ (ಪೆಗಸಸ್). ಉತ್ತರದಲ್ಲಿ ಕುಂತಿ, ಪಾರ್ಥ ಮತ್ತು ದ್ರೌಪದಿ ಕಾಣುವುವು.

**ಖಗೋಳ ದಿನಚರಿ**

೨ ಶನಿ ಚಂದ್ರ ಜೋಡಿ*
೫ ಚಾಂದ್ರಮಾಸದ ಕೊನೆಯ ಪಾದ
೬ ಮಂಗಳದ ಪಕ್ಕ ಪ್ರೆಸಿಪಿ ಗುಚ್ಛ*
೮ ಚಂದ್ರ - ಜ್ಯೇಷ್ಠಾ ಜೋಡಿ*
೧೨ ಚಂದ್ರ - ಬುಧ ಜೋಡಿ*
೧೩ ಚಂದ್ರ - ಭೂಮಿ ನಡುವೆ ಗರಿಷ್ಠ ದೂರ
೧೪ ಅಮಾವಾಸ್ಯೆ ೦೮:೨೧ಕ್ಕೆ
೧೫ ಶುಕ್ರ - ಗುರು - ಚಂದ್ರ ಪುಟ್ಟ ಗುಂಪು*
೧೬ ಶುಕ್ರ - ಗುರು ನಡುವೆ ಕನಿಷ್ಠ ಕೋನ*
೨೧ ಚಂದ್ರ - ಕೃತ್ತಿಕಾ ಜೋಡಿ*
೨೨ ಚಾಂದ್ರಮಾಸದ ಮೊದಲ ಪಾದ
೨೪ ಡೆಲ್ಟಾ ಲಿಯೋನಿಡ್ಸ್ ಉಲ್ಕಾವೃಷ್ಟಿ
೨೬ ಮಂಗಳ ಚಂದ್ರ ಜೋಡಿ*
೨೭ ಚಂದ್ರ - ಭೂಮಿ ನಡುವೆ ಕನಿಷ್ಠ ದೂರ
೨೮ ಗುರು ಗ್ರಹದ ಯುತಿ; ಹುಣ್ಣಿಮೆ ೨೨:೦೮ಕ್ಕೆ

(* ಛಾಯಾಗ್ರಹಣಕ್ಕೆ ಸದವಕಾಶ)



೧೬ರ ಸಂಜೆ ಗುರು, ಶುಕ್ರ ಮತ್ತು ಚಂದ್ರ



೨೧ರ ಸಂಜೆ ಚಂದ್ರ ಮತ್ತು ಕೃತ್ತಿಕಾ

**ಡಾ॥ ಬಿ. ಎಸ್. ಶೈಲಜಾ**
ಜವಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಗ್ರಾಹಕ ಡಯಟಿಂಗ್

**ಪ್ರೊ॥ ಎಮ್. ಆರ್. ನಾಗರಾಜು**

ನೀವು ಯಾವುದೋ ಸಭೆಯಲ್ಲಿ ಭಾಗವಹಿಸುತ್ತಿದ್ದೀರಿ ಎನ್ನೋಣ. ಅಲ್ಲಿ ಸೇರಿರುವ ಮಂದಿಯ ಪೈಕಿ ನಿಮ್ಮ ಗಮನ ಸೆಳೆಯುವವರು ಭಾರಿ ಆಕಾರದವರು. ಸ್ಥೂಲಕಾಯದವರನ್ನು ಗೇಲಿ ಮಾಡುವವರು ಕೆಲವರಾದರೆ ಕನಿಕರಿಸುವವರು ಕೆಲವರು. ಅವರ ಜೀವನ ಶೈಲಿಯ ಬಗ್ಗೆ ಅಪಸ್ವರ ಎತ್ತುವವರು ಮತ್ತೆ ಕೆಲವು ಮಂದಿ. ಏನೇ ಆಗಲಿ, ಸ್ಥೂಲಕಾಯ ವಿಭಿನ್ನ ಮಾತ್ರವಲ್ಲ, ವಿಕಾರ ಕೂಡ ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಏಕೆಂದರೆ ಸ್ಥೂಲಕಾಯ ದೈನಂದಿನ ಚಟುವಟಿಕೆಗಳನ್ನು ಚುರುಕಾಗಿ ಮಾಡಲು ಅಡ್ಡಿ.

ಇದಿಷ್ಟೇ ಅಲ್ಲದೆ ಈಚಿನ ದಿನಗಳಲ್ಲಿ ಸ್ಥೂಲಕಾಯ ಕುರಿತಂತೆ ಅಂಜಿಕೆಯೂ ಪ್ರಾರಂಭವಾಗಿದೆ. ಏಕೆಂದರೆ ಸ್ಥೂಲಕಾಯದವರಿಗೆ ರೋಗ ಬರುವ ಸಾಧ್ಯತೆ ಹೆಚ್ಚು ಎಂದು ಸಂಶೋಧನೆಗಳು ಮತ್ತೆ ಮತ್ತೆ ರುಜುವಾತು ನೀಡಿವೆ. ಇನ್ನೂ ಮುಂದೆ ಸಾಗಿ, ಸ್ಥೂಲಕಾಯವೇ ಒಂದು ರೋಗ ಎಂದು ಭಾವಿಸುವ ಮಟ್ಟಕ್ಕೂ ನಾವು ತಲುಪಿದ್ದೇವೆ.

ಇದಕ್ಕೆ ಪ್ರತಿಕ್ರಿಯೆಯಾಗಿ ಬೊಜ್ಜು ಕರಗಿಸುವ ಪ್ರಯತ್ನವನ್ನೂ ಮಾಡುತ್ತೇವೆ. ಮಿತ ಆಹಾರ ಸೇವನೆ, ವ್ಯಾಯಾಮ ಇತ್ಯಾದಿ ಪ್ರಯತ್ನಗಳನ್ನು ನಮಗೆ ಇರುವ ವೇಳೆ, ಹಾಗೂ ನಮ್ಮ ಸಾಮರ್ಥ್ಯದ ಮಿತಿಯಲ್ಲಿ ಕೈಗೊಳ್ಳುತ್ತೇವೆ. ಆದರೆ ಹೀಗೆ ಮಾಡುವಾಗ ಅನುವಂಶಿಕತೆ ಎಂಬ ಅಂಶ ಇದೆ ಎಂಬ ತಥ್ಯ ನಮಗೆ ನೆನಪಾಗುವುದಿಲ್ಲ. ಶರೀರದ ತೂಕ/ಗಾತ್ರವನ್ನು ಆನುವಂಶಕತೆಯೂ ನಿರ್ಧರಿಸುತ್ತದೆ. ನಮ್ಮ ಎಲ್ಲ ಕಸರತ್ತು, ಗೈರತ್ತು ಮತ್ತು ಕರಾಮತ್ತುಗಳನ್ನೂ ನಮ್ಮ ದೇಹ ಸ್ರವಿಸುವ ಹಾರ್ಮೋನುಗಳು ಬುಡಮೇಲು ಮಾಡಿಬಿಡುತ್ತವೆ.

ಈ ಪ್ರಯತ್ನಕ್ಕೆ ಮುಂದಿನ ವಿಕೃತಿಯೂ ಇದೆ. ಈಗ ಬೊಜ್ಜು ನಿವಾರಣೆಯ ವ್ಯಾಪಾರೀಕರಣವೂ ನಡೆದಿದೆ. ಅದರ ಸಲುವಾಗಿ ಔಷಧಿಗಳು, ವೈದ್ಯರು, ಸಂಸ್ಥೆಗಳು, ಜಾಹೀರಾತುಗಳು ಏನೆಲ್ಲಾ ಸಾಗಿದೆ. ವ್ಯಾಪಾರವೆಂದಮೇಲೆ ಅನಗತ್ಯವಾದುದನ್ನು/ಅಸಾಧ್ಯವಾದುದನ್ನು ಅಗತ್ಯ ಮತ್ತು ಸಾಧ್ಯವೆಂದು ಪ್ರಚಾರ ನೀಡುವುದೂ ಅನಿವಾರ್ಯ. ಸೌಂದರ್ಯಕ್ಕಾಗಿ, ಸೌಕರ್ಯಕ್ಕಾಗಿ, ಸೌಷ್ಠವಕ್ಕಾಗಿ ಮತ್ತು ಆರೋಗ್ಯವರ್ಧನೆಗಾಗಿ ತೆಳ್ಳಗಾಗಿ/ಹಗುರಾಗಿ ಎಂಬ ಘೋಷಣೆ ನೀಡಿ ಜೇಬನ್ನು ಹಗುರಮಾಡುವ ವ್ಯಾಪಾರ ನಡೆದಿದೆ.

ಸ್ಥೂಲಕಾಯದ ಬಗೆಗೆ ಉಪೇಕ್ಷೆ ಮಾಡಬೇಕೆಂಬುದು ಈ ವಿಚಾರಸರಣಿಯ ಆಶಯವಲ್ಲ. ಆದರೆ ಆನುವಂಶಿಕತೆಯ ಅಸಹಾಯಕತೆ ಇರುವುದನ್ನು ಜನರು ಮರೆತಿದ್ದಾರಲ್ಲ/ಮರೆಸಲಾಗುತ್ತಿದೆಯಲ್ಲಾ– ಎಂಬುದಷ್ಟೇ ಲೇಖಕನ ಆತಂಕ. ನೀವೇನೆನ್ನುತ್ತೀರಿ?

ಇಷ್ಟೆಲ್ಲಾ ಚರ್ಚೆ/ವಿವಾದ/ವ್ಯಾಪಾರ ಸ್ಥೂಲಕಾಯ ಕುರಿತಂತೆ ಆಗುತ್ತಿರುವ ಹಾಗೆಯೇ ನಾವು ವಾಸಮಾಡುವ ಮನೆ, ನಾವು ಬಳಕೆ ಮಾಡುವ ಸಾಮಗ್ರಿಗಳು ಅನಗತ್ಯವಾಗಿ ಹೆಚ್ಚಳಗೊಂಡಿರುವುದನ್ನು ಗಮನಿಸಿ, ಸ್ಥೂಲಕಾಯ ಎಂದರೇನು? 'ಆಪದ್ಧನ'ವಾಗಿ ದೇಹ ಕೈಗೊಳ್ಳಬೇಕಾದ ಮಿತ ಸಂಗ್ರಹ ಅತಿಯಾಗಿ ದೇಹದ ಅಸ್ತಿತ್ವಕ್ಕೇ ಸಂಚಕಾರವಾಗಿರುವುದು. ಹಾಗೆಯೇ ಬರಬಹುದಾದ ತೊಂದರೆಗೆ ಅತಿಯಾಗಿ ಪ್ರತಿಕ್ರಿಯೆ ನೀಡಿ, ಅಗತ್ಯಕ್ಕೂ ಮೀರಿ ಸಂಗ್ರಹಿಸುವ ಸಂಪತ್ತು – ವೈಯಕ್ತಿಕ ಮಟ್ಟದಲ್ಲಿ, ಕೌಟುಂಬಿಕ ಮಟ್ಟದಲ್ಲಿ, ರಾಷ್ಟ್ರ ಮಟ್ಟದಲ್ಲಿ ಸ್ಥೂಲಕಾಯವಲ್ಲವೆ?

ಸ್ಥೂಲಕಾಯವಾದರೋ, ಆನುವಂಶಿಕ ಅಂಶಗಳಿಂದಲೂ ಆಗುವುದರಿಂದ ಅಪರಿಹಾರ್ಯ – ಕೆಲವರ ಮಟ್ಟಿಗೆಯಾದರೂ! ಆದರೆ ಸಹಜವಾಗಿ ಸರಳವಾಗಿ ಆಲೋಚಿಸಿದಾಗ ಅಗತ್ಯವೆನಿಸುವ ವಿಚಾರ ಸಾಧ್ಯವಿದ್ದರೂ ಸಂಗ್ರಹಿಸುವ ಚಟವನ್ನೂ ಸ್ಥೂಲಕಾಯವೆನ್ನುವುದಾದರೆ, ಅದು ಕೇವಲ ಅನುಕರಣೆಯೇ ವಿನಾ ಆನುವಂಶಿಕ ಕಾರಣದಿಂದ ಬಂದದ್ದಲ್ಲ. ಹೀಗಾಗಿ ಭೋಗ ಸಾಮಗ್ರಿಗಳ ಮತ್ತು ಸಂಪತ್ತಿನ ಅತಿ ಸಂಗ್ರಹ ವಿಕಾರವಾದರೂ ಆ ಬಗ್ಗೆ ನಮಗೆ ಹೆಮ್ಮೆ.

ಸ್ಥೂಲಕಾಯದಲ್ಲಿ ಕೊಬ್ಬು ಸಹಜ ಅನುಪಾತ ಮೀರಿದರೆ ಅದು ಮತ್ತಷ್ಟು ವಿಕಾರ. ಈಗ ನಮ್ಮ ಸುತ್ತಣ ಸಮಾಜವನ್ನು ಈ ದೃಷ್ಟಿಯಿಂದ ನೋಡಿ ದೇಹದ ಸ್ಥೂಲತೆಯ ಹಾಗೆ ಸಂಪತ್ತಿನ ಸ್ಥೂಲತೆಯೂ ವಿತರಣಗೊಂಡಿರುವ ರೀತಿ ಸಾಮಾಜಿಕ ವಿಕಾರ ಮಾತ್ರವಲ್ಲ, ಅದು ಅನಾರೋಗ್ಯದ ಲಕ್ಷಣ ಮತ್ತು ರೋಗ ಬರಲಿರುವ ಮುನ್ಸೂಚನೆ ಎನಿಸುವುದಿಲ್ಲವೆ? ಸ್ಥೂಲಕಾಯದವರನ್ನು 'ಧಡಿಯ' ಎಂದು ಗೇಲಿಮಾಡುವ ಹಾಗೆ ಅನಗತ್ಯ ಪ್ರಮಾಣದಲ್ಲಿ ಸಂಪತ್ತನ್ನು/ಸಾಧನಸಲಕರಣೆಗಳನ್ನು ಶೇಖರಿಸಿರುವವರನ್ನು ಡಾ॥ ರಾಜರತ್ನಮ್ ಅವರು ರತ್ನನ ಪದಗಳಲ್ಲಿ 'ದುಡ್ಡಿನ ಡಬ್ಬಿ' – ಎಂದು ಗೇಲಿಮಾಡಿದರು. ಹಾಗೆ ಮಾಡುವ ನೈತಿಕಸ್ಥೈರ್ಯ ನಮ್ಮಲ್ಲಿ ಉಳಿದಿದೆಯೇ?

ರೂಪಕಾರ್ಥದ ಈ ಸ್ಥೂಲಕಾರ್ಯ ಸಾಮಾಜಿಕ ಅನಾರೋಗ್ಯವಾಗಿ ಈಗಾಗಲೇ ಪರಿಣಮಿಸಿರುವ ಬಗೆಗೆ ಹೆಚ್ಚಿಗೆ ಹೇಳಬೇಕಾಗಿಲ್ಲ. ಆದರೂ ಜಾಣಕಿವುಡು/ಜಾಣಮರೆವು ಉಂಟುಮಾಡಿರುವ ನಾವೂ ಸಿರಿವಂತರಾಗಬೇಕೆಂಬ ಹಂಬಲವಿರುವ ಕಾರಣ ನೆನಪು ಮಾಡಿಕೊಡಲಾಯಿತು.

ಆದರೆ ಸಾಮಾಜಿಕರ ಅತಿ ಸಂಗ್ರಹದ ಪರಿಣಾಮ ಮಾನವಸಮಾಜದ ಮೇಲೆ ಆಗುವುದು ಎಂಬುದು ಸೀಮಿತವಾದ ವಿವರಣೆ ಮಾತ್ರ. ಸಾಮಾಜಿಕ ಪರಿಸರವೇ ಅಲ್ಲದೆ ವಿಶೇಷವಾಗಿ ಜೀವಿಗೋಲದ ಅಸ್ತಿತ್ವಕ್ಕೇ ಸಂಚಕಾರ ತರುವ ಹುಚ್ಚಾಟ. ಮಾನವ ಮಾಡಿಕೊಂಡ ಈ ವಿಕೃತ ಜೀವನಶೈಲಿಗೆ ನಾವು ಕಂಡಿರದ, ಕೇಳಿರದ ಮುಗ್ಧ ಪ್ರಾಣಿಗಳು, ಅನೇಕ ಸಸ್ಯವರ್ಗಗಳು ನಾಮಾವಶೇಷವಾಗಿರುವುದು – ಆ ಬಗ್ಗೆ ನಮ್ಮ ಅವಜ್ಞೆ ಬಹಳ ಮುಜುಗರದ ಕ್ರೌರ್ಯ!

ನೈಸರ್ಗಿಕ ಸಂಪನ್ಮೂಲದ ನಾಶಕ್ಕೆ ಕಾರಣವಾಗಿ ಜನಸಂಖ್ಯೆಯ ಹೆಚ್ಚಳವನ್ನೇ ಮತ್ತೆ ಮತ್ತೆ ಹೇಳುವುದು ರೂಢಿ. ಆದರೆ ಆ ಕಾರಣದ ಹಿಂದೆ ಜೀವನ ಶೈಲಿಯಲ್ಲಿ ಆಗಿರುವ ಬದಲಾವಣೆಯನ್ನು ಬಚ್ಚಿಡಲು ಸಾಧ್ಯವಿಲ್ಲ. ಜೀವನ ಶೈಲಿಯ ಬದಲಾವಣೆಯಿಂದಾದ ಅನಾಹುತಗಳನ್ನು ಜನಸಂಖ್ಯೆಯ ಹೆಚ್ಚಳ ಮತ್ತಷ್ಟು ಅಪಾಯಕಾರಿಯಾಗಿಸುವುದು!

ಆಧುನಿಕ ಜೀವನ ಶೈಲಿಗೆ ಬೇಕಾಗುವ ಗ್ರಾಹಕ ಸಾಮಗ್ರಿಗಳು ನಿಸರ್ಗ ಲಭ್ಯ ವಸ್ತುಗಳನ್ನು ವಿಶೇಷವಾಗಿ ಸಂಸ್ಕರಿಸಿದಂತಹವು. ಸಂಸ್ಕರಿಸಿ ಬಳಕೆಯಾದ ಮೇಲೆ ಎಂದಾದರೊಂದುದಿನ ತ್ಯಾಜ್ಯವಾಗಬೇಕಲ್ಲವೆ? ಆ ತ್ಯಾಜ್ಯ ಮತ್ತೆ ನಿಸರ್ಗದೊಂದಿಗೆ ಕೂಡಿಕೊಳ್ಳುವುದಿಲ್ಲ. ಅಷ್ಟೇ ಅಲ್ಲ, ನಿಸರ್ಗದ ಜೀವಂತಿಕೆಯನ್ನು ಹಾಳುಗೆಡಹುತ್ತದೆ. ಒಂದು ಉದಾಹರಣೆಯನ್ನು ಗಮನಿಸೋಣ. ಮನೆ ಕಟ್ಟಲು

ಮಣ್ಣಿನ ಬಳಕೆ ಆಗುತ್ತಿತ್ತು. ಆ ಮನೆ ಬಿದ್ದುಹೋದಾಗ ಅದೇ ಮಣ್ಣನ್ನು ಜಮೀನಿಗೆ ಹಾಕಿದರೆ, ಆ ಜಮೀನಿನ ಮಣ್ಣಿನೊಂದಿಗೆ ಹೊಂದಿಕೊಳ್ಳುತ್ತಿತ್ತು. ಆದರೆ ಸಿಮೆಂಟಿನ ಬಳಕೆ ಮಾಡಿದ ಫಲವಾಗಿ ಬಿದ್ದುಹೋದ ಮನೆಯ ಅವಶೇಷಗಳು ಶಾಶ್ವತ ಮಲಿನಕಾರಿಗಳು. ಇನ್ನು ಟೈಲ್‌ಗಳ ಬಳಕೆ ಮತ್ತೂ ಅಪಾಯಕಾರಿ ಮಾಲಿನ್ಯಕ್ಕೆ ಕಾರಣ. ಮನೆ ಕಟ್ಟುವಾಗಲೇ ಈ ಫಲಕಗಳು (ಟೈಲ್ಸ್) ಪುಡಿಯಾಗಿ ಅವನ್ನು ವಿಲೇವಾರಿ ಮಾಡುವುದೇ ದೊಡ್ಡ ತಲೆನೋವು.

ಸಂಪತ್ತಿನ ಬೊಜ್ಜಿಲ್ಲದ ರಾಜಕಾರಣಿ, ಅಧಿಕಾರಿ, ಧರ್ಮಾಧಿಕಾರಿಗಳು ಮಾನ್ಯತೆ ಗಳಿಸುವುದು ಹಾಗಿರಲಿ ಅಸ್ತಿತ್ವದಲ್ಲಿರಲೂ ಸಾಧ್ಯವಿಲ್ಲ. ಭಗವಾನ್ ಬುದ್ಧ ಸಾಮಾಜಿಕ ಕೆಡುಕುಗಳಿಗೆ 'ಅನಾತ್ತ' (ಅನಾತ್ಮ) ಅಂದರೆ ಜೀವಕ್ಕೆ ಅಗತ್ಯವಿಲ್ಲದುದರ ಬಗೆಗೆ ವ್ಯಾಮೋಹ ಕಾರಣವೆಂದು ಹೇಳಿದ. ಹಿಂದೂ ಧರ್ಮದ ಅಪರಿಗ್ರಹ, ಜೈನರ ಅಸಂಗ್ರಹ ಎಲ್ಲವೂ ಅನಗತ್ಯವಾದದ್ದನ್ನು ವಿಲೇಮಾಡಲು ಪ್ರೋತ್ಸಾಹಿಸಿದವು. ಗಾಂಧೀಜಿಯವರು ಅಗತ್ಯವಿಲ್ಲದ ವಸ್ತು/ಸಂಪತ್ತು ಶೇಖರಣೆ ಮಾಡುವುದನ್ನು ಕಳ್ಳತನವೆಂದೇ ಕರೆದರು. ಈ ಮಾತುಗಳನ್ನು ಭಾಷಣಗಳಲ್ಲಿ ಪ್ರಸ್ತಾಪಿಸುತ್ತಲೇ ಇದಕ್ಕೆ ವಿರುದ್ಧ ದಿಕ್ಕಿನಲ್ಲಿ ಸಾಗಿ ಪ್ರಕೃತಿಗಿದ್ದ ಆಕೃತಿಯನ್ನು ಕಳೆದಿದ್ದೇವೆ.

ನಾವೇಕೆ ಹೀಗೆ ಮಾಡುತ್ತಿದ್ದೇವೆ? ನಮ್ಮ ಜೀವನ ಶೈಲಿ ಅಪಾಯಕಾರಿ ಎಂದು ತಿಳಿದೂ ಅದಕ್ಕಾಗಿ ಹಂಬಲಿಸುತ್ತಿದ್ದೇವೇಕೆ? ಎರಡು ಮುಖ್ಯ ಕಾರಣಗಳನ್ನು ಇಲ್ಲಿ ಪ್ರಸ್ತಾಪಿಸಲಾಗುವುದು:

ಅ) **ಮಾನ್ಯತೆಯ ಹಂಬಲ**: ಪ್ರತಿಯೊಬ್ಬ ಮನುಷ್ಯನಿಗೂ ತನ್ನನ್ನಲ್ಲದೆ ಇತರರನ್ನು ಆಳಬೇಕೆಂಬ ಆಶೆ ಇದ್ದದ್ದೆ. ಹಾಗೆ ಮಾಡಬೇಕಾದರೆ ಅವನು ತನ್ನ ಉತ್ಕೃಷ್ಟತೆಯನ್ನು ಸಾಧಿಸಿ ತೋರಿಸಬೇಕು. ಕುಸ್ತಿ/ಜಗಳ/ಹೋರಾಟ/ಯುದ್ಧ ಎಲ್ಲವೂ ನಮ್ಮ ಮೇಲುಗೈ ಸಾಬೀತುಪಡಿಸುವ ಸಾಧನಗಳು. ರುಚಿಕರವಾಗಿ ಅಡುಗೆ ಮಾಡುವವನನ್ನಾಗಲಿ, ಆಳವಾದ ಅಧ್ಯಯನ ಮಾಡಿದ ಪಂಡಿತನನ್ನಾಗಲಿ - ಮೇಲುಸಾಧನೆ ಮಾಡಿದವನೆಂದು ಸಮಾಜದ ಎಲ್ಲ ವರ್ಗವೂ ಗುರುತಿಸದು. ಅಂದ ಮೇಲೆ, ಎಲ್ಲರೂ ಥಟ್ಟನೆ ಗುರುತಿಸುವ ಅಂಶವೇ ಸಂಪತ್ತು ಹಾಗೂ ಭೋಗ ಜೀವನ. ದೇಹದ ಅಸ್ತಿತ್ವಕ್ಕಾಗಿ ಮನ್ನಣೆಯ ಮಣೆ ಗಿಟ್ಟಿಸಲು ಅಗತ್ಯಗಳಿಗೆ ಕೊನೆಯೇ ಇಲ್ಲ. ಇದೂ ಅಲ್ಲದೆ ಮನ್ನಣೆಯ ಮೆಟ್ಟಿಲುಗಳೂ ಅನೇಕ.

ಮನುಷ್ಯನಿಗಿರುವ ಪ್ರತಿಭೆಗಳು ಅನೇಕ. ಆ ಪ್ರತಿಭೆಗಳನ್ನು ಪರಿಶ್ರಮಗಳಿಂದಲೂ ಅರಳಿಸಿ ಅಭಿವ್ಯಕ್ತಿಗೊಳಿಸಬೇಕಾಗುತ್ತದೆ. ಆದರೆ ಸಾಮಾಜಿಕರಾಗಿ ನಮ್ಮ ಕುತೂಹಲ ಆ ಪ್ರತಿಭೆಗಳ ಕಡೆಗಿಲ್ಲ. ಯಾವ ಪ್ರತಿಭೆ ಅಂಗಡಿಯ ಸರಕಾಗಬಲ್ಲದೋ ಅಂತಹ ಪ್ರತಿಭೆಯತ್ತ ಮಾತ್ರ ನಮ್ಮ ಲಕ್ಷ್ಯ. ಅಂದರೇನು? ಪ್ರತಿಭೆಗೂ ಮೆರಗು ನೀಡುವುದು ಸಂಪತ್ತು. ಕೊನೆಗೆ ಉಳಿಯುವ ಪ್ರತಿಭೆಯೆಂದರೆ ನಗದುಗೊಳಿಸಿಕೊಳ್ಳಬಹುದಾದ ಪ್ರತಿಭೆ ಮಾತ್ರ.

ಆ) **ಸರಳ, ಸೃಜನ ವಿಚಾರದ ಕೊರತೆ**: ಈಗ್ಗೆ ಕೆಲವು ವರ್ಷಗಳ ಹಿಂದೆ ಕನ್ನಡದ ಕವಿಯೊಬ್ಬರು "ಸಿಂಗಾರಗೊಳುವುದಕೆ ಬಂಗಾರವೇ ಬೇಕೇ, ಹಳೆಯದಾಯಿತು ನಲ್ಲೆ ಆ ನಂಬಿಕೆ... ನಡೆನುಡಿಗಳಾಭರಣವೇ ಸಾಕು" ಎಂದಿದ್ದರು. ಈಗ ಈ ಭಾವಗೀತೆಯನ್ನು ಮರುರಚಿಸಿ ಹೀಗೆ ಹೇಳಬಹುದು: "ಸಿಂಗಾರಗೊಳುವುದಕೆ ಬಂಗಾರವೇ ಬೇಕು, ತಿಳಿಯದಾಯಿತೆ ನಲ್ಲ ಈ ನಂಬಿಕೆ... ನಡೆನುಡಿಗಳಾಭರಣ ಏಕೆ ನಮಗೆ?"

ಈ ಬಗೆಯ ಧೋರಣೆಯ ಪರಿವರ್ತನೆ ಅಪಾಯಕಾರಿ. ಇದು ಗುಟ್ಟಿನ ಸಂಗತಿ ಏನಲ್ಲ. ಆದರೂ ಬಹುತೇಕ ಮನಸ್ಸುಗಳು ಈ ದಿಕ್ಕಿನಲ್ಲಿಯೇ ಸಾಗುತ್ತಿರುವುದು ವಾಸ್ತವ. ಹೀಗೇಕೆ? ಕಾರಣ ತಿಳಿದರೆ ಪರಿಹಾರವಾದರೂ ಹೊಳೆದೀತು.

ನಾವೆಲ್ಲರೂ ನಮ್ಮನಮ್ಮನ್ನು ಅನೇಕ ಬಗೆಯ ಕ್ರಿಯೆಗಳಲ್ಲಿ ತೊಡಗಿಸಿಕೊಂಡಿದ್ದರೂ ಆ ಎಲ್ಲ ಕ್ರಿಯೆಗಳಿಗೆ ಒಂದು ಸಾಮಾನ್ಯ ಗುರಿ ಇದೆ. ಆ ಗುರಿ ಎಂದರೆ, ಬದುಕಿನಲ್ಲಿ ಸುಖ-ಸಂತೋಷಗಳನ್ನು ಕಾಣುವುದು. ಈ ಗುರಿಯ ಆಶಯ ಮನಸ್ಸನ್ನು ಪ್ರಸನ್ನವಾಗಿರಿಸುವುದು. ಇದನ್ನು ಅನೇಕ ರೀತಿಯಿಂದ ಸಾಧಿಸಬಹುದಾಗಿದೆ.

ಸತ್ಕಾರ್ಯ ಕೈಗೊಂಡು ಅದರಿಂದ ಧನ್ಯಭಾವ ಪಡೆದು ಮನಸ್ಸು ಪ್ರಫುಲ್ಲಗೊಳಿಸುವುದು, ಅಧ್ಯಯನ, ಆಲೋಚನೆಗಳಂತಹ ಬೌದ್ಧಿಕ ಕ್ರಿಯೆಗಳಿಂದಲೂ ಅದನ್ನು ಸಾಧಿಸಬಹುದು. ಹಾಗೆಯೇ ಪದಾರ್ಥಗಳ ಗಳಿಕೆ, ಉಪಭೋಗ ಹಾಗೂ ಒಡೆತನಗಳಿಂದಲೂ

ಅದನ್ನು ಸಾಧಿಸಬಹುದು. ಇಂದಿನ ಬಾಳಿನ ದುರಂತವೆಂದರೆ ಈ ಮೂರನೆಯ ಕ್ರಮಕ್ಕೆ ದೊರೆತಿರುವ ಅತಿಯಾದ ಒತ್ತು. ಮೊದಲೆರಡು ವಿಧಾನಗಳು (ಕ್ರಿಯೆ ನೀಡುವ ಸಂತೋಷ, ಆಲೋಚನೆಯ ಆನಂದ) ದೊರೆಯಬೇಕಾದರೆ ಅಗತ್ಯವಾದ ಕಲ್ಪನಾಶಕ್ತಿ ಹಾಗೂ ಬೌದ್ಧಿಕ ಸಾಮರ್ಥ್ಯದ ಅಭಾವವೇ ಈ ಕೊರತೆಗೆ ಕಾರಣ ಎಂದು ಒಮ್ಮೊಮ್ಮೆ ಅನ್ನಿಸುವುದುಂಟು. ಆದರೆ ಮತ್ತೆ ಕೆಲವೊಮ್ಮೆ ಪದಾರ್ಥಗಳ ಮೂಲಕ (ಗ್ರಾಹಕ ಸಾಮಗ್ರಿಗಳು) ಸುಖ ಬೀಳಹೋದರೆ, ಆ ಸಲುವಾಗಿ ಹಣಗಳಿಕೆಗೆ, ಪೈಪೋಟಿಗೆ ನಿಂತರೆ ಆಗುವ ಅನಾಹುತಗಳ ಬಗೆಗೆ ಅರಿವು ಮೂಡಿಲ್ಲದೆ ಇರುವುದೂ ಕಾರಣ ಇರಬಹುದು. ಹಾಗೆ ಆಗುವ ಅನಾಹುತದ ವಾರಸುದಾರರು ಕೇವಲ ಮಾನವರಲ್ಲ, ಇಡೀ ಜೈವಿಕ ಹಾಗೂ ಅಜೈವಿಕ ವ್ಯವಸ್ಥೆ!

ಬಾಹ್ಯ ವಸ್ತುಗಳಿಂದ ಹಾಗೂ ಗ್ರಾಹಕತೆಯಿಂದ ದೊರಕುವ ಸಂತೃಪ್ತಿ ಕ್ಷಣಿಕವೆಂದೂ ಅರ್ಥಹೀನವೆಂದೂ ಸಂತೃಪ್ತಿ ಕಾಣಲು ಅಂತರಂಗದ ಶಿಸ್ತಿನಿಂದ ಸರಿಯಾದ ಕಲ್ಪನೆ ರೂಢಿಸಿಕೊಳ್ಳಬೇಕೆಂಬ ಮಾತು ಅನೇಕರು ಹೇಳುತ್ತಲೇ ಬಂದಿದ್ದರೂ ಆ ಮಾತುಗಳು ಈಚಿನ ದಿನಗಳಲ್ಲಿ ಹಿಂದೆಸರಿದಿವೆ.

ಅಂತಹ ಒಂದು ಅಭಿಪ್ರಾಯವನ್ನು ಅಲ್ಲಮಪ್ರಭು ದೇವರ ಈ ವಚನ ಎಷ್ಟು ಸರಳವಾಗಿ ಪ್ರತಿಪಾದಿಸುವು ದೆಂಬುದನ್ನು ಗಮನಿಸೋಣ :

ತಲೆಯಲಟ್ಟುಂಬುದ ಒಲೆಯಲಟ್ಟುಂಬರು
ಒಲೆಯಲುಳ್ಳುದ ಹೊಟ್ಟೆಯಲುಂಬೈಸಕ್ಕರ
ಹೊಗೆ ಘನವಾಯಿತ್ತು –
ಇದ ಕಂಡು ಹೇಸಿಬಿಟ್ಟೆನು ಗುಹೇಶ್ವರಾ.

ನಾವು ಹಂಬಲಿಸುವ ಭೌತಿಕವಸ್ತುಗಳ ಭೋಗ ಹಾಗೂ ಒಡೆತನದ ಸುಖದ ಅರ್ಥಹೀನತೆಯನ್ನು ಕೊಂಚ ವಿಚಾರ ಮಾಡಿದರೂ ಸಾಕು, ಅದರ ಅರ್ಥಹೀನತೆ ಅರಿವಾಗುತ್ತದೆ. ಹೀಗೆ ಮಾಡುವ ವಿಚಾರವನ್ನು ತಲೆಯಲಟ್ಟುಂಬುದು ಎನ್ನುತ್ತದೆ ಈ ವಚನ.

ಹೀಗೆ ವಿಚಾರಮಾಡುವ ಸಾಮರ್ಥ್ಯವಿಲ್ಲದವರು ತಮ್ಮ ಕನಸನ್ನು ನನಸಾಗಿಸಿಕೊಳ್ಳಲು ಹೆಣಗುತ್ತಾರೆ. 'ವಿಶಾಲವಾದ ಮನೆ ಇದ್ದರೆ ಎಷ್ಟು ಚೆನ್ನಾಗಿತ್ತು' ಎಂಬ ಕನಸಿನಿಂದ ಪರಿಸರವೇನೂ ಮಲಿನವಾಗುವುದಿಲ್ಲ. ಆ ಕನಸನ್ನು – ಅದು ಅತ್ಯಂತ ಸಹಜ ಎಂಬ ಸಮರ್ಥನೆ ಯೊಂದಿಗೆ ನನಸುಮಾಡಹೊರಟಾಗ ಹಣದ ಅಗತ್ಯ, ಪರಿಸರದ ಜೀವಂತ ಘಟಕಗಳ ಹೆಣದ ಅಗತ್ಯ ಎರಡೂ ಬೇಕಾಗುತ್ತವೆ. ಈ ಬಗ್ಗೆ ವಿಚಾರಮಾಡಲಾಗದ ದುರ್ಬಲ ಮನಸ್ಸು ತನಗೆ ತೋಚಿದ್ದನ್ನು ನಿಜವಾಗಿಯೂ ರೂಪಿಸುವ ಪ್ರಯತ್ನಕ್ಕೆ ಕೈಹಾಕುತ್ತದೆ. ಅದಕ್ಕೆ ಬೇಕಾದ ಆರ್ಥಿಕ ಬೆಂಬಲ ಅಥವಾ ಸಾಮರ್ಥ್ಯ ಇದ್ದರಂತೂ ಆ ಕನಸು ಸಾಕಾರದತ್ತ ಸಲೀಸಾಗಿ ಸಾಗುತ್ತದೆ. ಇದು ಅನೇಕ ದೈಹಿಕ, ಮಾನಸಿಕ, ಸಾಮಾಜಿಕ ಮತ್ತು ಪರಿಸರಾತ್ಮಕ ವಿಕಾರಗಳಿಗೆ ಎಡೆಮಾಡಿಕೊಡುವುದೆಂಬುದನ್ನು ಈ ಭ್ರಮೆ ಮರೆಸಿ ಬಿಡುತ್ತದೆ. ಈ ಹುಚ್ಚಿಗೆ ಧೂಪ ಹಾಕಲು ಜಾಹಿರಾತುಗಳು ಸದಾ ಸನ್ನದ್ಧವಾಗಿವೆ. ಸಿಮೆಂಟಿನ ಜಾಹೀರಾತನ್ನು ನೀವು ನೋಡಿರುವಿರಲ್ಲವೆ ? – ನೆನಪಿಸಿಕೊಳ್ಳಿ 'ಕನಸಿರುವುದು ನನಸುಮಾಡಿಕೊಳ್ಳಲಿಕ್ಕೆ, ಅದರೊಡನೆ ರಾಜಿ ಏತಕ್ಕೆ ?'

ಮನಸ್ಸಿನಲ್ಲಿ ಮೂಡಿದ್ದಕ್ಕೆಲ್ಲಾ ಮೂರ್ತರೂಪ ತೊಡಿಸುವ ಸಲುವಾಗಿ ಗಳಿಸಹೊರಟರೆ, ಗಳಿಸಿದ್ದನ್ನು ವೆಚ್ಚಮಾಡಿ ಪರಿಸರದ ಅಮೂಲ್ಯ ಘಟಕಗಳನ್ನು ನಿರ್ದಾಕ್ಷಿಣ್ಯವಾಗಿ, ನಿಸ್ಸಂಕೋಚವಾಗಿ ನಿಷ್ಕಾರುಣ್ಯವಾಗಿ ಲೂಟಿಮಾಡುವುದನ್ನು ವಚನ 'ಒಲೆಯಲಟ್ಟುಂಬುದು' ಎಂದು ವಿವರಿಸುತ್ತದೆ.

ಮನಸ್ಸಿನ ಮೂಲಕ ನಿರ್ಧರಿಸಿ ಹಿಂದೆ ಸರಿಯದೆಯೇ ಕನಸನ್ನು ನನಸಾಗಿಸಿಕೊಂಡು, ಹೊಟ್ಟೆ ತುಂಬಿಸಿಕೊಂಡು ಅನಂತರ ಅರ್ಥಹೀನತೆ ಮನಗಾಣುತ್ತೇನೆಂದು ಹೊರಟರೆ – ಆ ತುಂಬದ ಹೊಟ್ಟೆಗೆ ಒದಗಿಸಹೋಗಿ ಒಲೆ ನಿರಂತರವಾಗಿ ಉರಿಯುತ್ತದೆ. ಆಗ ಮನೆಯನ್ನು, ಮನವನ್ನು, ದೇಶವನ್ನು ಹೊಗೆ ಆವರಿಸುತ್ತದೆ. ನೈಸರ್ಗಿಕ ಸಂಪನ್ಮೂಲದ ಪರಿಷ್ಕರಣದ ಪ್ರಕ್ರಿಯೆ ಉಂಟುಮಾಡುವ ಮಾಲಿನ್ಯಕ್ಕೆ ಈ 'ಹೊಗೆ' ಪ್ರತಿನಿಧಿ !

ಕೈಗಾರಿಕೀಕರಣದ ಪರಿಣಾಮವಾಗಿ ಉಂಟಾಗುವ ಮಾಲಿನ್ಯ ಅಪಾಯವನ್ನು, ಅದು ಭಾರತಕ್ಕೆ ಕಾಲಿಡುವ ಮೊದಲೇ ಅನುಭಾವಿಗಳು ಅದೆಷ್ಟು ಸಮಂಜಸವಾಗಿ ವಿವರಿಸಿದ್ದಾರೆ! ಇಂದಿನ ಪರಿಸ್ಥಿತಿಗೆ ಹಿಡಿದ ಕೈಗನ್ನಡಿಯಾಗಿ ಈ ವಚನ ತೋರುತ್ತದೆ – ಅಲ್ಲವೆ ?

ಮತ್ತೊಂದು ಕುತೂಹಲದ ಪ್ರಶ್ನೆಯೂ ಇಲ್ಲಿ ಏಳುತ್ತದೆ. ಮಾಲಿನ್ಯವಾಗುವಂತೆ ಮಾಡಿದ ಕೈಗಾರಿಕಾ ಕ್ರಾಂತಿಗೆ ಮೊದಲೇ ಆ ಬಗ್ಗೆ ವಚನಕಾರರು ಎಚ್ಚರಿಸಿದ್ದಾದರೂ ಏಕೆ ? ಹೇಗೆ ?

ಉತ್ತರ ಅತ್ಯಂತ ಸರಳವಾಗಿಯೇ ಇದೆ. ಮಾಲಿನ್ಯದ ಸಮಸ್ಯೆ ಪ್ರಕೋಪಕ್ಕೆ ಮುಟ್ಟಿ, ಒಂದೊಂದು ಕುಟುಂಬವೂ 'ದ್ರವ್ಯಸ್ಥೂಲಕಾಯ' ಪಡೆದದ್ದು ಕೈಗಾರಿಕಾ ಕ್ರಾಂತಿಯ ಅನಂತರವಾದರೂ, ಅದಕ್ಕೆ ಮೊದಲೂ ಈ ಪ್ರವೃತ್ತಿ ಇತ್ತು. ಆದಿಮಾನವ ನೆಲೆಯೂರಿದಾಗಿನಿಂದಲೂ ಜನರ ಕನಿಷ್ಠ ಅಗತ್ಯಗಳು ಹೆಚ್ಚತೊಡಗಲು ಪ್ರಾರಂಭ ವಾದುವು ಎಂಬುದು ನಿಜ. ಆಗಿನ ಹೆಚ್ಚಳಕ್ಕೇ ಸ್ಪಂದಿಸಿ ಅಂದಿನ ವಚನಕಾರರು ಈ ಬಗೆಯ ನಿಲುವನ್ನು ಪ್ರಕಟಿಸಿದ್ದಿರಬೇಕು. ಆದರೆ ಆ ನಿಲುವು ಇಂದಿನ ಸಂದರ್ಭದಲ್ಲಿ ನಿಚ್ಚಳವಾಗಿದೆ. ಆಗಿನ ಕಾಲದಲ್ಲಿ ಭೋಗಜೀವನದ ರೋಗ ರಾಜರುಗಳನ್ನು ಪೀಡಿಸುತ್ತಿತ್ತು. ಈಗ ಪ್ರಜಾಪ್ರಭುತ್ವ. ಎಲ್ಲರೂ ರಾಜರೆ. ಹೀಗಾಗಿ 'ದ್ರವ್ಯಸ್ಥೂಲಕಾಯರೋಗ' ವ್ಯಾಪಕವಾಗಿ ಹರಡಿದೆ !

ಈ ಪ್ರಯತ್ನದಲ್ಲಿ ಅಲ್ಪಸ್ವಲ್ಪ ವಿಚಾರವಂತಿಕೆ ಯಿಂದಲೋ ಅಸಹಾಯಕತೆಯಿಂದಲೋ ಈ ಓಟದಲ್ಲಿ ಹಿಂದುಳಿದವರ ಬಗ್ಗೆ ಅನುಕಂಪ ಇಲ್ಲವಷ್ಟೆ, ಅಲ್ಲಿ ಅತ್ಯಂತ ಉಪೇಕ್ಷೆ ಇದೆ ಎಂಬುದು ರೋಗದ ಉಲ್ಬಣಕ್ಕೆ ಸೂಚಿ. ಅಂತೂ ವಚನ ಸಾರುವಂತೆ ಹೊಗೆಯ ಹೇಸಿಗೆಯಿಂದ ಎಲ್ಲರೂ ಹೇಸುವಂತಾಗಿದೆ.

ಅದೇ ವಚನಕಾರರ ಇನ್ನೊಂದು ವಚನವನ್ನಿಲ್ಲಿ ಪ್ರಸ್ತಾಪಿಸುವುದು ಅತ್ಯಂತ ಸುಸಂಗತವೆನಿಸುತ್ತದೆ :

ಸೃಷ್ಟಿಯ ಮೇಲಣ ಕಣಿಯ ತಂದು
ಅಷ್ಟತನುವಿನಕೈಯಲ್ಲಿ ಕೊಡಲು
ಅಷ್ಟತನುತಪ್ಪಿ ಸೃಷ್ಟಿಯ ಮೇಲೆ ಬಿದ್ದಡೆ – ಕೆಟ್ಟನಲ್ಲಾ
...... ಭಾವವ್ರತಗೇಡಿ ಆದೆನಲ್ಲಾ ಗುಹೇಶ್ವರಾ.

ಈ ಸಂದರ್ಭಕ್ಕೆ ಹೊಂದಿಕೊಳ್ಳುವಂತೆ ಹೀಗೆ ಅರ್ಥೈಸೋಣ : ಸೃಷ್ಟಿ ರಹಸ್ಯವನ್ನೂ ಅನುಕ್ರಮವಾಗಿ ಅರಿಯುವ ಮತ್ತು ಅನ್ವಯಿಸುವ ವಿಜ್ಞಾನ ಮತ್ತು ತಂತ್ರಜ್ಞಾನಗಳೂ ಸೃಷ್ಟಿಯ ಕಣಿ. ಅದರಿಂದ ಬರುವ ಲಾಭ ಹಾಗೂ ಭೋಗವನ್ನು ಅಷ್ಟತನು (ಮಾನವ, ಪಂಚಭೂತಗಳು, ಮನಸ್ಸು, ಬುದ್ಧಿ ಮತ್ತು ಚಿತ್ತಗಳಿಂದಾದ ಮಾನವ)ವಿಗೆ ಹೇಳಿದರೆ, ಆಗ ತನ್ನ ದೇಹ, ಮನಸ್ಸು, ಬುದ್ಧಿ ಮತ್ತು ಚಿತ್ತಗಳನ್ನು ಮೆಚ್ಚಿಸುವ ಸಲುವಾಗಿ ಅವನು ಸೃಷ್ಟಿಯ ಮೇಲೆ ಎರಗುತ್ತಾನೆ ! ಹಾಗೆ ಎರಗಿ 'ದ್ರವ್ಯಸ್ಥೂಲಕಾಯ'ನಾಗಿ ಸೃಷ್ಟಿಗೆ ಅಂತಕನಾಗಿ ತನಗೂ ಜೀವಿಗೋಲಕ್ಕೂ ಆತಂಕಕಾರಿಯಾಗುತ್ತಾನೆ! ಇದರಿಂದ ಆಲೋಚನೆಯ ಆನಂದ ಹಿಂದೆ ಸರಿದು ಭಾವವ್ರತಗೇಡಿಯಾಗುತ್ತಾನೆ !

ಆತ್ಮೀಯ ಓದುಗರೆ, ಪರಿಸರ ದಿನಾಚರಣೆ (ಜೂನ್ ೫)ಯಂದು ಪರಿಸರವನ್ನು ಹಾಡಿಹೊಗಳಿದರಾಗಲಿ, ಮಾಲಿನ್ಯಕಾರರನ್ನು ಕಟುವಾಗಿ ನಿಂದಿಸಿದರಾಗಲಿ, ನಿಸರ್ಗದ ಲೂಟಿಕೋರರನ್ನು ದೂಷಿಸಿದರಾಗಲಿ ಏನೂ ಪ್ರಯೋಜನವಿಲ್ಲ. ನಮ್ಮ ಅಗತ್ಯಗಳಿಗೆ ಅವರನ್ನು ಅವಲಂಬಿಸಿ ನಾವೇ ಅವರಿಗೆ ಮಾರುಕಟ್ಟೆ ಒದಗಿಸಿರುವ ಕಟುಸತ್ಯವನ್ನು ಮರೆಮಾಚಲು ಈ ನಾಟಕ ಬೇಡ.

ಹಾಗೆಂದ ಮಾತ್ರಕ್ಕೆ ದ್ರವ್ಯಸಂಗ್ರಹ ಮತ್ತು ದ್ರವ್ಯಾ ಧಾರಿತ ಸುಖವನ್ನು ತ್ಯಜಿಸಿ ಸನ್ಯಾಸಿಗಳಾಗಬೇಕೆಂದೂ ಅಲ್ಲ. ಆದರೆ ದ್ರವ್ಯಾಧಾರಿತ ಸುಖದ ಬೆನ್ನುಹತ್ತಿ ಆಲೋಚನೆ, ಅಧ್ಯಯನ, ಮನುಷ್ಯ ಸಂಬಂಧ, ಸತ್ಕಾರ್ಯಗಳನ್ನು ಪೂರ್ಣವಾಗಿ ಕಡೆಗಣಿಸದಂತೆ ಎಚ್ಚರ ವಹಿಸೋಣ.

ಕರ್ತವ್ಯನಿರ್ವಹಣೆಯ ಸಂತೃಪ್ತಿಗೆ, ಆಲೋಚನೆ/ ಅಧ್ಯಯನ ಸವಿಕಲ್ಪನೆಗಳ ಅಮೂರ್ತ ಸುಖಕ್ಕೆ ಪರಿಸರ ನಾಶದ ಅಗತ್ಯವಾಗಲಿ, ಹಣ ಗಳಿಕೆಯಾಗಲಿ ಅನಿವಾರ್ಯವಲ್ಲ. ಹೀಗೆ ಸರಳ ಆನಂದ ಕಂಡುಕೊಂಡ ಸೃಜನಶೀಲರಿಗೆ ಮಾನ್ಯ ಮಾಡಿದಾಗಲೇ ಅವರು ಇತರರಿಗೂ ವರ್ಚಸ್ಸು ಬೀರಲು ಸಾಧ್ಯವಾಗುತ್ತದೆ.

ಅದೇಕೋ ಸ್ಥೂಲಕಾಯದವರನ್ನು ನೋಡಿದರೆ ಕನಿಕರ ಬರುತ್ತದೆ. ಆದರೆ ತಮ್ಮ ಗಳಿಕೆ ಹಾಗೂ ಗ್ರಾಹಕ ಸಾಮಗ್ರಿಯ ದ್ರವ್ಯಸ್ಥೂಲಕಾಯದವರನ್ನು ನೋಡಿದರೆ ಜೀವಿಗೋಲ ಬರಿದಾಗಿಹೋಗುವವರೆಗೂ ಇವರಿಗೆ ಎಚ್ಚರ ಉಂಟಾಗದಂತಹ ಅಮಲು ಉಂಟಾಗಿದೆಯೇನೋ ಎನಿಸುತ್ತದೆ.

'ಸರಳಜೀವನ ಗಹನ ಚಿಂತನೆ' – ಎಂಬ ಸೂತ್ರ ನಮ್ಮ ಅಭಿರುಚಿ ಆಗಬೇಕಾದರೆ ಅತಿ ಬಳಕೆ, ಮರೆತ ಚಿಂತನೆ, ಇವುಗಳಿಂದ ಹಿಂದೆ ಸರಿಯದೆ ಬೇರೆ ದಾರಿಯಿಲ್ಲ. ಇದು ಉಳ್ಳವರು, ಕೊಳ್ಳವರು, ಉಳ್ಳವರಾಗ ಬಯಸುವ, ಕೊಳ್ಳವರಾಗ ಬಯಸುವ – ಎಲ್ಲರೂ ಗಂಭೀರವಾಗಿ ಆಲೋಚಿಸಬೇಕಾದ ವಿಚಾರ. ಈ ದಿಸೆಯಲ್ಲಿ ಪರಿಸರ ದಿನಾಚರಣೆಯ ದಿನ ಕಳೆದ ನಂತರವೂ ನಿಮ್ಮ ಸಂಕಲ್ಪ ಏನು ? ದ್ರವ್ಯ ಮಿತಾಹಾರದ ಬಗ್ಗೆ ಆಲೋಚಿಸಿ.

ನಮ್ಮದು ಜನಾಧಾರಿತ ತೃಪ್ತಿಯೋ, ಧನಾಧಾರಿತ ತೃಪ್ತಿಯೋ, ಆಲೋಚನಾಧಾರಿತ ತೃಪ್ತಿಯೋ !

---

ಪ್ರೊ॥ ಎಮ್. ಆರ್. ನಾಗರಾಜು
ಎಫ್-೩, ಎಸ್.ಎಫ್.ಎಸ್. ನಿವಾಸಗಳು, ೭ನೇ ಅಡ್ಡರಸ್ತೆ
ಯಲಹಂಕ ಉಪನಗರ, ಬೆಂಗಳೂರು - ೫೬೦ ೧೦೬

# ಆಸ್ಟ್ರೇಲಿಯ : ಜನಾಂಗೀಯ ಅತಿರೇಕ ಖಂಡನೀಯ





ಆಸ್ಟ್ರೇಲಿಯಾದಲ್ಲಿ ಭಾರತೀಯ ವಿದ್ಯಾರ್ಥಿಗಳಿಂದ ಪ್ರತಿಭಟನಾ ಪ್ರದರ್ಶನ

**ಕ**ಳೆದ ಕೆಲ ತಿಂಗಳಿಂದ ಆಸ್ಟ್ರೇಲಿಯದಲ್ಲಿ ಭಾರತೀಯ ಸಂಜಾತರ ಮೇಲೆ ವ್ಯವಸ್ಥಿತವಾದ ರೀತಿಯಲ್ಲಿ ಹಲ್ಲೆಗಳಾಗುತ್ತಿವೆ. ಅದೂ ಹೆಚ್ಚಾಗಿ ಭಾರತೀಯ ವಿದ್ಯಾರ್ಥಿಗಳು ದುಷ್ಕರ್ಮಿಗಳ ದಾಳಿಗೀಡಾಗುತ್ತಿದ್ದಾರೆ. ಈವರೆಗೆ ಘಟಿಸಿದ ಹತ್ತಾರು ಪ್ರಕರಣಗಳ ಪೈಕಿ ಒಬ್ಬ ಯುವಕನ ಸಾವು ಸಂಭವಿಸಿದೆ. ತೀವ್ರವಾಗಿ ಗಾಯಗೊಂಡವರು ಇನ್ನೂ ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಈ ಘಟನೆಗಳು ಭಾರತೀಯರನ್ನು ಗಾಬರಿಗೊಳಿಸಿವೆ. ಆಸ್ಟ್ರೇಲಿಯದಲ್ಲಿ ನೆಲೆಸಿರುವ ಭಾರತೀಯರಲ್ಲಿ, ಓದಲು ಹೋಗಿರುವ ವಿದ್ಯಾರ್ಥಿಗಳಲ್ಲಿ, ಭೀತಿಯನ್ನು ಉಂಟುಮಾಡಿದೆ. ಆಸ್ಟ್ರೇಲಿಯ ಸರಕಾರ ಈ ಪ್ರಕರಣಗಳ ಕುರಿತು ಸರಿಯಾದ ಕ್ರಮ ತೆಗೆದುಕೊಳ್ಳದೇ ಇರುವುದು ಕಾಳಜಿ ಹೆಚ್ಚಿಸಿದೆ. ಭಾರತೀಯರ ಪ್ರಕಾರ ಆಸ್ಟ್ರೇಲಿಯದಲ್ಲಿ ನಡೆದಿರುವ ಹಲ್ಲೆಗಳು ಪೂರ್ವನಿಯೋಜಿತ, ಜನಾಂಗ ದ್ವೇಷ ಅಥವಾ ವರ್ಣದ್ವೇಷ. ಆಸ್ಟ್ರೇಲಿಯ ಸರಕಾರ ಇದನ್ನು ಸಂಪೂರ್ಣವಾಗಿ ತಳ್ಳಿ ಹಾಕಿದೆ. ಈ ಪ್ರಕರಣಗಳು ವೈಯಕ್ತಿಕ ಕಾರಣಗಳಿಂದಾದುವು, ತನಿಖೆ ನಡೆಯುತ್ತಿದೆ ಎಂದು ಹೇಳುತ್ತ ಬಂದಿದೆ. ಆದರೆ ಈಗಷ್ಟೇ ಆಸ್ಟ್ರೇಲಿಯಾದ ನ್ಯಾಯಾಲಯ ಒಬ್ಬ ಆಸ್ಟ್ರೇಲಿಯ ನಾಗರಿಕನನ್ನು ಜನಾಂಗ ದ್ವೇಷದ ಆಪಾದನೆಯ ಮೇಲೆ ಶಿಕ್ಷೆಗೆ ಗುರಿಪಡಿಸಿದೆ. ಹಾಗಾಗಿ, ಈವರೆಗೆ ನಡೆದಿರುವ ಹಲ್ಲೆ ಪ್ರಕರಣಗಳು ಜನಾಂಗ ದ್ವೇಷಕ್ಕೆ ಸಂಬಂಧಿಸಿದ್ದಲ್ಲ ಎಂದು ಆಸ್ಟ್ರೇಲಿಯ ಸರಕಾರ ಹೇಳುತ್ತಿರುವುದು ನಿರಾಧಾರವಾದುದು. ಅದಲ್ಲದೆ, ಮೆಲ್ಬೋರ್ನ್ ನಗರದಲ್ಲಿ ನಿರ್ಮಾಣವಾಗುತ್ತಿರುವ ಸಿಖ್ಖರ ಗುರುದ್ವಾರಕ್ಕೆ ಬೆಂಕಿ ಹಚ್ಚಿದ ಘಟನೆ ಸಂಪೂರ್ಣವಾಗಿ ಜನಾಂಗ ದ್ವೇಷದಿಂದ ಪ್ರೇರಿತವಾದ್ದು; ಆಸ್ಟ್ರೇಲಿಯದಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳೂ ಇತರ ಭಾರತೀಯ ಸಂಜಾತರೂ ಮೊದಲಿನಿಂದ ಭಾರತೀಯರ ಮೇಲೆ ನಡೆಯುತ್ತಿರುವ ಹಲ್ಲೆಗಳು ಜನಾಂಗ ದ್ವೇಷಕ್ಕೆ ಸಂಬಂಧಿಸಿದ್ದು ಎಂದು ಸ್ಪಷ್ಟವಾಗಿ ಹೇಳುತ್ತ ಬಂದಿದ್ದಾರೆ, ಆಸ್ಟ್ರೇಲಿಯ ಸರಕಾರ ದುಷ್ಕರ್ಮಿಗಳ ಮೇಲೆ ಸೂಕ್ತಕ್ರಮ ಕೈಗೊಳ್ಳಬೇಕೆಂದು ಒತ್ತಾಯ ಪಡಿಸಿ ಪ್ರದರ್ಶನಗಳನ್ನು ನಡೆಸಿದ್ದಾರೆ.

ಭಾರತ ಸರಕಾರ ಈ ವಿಷಯದಲ್ಲಿ ತಳೆದಿರುವ ಮೃದುಧೋರಣೆ ಅಸಮಂಜಸ. ಒಂದು ರೀತಿಯ ಅನಾದರಣೆ. ಶ್ರೀಮಂತ ಆಸ್ಟ್ರೇಲಿಯ ದೇಶದ ಬಗ್ಗೆ ದಾಕ್ಷಿಣ್ಯ ಮನೋಭಾವ. ಇದು ಸರಕಾರಿ ವಕ್ತಾರರ ಹೇಳಿಕೆಗಳಲ್ಲಿ ಗಮನಿಸಬಹುದಾದ ಸಂಗತಿ. ಆಸ್ಟ್ರೇಲಿಯ ಸರಕಾರದ ಮೇಲೆ, ಸಂಬಂಧಪಟ್ಟ ದುಷ್ಕರ್ಮಿಗಳ ಮೇಲೆ ಕ್ರಮ ಕೈಗೊಳ್ಳಬೇಕೆಂದು ಒತ್ತಾಯ ತರಲೂ ಸರಕಾರ ಹಿಂದೆ ಮುಂದೆ ನೋಡುತ್ತಿದೆ. ಭಾರತ ಸರಕಾರ ಈವರೆಗೆ ಪ್ರಕರಣಗಳ ಕುರಿತು ಆಸ್ಟ್ರೇಲಿಯ ಸರಕಾರಕ್ಕೆ ಪ್ರತಿಭಟನೆ ಸಲ್ಲಿಸದಿರುವುದು ಶೋಚನೀಯ. ಇದು ಹಲ್ಲೆಗೊಳಗಾದ ಭಾರತೀಯರ ಕುಟುಂಬ ವರ್ಗದವರನ್ನು, ಮಿತ್ರರನ್ನು, ಆಸ್ಟ್ರೇಲಿಯದಲ್ಲಿರುವ ಭಾರತೀಯ ನಾಗರಿಕರನ್ನು ರೊಚ್ಚಿಗೆಬ್ಬಿಸಿದೆ. ವಿದೇಶಗಳಲ್ಲಿ ನೆಲೆಸಿರುವ ಭಾರತೀಯ ನಾಗರಿಕರ ಬಗ್ಗೆ, ಅವರ ರಕ್ಷಣೆಯ ಬಗ್ಗೆ ಭಾರತ ಸರಕಾರ ತಳೆದಿರುವ ಧೋರಣೆ ಇಂಥದ್ದಾಗಿದೆ. ಇದು ನಿಜವಾಗಿಯೂ ಖಂಡನೀಯ. ಆಸ್ಟ್ರೇಲಿಯದಲ್ಲಿ ಭಾರತೀಯರ ಮೇಲೆ ನಡೆದಿರುವ ಹಲ್ಲೆ ಪ್ರಕರಣಗಳು ಜನಾಂಗೀಯ ದ್ವೇಷವೇ, ಅಲ್ಲವೆ, ಎನ್ನುವ ಚರ್ಚೆಗಿಂತ ಮೊದಲು ಭಾರತ ಸರಕಾರ ದುಷ್ಕರ್ಮಿಗಳನ್ನು ಪತ್ತೆ ಹಚ್ಚಿ ಕ್ರಮ ತೆಗೆದುಕೊಳ್ಳಬೇಕೆಂದು ಒತ್ತಾಯ ತರುವುದು ಅಗತ್ಯವಾಗಿತ್ತು. ಹಾಗೆ ಮಾಡದೆ ಸರಕಾರ ಮೀನಮೇಷ ಎಣಿಸಿದ್ದು ಮುಜುಗರ ಉಂಟುಮಾಡಿದೆ. ಭಾರತೀಯರ ಸ್ವಾಭಿಮಾನಕ್ಕೆ ಘಾಸಿ ಉಂಟುಮಾಡಿದೆ.

ಆಸ್ಟ್ರೇಲಿಯದಲ್ಲಿ ಭಾರತೀಯರ ಮೇಲೆ ನಡೆದಿರುವ ಹಲ್ಲೆ ಪ್ರಕರಣಗಳು ಜನಾಂಗೀಯ ದ್ವೇಷವೇ ಅಲ್ಲವೆ ಎನ್ನುವ ಚರ್ಚೆ ಅನಗತ್ಯ. ಇತಿಹಾಸವನ್ನು ಅವಲೋಕಿಸಿದರೆ ಅದು ಬಿಳಿಯರ ಸೊಕ್ಕಿನ ಪ್ರಕಟ ಎನ್ನುವುದು ಗೋಚರವಾಗುತ್ತದೆ. ದಕ್ಷಿಣ ಆಫ್ರಿಕಾದಲ್ಲಿ ಬಿಳಿಯರು ನಡೆಸಿದ ಅಟ್ಟಹಾಸವನ್ನಾಗಲೀ, ಅಮೆರಿಕದಲ್ಲಿ ಬಿಳಿಯರ ಸಂಘಟನೆ ಕ್ಲು-ಕ್ಲುಕ್ಸ್-ಕ್ಲಾನ್ ನಡೆಸಿದ ಕರಿಯರ ಕಗ್ಗೊಲೆಗಳನ್ನಾಗಲೀ ಜರ್ಮನಿಯಲ್ಲಿ ಹಿಟ್ಲರ್ ಯೆಹೂದ್ಯ ಜನಾಂಗದವರ ಮೇಲೆ ನಡೆಸಿದ ದೌರ್ಜನ್ಯಗಳನ್ನಾಗಲೀ ಮರೆಯಲು ಸಾಧ್ಯವೆ? ಇಪ್ಪತ್ತೊಂದನೇ ಶತಮಾನದಲ್ಲಿಯೂ ಅದರ ಪಳೆಯುಳಿಕೆ ಇರುವುದೀಗ ಆತಂಕಕಾರಿ. ಅದರಿಂದಲೇ ಆಸ್ಟ್ರೇಲಿಯದಲ್ಲಿ ನಡೆಯುತ್ತಿರುವ ಘಟನೆಗಳನ್ನು ಕಡೆಗಣಿಸುವಂತಿಲ್ಲ. ಕಳೆದ ಇಪ್ಪತ್ತು ಮೂವತ್ತು ವರ್ಷಗಳಲ್ಲಿ ಭಾರತೀಯರು ವಿದೇಶಗಳಲ್ಲಿ ನಾನಾ ಕ್ಷೇತ್ರಗಳಲ್ಲಿ ಹೆಚ್ಚು ಸಂಖ್ಯೆಯಲ್ಲಿ ದುಡಿಯಲು ಹೋಗುತ್ತಿದ್ದಾರೆ. ಈ ಪೈಕಿ ಹೆಚ್ಚಿನವರು ಅಧಿಕ ನಿಪುಣತೆ ಅಗತ್ಯವಿರುವ ಕ್ಷೇತ್ರಗಳಲ್ಲಿದ್ದು ಹೆಚ್ಚು ವರಮಾನ ಗಳಿಸುವವರಾಗಿದ್ದಾರೆ. ಇದು ಸಹಜವಾಗಿಯೇ ಸ್ಥಳೀಯರ ಕಣ್ಣುಗಳನ್ನು ಕೆಂಪಗಾಗಿಸಿದೆ. ಇನ್ನೊಂದು, ಕಳೆದ ಕೆಲವು ವರ್ಷಗಳಿಂದೀಚೆಗೆ ಉನ್ನತ ವ್ಯಾಸಂಗಕ್ಕಾಗಿ ಅಮೆರಿಕ, ರಷ್ಯ, ಇಂಗ್ಲೆಂಡ್, ಆಸ್ಟ್ರೇಲಿಯಗಳಿಗೆ ಹೋಗುತ್ತಿರುವ ಭಾರತೀಯ ವಿದ್ಯಾರ್ಥಿಗಳ ಸಂಖ್ಯೆಯೂ ಅಧಿಕಗೊಂಡಿದೆ. ಈ ದೇಶಗಳ ವಿಶ್ವವಿದ್ಯಾಲಯಗಳು ಭಾರತೀಯ ವಿದ್ಯಾರ್ಥಿಗಳನ್ನು ಆಕರ್ಷಿಸಲು ವಿವಿಧ ರಿಯಾಯಿತಿಗಳನ್ನು ಕೊಡುತ್ತಿವೆ ಎನ್ನುವುದೂ ನಿಜ. ಇದರಿಂದ ವಿಶ್ವವಿದ್ಯಾಲಯಗಳಿಗೂ ಲಾಭವಿದೆ. ಹಾಗೆ ಹೋಗುವ ಭಾರತೀಯ ವಿದ್ಯಾರ್ಥಿಗಳು ತಮ್ಮ ತಮ್ಮ ಕ್ಷೇತ್ರಗಳಲ್ಲಿ ಪ್ರತಿಭೆಯನ್ನು ಮೆರೆದಿದ್ದಾರೆ. ಉತ್ತಮ ವಿದ್ಯಾರ್ಥಿಗಳೆಂದು, ಅಧ್ಯಯನಶೀಲರೆಂದು ಹೆಸರು ಗಳಿಸಿದ್ದಾರೆ. ವಿದೇಶೀ ವಿಶ್ವವಿದ್ಯಾಲಯಗಳ ಪ್ರವೇಶ ದುಬಾರಿ. ಸ್ಥಳೀಯರಿಗೆ ಪ್ರವೇಶ ದಿನೇದಿನೇ ಹೆಚ್ಚು ಕಷ್ಟವಾಗುತ್ತಿದೆ. ಅದಲ್ಲದೆ, ಆ ಸಮಾಜಗಳಲ್ಲಿ ವಯಸ್ಸಿಗೆ ಬಂದ ವಿದ್ಯಾರ್ಥಿ ವಿಶ್ವವಿದ್ಯಾಲಯ ಪ್ರವೇಶಿಸುವ ಬದಲು ಉದ್ಯೋಗ ಅರಸಿಹೋಗುತ್ತಾನೆ. ಹಾಗಾಗಿ ಪ್ರತಿಭಾವಂತ ಭಾರತೀಯ ವಿದ್ಯಾರ್ಥಿಗಳನ್ನು ಕಂಡರೆ ಒಂದು ಬಗೆಯ ಅಸೂಯೆ. ಇದನ್ನು ಕಡೆಗಣಿಸುವ ಹಾಗಿಲ್ಲ. ನಿರುದ್ಯೋಗ ಹೆಚ್ಚಿದಂತೆ, ನೈಪುಣ್ಯ ಅಗತ್ಯವಿರುವ ಹುದ್ದೆ ಅಲಭ್ಯವಾಗುತ್ತಿದ್ದಂತೆ ಇಂಥ ಅಸೂಯೆ ದ್ವೇಷಕ್ಕೆ ತಿರುಗುವುದು ಆಶ್ಚರ್ಯವೇನಲ್ಲ, ಆಸ್ಟ್ರೇಲಿಯದ ಆರ್ಥಿಕ ಅಭಿವೃದ್ಧಿಗೆ ಭಾರತದಂಥ ದೇಶದ ಕುಶಲಕರ್ಮಿಗಳ, ನಿಪುಣರ ಅಗತ್ಯವೂ ಇದೆ.

ಆಸ್ಟ್ರೇಲಿಯ ಇತಿಹಾಸವನ್ನು ಗಮನಿಸಿದರೆ ಇವತ್ತಿನ ಘಟನೆಗಳು ಎಷ್ಟುಮಟ್ಟಿಗೆ ಜನಾಂಗೀಯ ದ್ವೇಷದಿಂದ ಕೂಡಿದ್ದು ಎನ್ನುವುದು ವೇದ್ಯವಾಗುತ್ತದೆ. ೧೯೭೩ರವರೆಗೆ ಆಸ್ಟ್ರೇಲಿಯ ಸರಕಾರ ಬಿಳಿಯರಿಗೆ ಮಾತ್ರ ಸೇರಿದ ದೇಶವೆಂಬ ಧೋರಣೆ ಅನುಸರಿಸುತ್ತಿತ್ತು. ಬಿಳಿಯರನ್ನು ಬಿಟ್ಟು ಅನ್ಯಜನಾಂಗೀಯರಿಗೆ ಪ್ರವೇಶ ನಿರ್ಬಂಧಿಸುತ್ತಿತ್ತು. ಐರೋಪ್ಯ ದೇಶಗಳಿಂದ ಬರುವ ವಲಸೆಗಾರರಿಗೆ ಪ್ರೋತ್ಸಾಹ ನೀಡುತ್ತಿತ್ತು. ಹಾಗಾಗಿ ೧೯೪೮ರಿಂದ ೧೯೭೩ವರೆಗಿನ ಕಾಲಾವಧಿಯಲ್ಲಿ ಸುಮಾರು ಎರಡು ಮಿಲಿಯ ಐರೋಪ್ಯರು ಆಸ್ಟ್ರೇಲಿಯಾಗೆ ಬಂದು ನೆಲೆಸಿದರು. ಭಾರತೀಯರು ವಲಸೆ ಹೋಗುತ್ತಿದ್ದುದು ಆಗ ತುಂಬ ಕಡಿಮೆ. ಅಮೆರಿಕದಂತೆಯೇ ಆಸ್ಟ್ರೇಲಿಯ ಕೂಡ ವಲಸೆಗಾರರ ನಾಡು. ಅಮೆರಿಕದಲ್ಲಿ ಆದಂತೆಯೇ ಆಸ್ಟ್ರೇಲಿಯದಲ್ಲೂ ಮೂಲನಿವಾಸಿಗಳನ್ನು ಮೂಲೋತ್ಪಾಟನೆ ಮಾಡಲಾಯಿತು. ಮೂಲನಿವಾಸಿಗಳ ಸಂಖ್ಯೆ ಕುಸಿದಿದ್ದು ನಿಗದಿತ ಪ್ರದೇಶಗಳಲ್ಲಿ ಅಳಿದುಳಿದವರು ಇದ್ದಾರೆ. ಕ್ರಿ.ಶ. ೧೭ನೇ ಶತಮಾನದಲ್ಲಿ ಡಚ್ ನಾವಿಕ ಕಂಡುಕೊಂಡ ಈ ಭೂಭಾಗ ಬಹುಬೇಗನೆ ಇತರ ಐರೋಪ್ಯರನ್ನು ಆಕರ್ಷಿಸಿತು. ಹದಿನಾರನೆ ಶತಮಾನದ ಕೊನೆಯಲ್ಲಿ ಬ್ರಿಟಿಷ್ ನಾವಿಕ ಕ್ಯಾಪ್ಟನ್ ಕುಕ್‌ನ ಆಗಮನದಿಂದ ಕ್ರಮೇಣ ಆಸ್ಟ್ರೇಲಿಯ ಬ್ರಿಟಿಷ್ ವಸಾಹತು ಆಯಿತು. ಅಂದಿನ ದಿನಗಳಲ್ಲಿ ಪ್ರಬಲ ಸಾಮ್ರಾಜ್ಯಶಾಹಿ ರಾಷ್ಟ್ರವಾಗಿದ್ದ ಬ್ರಿಟನ್ ತನ್ನ ನೆಲದಿಂದ ದೂರದಲ್ಲಿದ್ದ ಈ ದ್ವೀಪವನ್ನು ಖದೀಮ ಖೈದಿಗಳನ್ನು ತಂದಿರಿಸುವ ಪ್ರದೇಶವನ್ನಾಗಿ ಮಾಡಿಕೊಂಡಿತ್ತು. ೧೭೮೮ರಿಂದ ೧೮೬೮ರವರೆಗೆ ಬ್ರಿಟನ್ ಅಲ್ಲಿ ಸುಮಾರು ೧,೬೫,೦೦೦ ಖೈದಿಗಳನ್ನು ನೆಲೆಗೊಳಿಸಿತ್ತು. ಅದರಿಂದಾಗಿಯೇ ಈ ದೇಶಕ್ಕೆ ಖೈದಿಗಳ ನಾಡು ಎಂಬ ಹೆಸರು ಬಂದಿತ್ತು. ಹೇರಳವಾದ ನೈಸರ್ಗಿಕ ಸಂಪತ್ತನ್ನು ಹೊಂದಿರುವ ಈ ಭೂಭಾಗ ಉನ್ನತ ಜೀವನಮಟ್ಟ ಹೊಂದಿರುವ ರಾಷ್ಟ್ರ. ೨೦ನೇ ಶತಮಾನದ ಆದಿಯಲ್ಲಿ ಸ್ವತಂತ್ರ ರಾಷ್ಟ್ರವಾದ ಆಸ್ಟ್ರೇಲಿಯ ಬ್ರಿಟನ್ನಿನೊಂದಿಗೆ ನೆಂಟಸ್ತಿಕೆಯನ್ನು ಕಾಯ್ದುಕೊಂಡಿದೆ. ಭಾರತದೊಂದಿಗೆ ಸೌಹಾರ್ದಯುತ ಸಂಬಂಧ ಹೊಂದಿರುವ ಆಸ್ಟ್ರೇಲಿಯದಲ್ಲಿ ಈಚೆಗೆ ನಡೆದಿರುವ ಘಟನೆಗಳು ಕಪ್ಪು ಚುಕ್ಕೆಯಾಗಿದೆ. ಆಸ್ಟ್ರೇಲಿಯ ಸರಕಾರ ತಡಮಾಡದೆ ದುಷ್ಕರ್ಮಿಗಳ ಮೇಲೆ ಕ್ರಮ ಕೈಗೊಳ್ಳಬೇಕು. ಭಾರತೀಯರಿಗೆ, ಭಾರತೀಯ ವಿದ್ಯಾರ್ಥಿಗಳಿಗೆ ಅಗತ್ಯವಾದ ರಕ್ಷಣೆ ನೀಡಬೇಕೆಂಬುದೇ ನಮ್ಮ ಅಪೇಕ್ಷೆ.

ಸೀಯಾರ್ಕೆ
'ಚೌಬೀನೆ', ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಶಿಶುನಾಳ ಶರೀಫರ ಅನುಭಾವ ನೆಲೆ

**ಡಾ|| ಶ್ರೀಧರ ಪಿಸ್ಸೆ**

ಶರೀಫರ ಪದಗಳು ೧೯೧೫ರಲ್ಲೇ ಪ್ರಕಟವಾಗಿದ್ದರೂ ಸರಿಸುಮಾರು ೧೯೮೦ರ ಹೊತ್ತಿಗೆ ಹೆಚ್ಚು ಪ್ರಚಾರ ಪಡೆದುಕೊಂಡವು. ಇದಕ್ಕೆ ಶರೀಫರ ಹೆಚ್ಚಿನ ಪಾಲು ಗೀತೆಗಳು 'ಬರಕೋ ಪದ ಬರಕೋ' ಸಂಗ್ರಹದಲ್ಲಿ ದೊರಕುವಂತಾಗಿದ್ದು, ಅಶ್ವತ್ಥರು ಸಂಗೀತ ಸಂಯೋಜನೆ ಮಾಡಿದ ಶರೀಫ ಗೀತೆಗಳ ಕ್ಯಾಸೆಟ್ ಹೊರಬಂದಿದ್ದು ಹಾಗೂ ಕನ್ನಡದ ಪ್ರಮುಖ ಪತ್ರಿಕೆಗಳು ತಮ್ಮ ವಿಶೇಷಾಂಕಗಳಲ್ಲಿ ಶರೀಫರ ಕುರಿತು ಲೇಖನಗಳನ್ನು ಪ್ರಕಟಿಸಿದ್ದು ಕಾರಣವಿದ್ದಿರಬಹುದು. ಇದರ ಫಲವಾಗಿ ಹತ್ತೊಂಬತ್ತನೇ ಶತಮಾನದ ಶರೀಫ್ ಸಾಹೇಬರು (೧೮೧೯-೧೮೮೯) ಕರ್ನಾಟಕದ ಜನಮನದಲ್ಲಿ ನೆಲೆನಿಂತರು. ನಂತರದಲ್ಲಿ ಅವರ ಜೀವನವನ್ನು ಬಿಂಬಿಸುವ ಚಲನಚಿತ್ರ ನಿರ್ಮಾಣಗೊಂಡು ಬಿಡುಗಡೆಯಾಯಿತು.

ಇಪ್ಪತ್ತನೇ ಶತಮಾನದಲ್ಲಿ ಕರ್ನಾಟಕದ ಸಾಮಾಜಿಕ ಜೀವನದಲ್ಲಿ ಹಿಂದೂ ಮತ್ತು ಮುಸಲ್ಮಾನರು ಅಪನಂಬುಗೆ, ಅನುಮಾನ, ಅವಿಶ್ವಾಸ ಮತ್ತು ಒಂದು ಬಗೆಯ ಅಸಹನೆಯಿಂದ ಪರಸ್ಪರ ವೈರಿಗಳಂತೆ ಕಾಣುತ್ತಿದ್ದ ಪರಿಸರವಿತ್ತು. ಈ ಮನಃಸ್ಥಿತಿ ಇಂದಿನ ದಿನಮಾನದಲ್ಲಿ ಇನ್ನೂ ಹೆಚ್ಚಾಗುತ್ತ ಸಾಗಿದೆ. ಇಂಥ ಸಂದರ್ಭದಲ್ಲಿ ವೈದಿಕ ಭಟ್ಟರೊಬ್ಬರು ಮುಸ್ಲಿಮನೊಬ್ಬನನ್ನು ಶಿಷ್ಯನನ್ನಾಗಿ ಸ್ವೀಕರಿಸಿ ಅವನನ್ನು ಅಪ್ರತಿಮ ಸಾಧಕನನ್ನಾಗಿ ಮಾಡಿದ್ದು ಅಥವಾ ಮುಸ್ಲಿಮ ಸಾಧಕನೊಬ್ಬ ಬ್ರಾಹ್ಮಣ ಗುರುವನ್ನು ಪಡೆದುಕೊಂಡಿದ್ದು ಅಸಂಗತವಾದ ಸಂಗತಿಯಾಗಿತ್ತು. ಅನ್ಯಧರ್ಮೀಯರಲ್ಲಿ ಗುರುಶಿಷ್ಯ ಸಂಬಂಧ ಏರ್ಪಟ್ಟಿದ್ದು ಹೇಗೆ? ಮತ ಸಂಕುಚಿತತೆ ಮತ್ತು ಮೂಲಭೂತವಾದಿ ಕಲ್ಪನೆಗಳಾಚೆ ಬಹುಸಮುದಾಯ ಕೇಂದ್ರಿತ ಆಸಕ್ತಿ ಕುಡಿಯೊಡೆದಿದ್ದು ಹೇಗೆ? ಅಂದು ಇಂಥ ಪ್ರಶ್ನೆಗಳು ಶರೀಫರಲ್ಲಿ ಕುತೂಹಲ ಕೆರಳಲು ಕಾರಣವಾಗಿತ್ತು.

ಶರೀಫರು ಜೀವಿಸಿದ್ದ ಹತ್ತೊಂಬತ್ತನೆಯ ಶತಮಾನದ ಭಾರತದಲ್ಲಿ ಬ್ರಿಟಿಷರು ತಮ್ಮ ವ್ಯಾಪಾರಿ ಸಂಸ್ಥೆಯಾದ ಕಂಪನಿ ಆಡಳಿತದ ಸರಕಾರವನ್ನು ಸಾಮ್ರಾಜ್ಯಶಾಹಿ ಆಡಳಿತದ ಸರಕಾರವನ್ನಾಗಿ ಬದಲಿಸುವ ಹಂತದಲ್ಲಿದ್ದರು. ಆದಿಲ್‌ಶಾಹಿಗಳು ಆಳಿದ್ದ ಬಿಜಾಪುರದ ಶಿಶುನಾಳ ಮತ್ತು ಅದರ ಸುತ್ತಲ ಪ್ರದೇಶದ ಗ್ರಾಮಗಳಲ್ಲಿ ವೀರಶೈವ ಮತ್ತು ಮುಸ್ಲಿಂ ಸಮುದಾಯಗಳು ಪ್ರಧಾನವಾಗಿದ್ದವು. ಅಲ್ಲದೆ ಬ್ರಾಹ್ಮಣರು, ವೀರಶೈವರು ಮತ್ತು ಮುಸ್ಲಿಮರು ಪರಸ್ಪರ ನಂಬುಗೆ ಮತ್ತು ಸ್ನೇಹಭಾವದಲ್ಲಿ ಸಹಜೀವನ ನಡೆಸುತ್ತಿದ್ದರು.

ಇದರ ಪರಿಣಾಮವಾಗಿ ತಂದೆಯ ಮೂಲಕ ಇಸ್ಲಾಂ ಧರ್ಮದ ಅರಿವು ಪಡೆದ ಶರೀಫರಿಗೆ ವೀರಶೈವರ ಕೂಲಿ ಮಠದಲ್ಲಿ ಆರಂಭಿಕ ಕಲಿಕೆಯನ್ನೂ ಕಳಸದ ಗೋವಿಂದ ಭಟ್ಟರ ವೈದಿಕಶಾಲೆಯಲ್ಲಿ ಹೆಚ್ಚಿನ ವಿದ್ಯೆಯನ್ನೂ ಪಡೆಯಲು ಅವಕಾಶ ಒದಗಿತು. ಅಲ್ಲದೆ ತಮ್ಮ ಸಮಕಾಲೀನ ಅನುಭಾವಿ ಸಾಧಕರಾದ ಚಿದಂಬರ ದೀಕ್ಷಿತ, ಗರಗದ ಮಡಿವಾಳಪ್ಪ, ಹುಬ್ಬಳ್ಳಿಯ ಸಿದ್ಧಾರೂಢರು, ಅಗಡಿಯ ಶೇಷಾಚಲ, ನವಲಗುಂದದ ನಾಗಲಿಂಗಸ್ವಾಮಿ, ಗುಡಗೇರಿಯ ಸಂಗಮೇಶ್ವರ ಸ್ವಾಮಿ, ಹುಲಗೂರಿನ ಚನ್ನವೀರಸ್ವಾಮಿ, ಅಂಕಲಗಿಯ ಅಡವಿಸ್ವಾಮಿ, ಸಕ್ಕರಿ ಬಾಳಾಚಾರ್ಯರೊಂದಿಗೆ ಸಂವಾದ ನಡೆಸುತ್ತಿದ್ದರು. ಈ ಮಾತಿಗೆ ಅಧಿಕೃತ ದಾಖಲೆಯಾಗಿ ಶರೀಫರು ಗರಗದ ಮಡಿವಾಳಸ್ವಾಮಿ, ಹೊಸಳ್ಳಿಯ ಬೂದಿಸ್ವಾಮಿ, ಆದಿಸಿದ್ಧರು, ಬಸಹಟ್ಟಿಯ ರುದ್ರಸ್ವಾಮಿ, ಸಿದ್ಧಾರೂಢಸ್ವಾಮಿ, ಆದಿಕೇಶವ, ನವಲಗುಂದದ ನಾಗಜ್ಜ, ಗೋವಿಂದಭಟ್ಟ, ಉಗರಗೋಳ ನಿರ್ವಾಣೆಪ್ಪ, ರೇವಣಸಿದ್ದೇಶ್ವರಸ್ವಾಮಿ, ವೇದದಾಸ ಹಾಗೂ ಕಬೀರದಾಸರೊಂದಿಗೆ ಇರುವ ಅಪರೂಪದ ಛಾಯಾಚಿತ್ರವೊಂದನ್ನು 'ಅರುಹು ಕುರುಹು' ಪತ್ರಿಕೆ ತನ್ನ ಮೊದಲ ಸಂಚಿಕೆಯ ಬೆನ್ನಿನ ಪುಟದಲ್ಲಿ ಪ್ರಕಟಿಸಿದ್ದು ಗಮನಾರ್ಹವಾದುದಾಗಿದೆ. ಇವರಲ್ಲಿ ಬಹುಪಾಲು ಶಕ್ತಿ ವಿಶಿಷ್ಟಾದ್ವೈತ ಹಿನ್ನೆಲೆವುಳ್ಳವರಾಗಿದ್ದು, ಬಹುಸಮುದಾಯಗಳ ಸಮಾಜದಲ್ಲಿ ಅಂದು ವೀರಶೈವ ಮತ ಪ್ರಭಾವಶಾಲಿಯಾಗತ್ತು. ಶರೀಫರು ಗುರು ಗೋವಿಂದಭಟ್ಟ, ಬಸವಣ್ಣ ಮತ್ತು ಅಲ್ಲಮಪ್ರಭುಗಳ ಪ್ರಭಾವಳಿಯೊಳಗೆ ತಮ್ಮ ವ್ಯಕ್ತಿತ್ವ ರೂಪಿಸಿಕೊಂಡಿದ್ದರು ಎಂದು ಬಹುಪಾಲು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಕೋಮುಭಾವನೆ ರಾಜಕಾರಣದ ದಾಳವಾಗಿ ಬಳಕೆಯಾಗಿರಲಿಲ್ಲ. ಬಹುಸಮುದಾಯಗಳ ಸಮಾಜದಲ್ಲಿ ಅಂದು ಮುಸ್ಲಿಂ ಸಮುದಾಯವೂ ಒಂದು ಸಮುದಾಯವಾಗಿ ಸೇರಿಹೋಗಿತ್ತು. ಇದರಿಂದ ಶರೀಫರು ಮುಸ್ಲಿಂ ಕುಟುಂಬದಲ್ಲಿ ಹುಟ್ಟಿದರೂ ಭಾರತೀಯ ತತ್ವ ದರ್ಶನಗಳನ್ನು ರಕ್ತಗತ ಮಾಡಿಕೊಳ್ಳಲು, ಬಹುಸಮುದಾಯಗಳ ನಡುವೆ ಸಮನ್ವಯ ಸಾಧಿಸಲು, ಸಮುದಾಯ ಪ್ರತ್ಯೇಕತೆ ಮೀರಿ ಮಾನವ ಸಮುದಾಯ ಕಟ್ಟಲು ಸಾಧ್ಯವಾಯಿತು. ಉತ್ತರ ಕರ್ನಾಟಕದಲ್ಲಿ ಬಹುಸಮುದಾಯಗಳಿಂದ ಆರಾಧನೆಗೆ ಒಳಗಾಗಿರುವ ಉಳವಿಯ ಚನ್ನಬಸವೇಶ್ವರ, ಸವದತ್ತಿಯ ಎಲ್ಲಮ್ಮ, ಹಂಪಿಯ ವಿರೂಪಾಕ್ಷ, ಶಿರಹಟ್ಟಿಯ ಮೈಲಾರ – ಮುಂತಾದ ದೈವಗಳೊಂದಿಗೆ ಭಾವನಾತ್ಮಕ ಸಂಬಂಧ ಹೊಂದಲು ಸಾಧ್ಯವಾಯಿತು. ಆದರೂ ಶರೀಫರ ಈ ತುಡಿತಕ್ಕೆ ಅವರ ವ್ಯಕ್ತಿತ್ವವನ್ನು ರೂಪಿಸಿದ ಮೂಲತತ್ವ ಯಾವುದು ಎಂಬ ಪ್ರಶ್ನೆ ಕಾಡುತ್ತದೆ. ಶರೀಫರ ಪದಗಳ ಮೂಲಕ ಇದಕ್ಕೆ ಉತ್ತರ ಕಂಡುಕೊಳ್ಳುವ ಪ್ರಯತ್ನ ಮಾಡಬಹುದು.

ಶರೀಫರು ಗುರು ಗೋವಿಂದ ಭಟ್ಟರಲ್ಲಿ ಕೇವಲ ವೈದಿಕ ಪುರಾಣ-ಇತಿಹಾಸಗಳನ್ನು ಮಾತ್ರ ಕಲಿಯಲಿಲ್ಲ. ಅದರೊಂದಿಗೆ ಅವರಿಗೆ ಅದ್ವೈತ ತತ್ವದ ತಳಹದಿಯೂ ದೊರಕಿತು, ಶಾಕ್ತಪಂಥದ ಸಾಧಕ ಮನೋಪ್ರವೃತ್ತಿಯೂ ಬೆಳೆಯಿತು. ಈ ಅಂಶವನ್ನು ಪ್ರಸ್ತಾಪಿಸುವಲ್ಲಿ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ಕಂಡುಬರುವುದಿಲ್ಲ. ಶಾಕ್ತಪಂಥದ ಶ್ರೀಚಕ್ರ ಕಲ್ಪನೆ ಆಧಾರಿತ ಸಾಧನೆಯ ಕ್ರಮಗಳು ಮತ್ತು ನಾಥಪಂಥದ ಕುಂಡಲಿನಿ ಕಲ್ಪನೆ ಆಧಾರಿತ ಸಾಧನೋಪಕ್ರಮದ ಹಂತಗಳು ಸಾಮ್ಯತೆಯನ್ನು ಪಡೆದಿವೆ. ಇದರ ಕಾರಣವನ್ನು ಸಾಧಕ ಪಂಥಗಳ ಚಾರಿತ್ರಿಕ ಬೆಳವಣಿಗೆಯಲ್ಲಿ ಕಾಣಬಹುದು. ಒಂದು ಕಾಲಕ್ಕೆ ನಾಥಪಂಥದ ಇಂಥ ಸಾಧನಾ ಮಾರ್ಗದ ಆಚರಣೆಗಳು 'ವಾಮಾಚಾರ' ಎಂಬ ಹೆಸರಿನಿಂದ ಕರೆಯಿಸಿಕೊಂಡು ಶಿಷ್ಟ ಸಮಾಜದ ಅವಕೃಪೆಗೆ ಒಳಗಾಗಿ ದೂರವುಳಿದಿತ್ತು ಎಂಬುದನ್ನು ಇಲ್ಲಿ ಮರೆಯುವಂತಿಲ್ಲ. ಏಕೆಂದರೆ ಶಕ್ತಿ ವಿಶಿಷ್ಟಾದ್ವೈತ ಆಧಾರಿತ ವೀರಶೈವವೂ ತನ್ನ ಷಟ್‌ಸ್ಥಳ ಸಿದ್ಧಾಂತವೆಂದು ಸಾಧನ ಮಾರ್ಗವನ್ನು ರೂಪಿಸಿ



ಕೊಂಡಿದ್ದು ಕೊನೆಗೆ ಪ್ರೇರಣೆಯೂ ಆಧಾರವೂ ಒದಗಿಸಿದ ನಾಥಪಂಥದ ಕುಂಡಲಿನಿ ಕಲ್ಪನೆಯ ಪರಿಷ್ಕರಣೆಯಿಂದ ಎಂಬುದನ್ನು ನೆನಪಿಸಿಕೊಳ್ಳಬೇಕು. ಶರೀಫರಿಗೆ ಇಸ್ಲಾಂನ ಏಕೇಶ್ವರ ಕಲ್ಪನೆ, ಅದ್ವೈತ, ಶಾಕ್ತ, ಶಕ್ತಿ ವಿಶಿಷ್ಟಾದ್ವೈತ ಕಲ್ಪನೆಗಳು ಜೀವದುಸಿರಾಗಿತ್ತು. ಇವೆಲ್ಲದರ ಬೇರು ನಾಥಪಂಥದಲ್ಲಿ ಆಂಶಿಕವಾಗಿಯೋ ಪರಿಷ್ಕರಣ ರೂಪದಲ್ಲಿಯೋ ಸಾಮ್ಯತೆಯ ರೂಪದಲ್ಲೇ ನೆಲೆಸಿತ್ತು. ಮತ್ತೊಂದು ಮುಖ್ಯ ಅಂಶವೆಂದರೆ, ಶಾಕ್ತ ಮತ್ತು ನಾಥಪಂಥಗಳು ತಾತ್ವಿಕವಾಗಿ ಅವೈದಿಕ ಸಾಂಖ್ಯ ದರ್ಶನಕ್ಕೆ ಋಣಿಯಾಗಿರುವುದು.

ನಾಥ, ಶಾಕ್ತದಂತಹ ಸಿದ್ಧ ಸಾಧಕಪಂಥಗಳು ತಮ್ಮ ಪಂಥದ ಆಚಾರ, ವಿಚಾರ, ತತ್ವ ಕಲ್ಪನೆಗಳನ್ನು ತಮ್ಮ ಮುಂದಿನ ಪರಂಪರೆಗೆ ದಾಟಿಸುವಲ್ಲಿ ಜನಬಳಕೆಯಲ್ಲಿ ಇರುವ ಸಾಮಾನ್ಯ ಭಾಷಾ ಪದ್ಧತಿಯನ್ನು ಬಳಸದೆ ತಮ್ಮದೇ ಆದ ಪ್ರತ್ಯೇಕ ಸಂಕೇತ ಭಾಷಾ ಪದ್ಧತಿಯನ್ನು ರೂಢಿಸಿಕೊಂಡು ಬಳಕೆ ಮಾಡುತ್ತಿದ್ದವು. ಈ ಸಂಕೇತ ಭಾಷೆಯನ್ನು 'ಸಂಧಾ' ಎಂದು ಕರೆಯಲಾಗುತ್ತಿತ್ತು. ಪಂಥದ ಆಚಾರ, ವಿಚಾರಗಳ ವಿಷಯದಲ್ಲಿ ಗೌಪ್ಯತೆಯನ್ನು ಕಾಪಾಡುವುದು ಮತ್ತು ತನ್ನ ಪರಂಪರೆಯನ್ನು ಉಳಿಸಿ ಬೆಳೆಸುವ ದೃಷ್ಟಿ ಈ ಸಂಕೇತ ಭಾಷೆಯ ಉದ್ದೇಶವಾಗಿತ್ತು. ಸಂಕೇತ ಭಾಷಾಬಳಕೆಯ ಮುಂದುವರಿದ ರೂಪವಾಗಿ ಬೆಡಗು ರಚನೆಗಳು ಮೈತಳೆದದ್ದನ್ನು ಕಾಣುತ್ತೇವೆ. ಶಿಷ್ಟ ಸಮಾಜದ ಅಪವ್ಯಾಖ್ಯಾನಗಳಿಂದ ತಪ್ಪಿಸಿಕೊಳ್ಳಲು ಸಿದ್ಧಪಂಥಗಳಿಗೆ 'ಸಂಧಾ' ಭಾಷೆಯ ಬಳಕೆ ಅನಿವಾರ್ಯವಾಗಿ ಇದ್ದಿರಬಹುದು. ಇಂಥ ಸಂಕೇತ ಭಾಷೆಯ ಅರಿವು ಶರೀಫರಿಗಿತ್ತು ಎಂಬ ಸುಳುಹು ಅವರ 'ಕೋಡಗನ ಕೋಳಿ ನುಂಗಿತ್ತ' ಗೀತೆಯ ರಚನಾ ಕೌಶಲ್ಯದಿಂದ ತಿಳಿಯುತ್ತದೆ.

*ಕೋಡಗನ ಕೋಳಿ ನುಂಗಿತ್ತ*
*ನೋಡವ್ವ ತಂಗಿ*
*ಆಡು ಆನೆಯ ನುಂಗಿ*
*ಗೋಡೆ ಸುಣ್ಣವ ನುಂಗಿ*
*ಆಡಲು ಬಂದ ಪಾತರದವಳ ಮದ್ದಳೆ ನುಂಗಿತ*

*ಒಳ್ಳು ಒನಕೆಯ ನುಂಗಿ*
*ಬೀಸುಕಲ್ಲು ಗೂಟವ ನುಂಗಿ*
*ಕುಟ್ಟಲು ಬಂದ ಮುದುಕಿನ ನೊಣವು ನುಂಗಿತ*

*ಹಗ್ಗಮಗ್ಗವ ನುಂಗಿ*
*ಮಗ್ಗವ ಲಾಳ ನುಂಗಿ*
*ಮಗ್ಗದಾಗಿರುವ ಅಣ್ಣನ ಕುಣಿಯು ನುಂಗಿತ*

*ಎತ್ತು ಜತ್ತಗಿ ನುಂಗಿ*
*ಬತ್ತ ಬಾನವ ನುಂಗಿ*
*ಕುಂಟಿ ಹೊಡೆಯೋ ಅಣ್ಣನ ಮೇಳ ನುಂಗಿತ*

*ಗುಡ್ಡ ಗವ್ವರ ನುಂಗಿ*
*ಗವ್ವರ ಇರುವೆ ನುಂಗಿ*
*ಗುರುಗೋವಿಂದನ ಪಾದ ಆತ್ಮ (ನನ್ನನ ?) ನುಂಗಿತ*

– ಇದು ಅಸಾಧ್ಯ ಮತ್ತು ಅಸಾಮಾನ್ಯ ಸಂಗತಿಗಳ ಬಣ್ಣನೆಯಾಗಿ ಸಾಮಾನ್ಯಲೋಕದ ಜೀವಿಗಳಿಗೆ ಕಂಡು ಬರುತ್ತದೆ. ಆದರೆ ಸಾಧಕಲೋಕದ ಜೀವಿಗಳಿಗೆ ಸಾಧನೆಯ ಕ್ರಮ ಮತ್ತು ವಿಧಾನಗಳನ್ನು ತಿಳಿಸುವ ಸಂಗತಿಯಾಗಿದೆ. ಆದರೂ ಇದು ಗುಪ್ತ ಭಾಷೆಯಲ್ಲಿ ರಚಿತವಾದ ಪದವಲ್ಲ. ಗುಪ್ತಭಾಷೆಯ ನಿಗೂಢತೆ ಮತ್ತು ರಹಸ್ಯಮಯತೆ ಈ ರಚನೆಯ ಆಲಂಕಾರಿಕ ಭಾಷೆಯಲ್ಲಿದ್ದೆಯೇ ಹೊರತು ಸಂಕೇತ ಭಾಷೆಯ ಮಟ್ಟದಲ್ಲಿಲ್ಲ. ಹಾಗಾಗಿಯೇ ಶರೀಫರ ಈ ರಚನೆಗೂ ಅಲ್ಲಮಪ್ರಭುವಿನ ಬೆಡಗಿನ ವಚನಗಳಿಗೂ ಕನಕದಾಸರ ಮುಂಡಿಗೆಗಳಿಗೂ ಇರುವ ಸ್ಪಷ್ಟ ವ್ಯತ್ಯಾಸಗಳನ್ನು ಗುರುತಿಸಬಹುದು. 'ಸಂಧಾ' ಭಾಷೆಯ ಮಾದರಿಯನ್ನು ಇಲ್ಲಿ ಕಾವ್ಯಭಾಷೆಯ ಚಮತ್ಕಾರ ಗುಣ ಸಾಧಿಸಲು ಬಳಸಿಕೊಳ್ಳಲಾಗಿದೆ. ಈ ಮೂಲಕ ಕೇಳುಗರಲ್ಲಿ ಕುತೂಹಲ ಉಂಟುಮಾಡಿ ತನ್ನ ಕಡೆ ಗಮನ ಕೇಂದ್ರೀಕರಿಸುವಂತೆ ಒಂದು ಉಪಾಯ/ತಂತ್ರವಾಗಿ ಬಳಕೆ ಮಾಡಿಕೊಂಡಿದೆ. ಅಜ್ಞಾನದ ಅಗಾಧತೆಯನ್ನು ಸಣ್ಣ ಪ್ರಮಾಣದ ಅರಿವು ಹೇಗೆ ಅತ್ಯಾಶ್ಚರ್ಯಕರವಾದ ರೀತಿಯಲ್ಲಿ ಹೋಗಲಾಡಿಸುತ್ತದೆ ಎಂಬ ಇಲ್ಲಿನ ಕ್ರಮ ವಿವರ ಶರೀಫರು ಸಿದ್ಧಪಂಥಗಳ ಗರಡಿಯಲ್ಲಿ ಪಳಗಿದವರು ಎಂಬ ಅಂಶವನ್ನು ಹೊರಗೆಡಹುತ್ತದೆ.

ಶರೀಫರು ಏಕೇಶ್ವರ ವಾದ ಮತ್ತು ನಿರ್ಗುಣ ದೈವಾರಾಧನೆಯನ್ನು ಬಲ್ಲವರು. ಅದ್ವೈತವನ್ನು ಅಪ್ಪಿಕೊಂಡವರು. ಶಕ್ತಿ ವಿಶಿಷ್ಟಾದ್ವೈತವನ್ನು ಸುತ್ತಲ ಪರಿಸರದಲ್ಲಿ ಮನಗಂಡವರು. ಇವೆಲ್ಲದರಲ್ಲಿ ಗುಪ್ತವಾಗಿ ಹರಿದಿರುವ ಶಾಕ್ತ, ನಾಥ, ಸಾಂಖ್ಯದರ್ಶನಗಳ ಸಾಧನೆಯ ಹಾದಿಯಲ್ಲಿ ನಡೆದವರು. ಇವನ್ನೆಲ್ಲ ಏಕತ್ರಗೊಳಿಸಿ 'ಬೋಧ' ಕಲ್ಪನೆಯಲ್ಲಿ ಕಂಡಿರುವ ಕ್ರಮವನ್ನು ಕೆಳಗಿನ ರಚನೆಯಲ್ಲಿ ಕಾಣಬಹುದು.

*ಬೋಧ ಒಂದೇ ಬ್ರಹ್ಮ*
*ನಾದ ಒಂದೇ*
*ಸಾಧನ ಮಾಡುವ ಹಾದಿ ಒಂದೇ*

*ಆದಿ ಪದ ಒಂದೇ*
*ಬಿಂದು ಒಂದೇ ನಿಜಾ-*
*ನಂದ ಒಂದೇ*
*ತಂದೆ ಸದ್ಗುರು ಗೋವಿಂದಗ ಒಂದೇ*

*ಅಂದಿಗಿಂದಿಗೆ ಒಂದೇ*
*ದೋಷ ಒಂದೇ ನಿರ*
*ದೋಷ ಒಂದೇ*
*ಶಿಶುನಾಳಧೀಶನ ಭಾಷೆ ಒಂದೇ*
*ಭವನಾಶ ಒಂದೇ*

– ಸಾಧನೆಯ ಈ ಅದ್ವೈತ ದೃಷ್ಟಿ ಶಕ್ತಿ ವಿಶಿಷ್ಟಾದ್ವೈತದ ಚಹರೆ ಪಡೆದಾಗ ಉಂಟಾಗುವ ಸ್ಥಿತಿಯಾಗಿದೆ. ವೀರಶೈವ ಮಾದರಿಯ ಷಟ್‌ಸ್ಥಲಗಳನ್ನು ಅನುಸರಿಸದ ಶಾಕ್ತಪಂಥ ಶ್ರೀಚಕ್ರ ಮಾದರಿಯನ್ನು ಅನುಸರಿಸುತ್ತದೆ. ಇದನ್ನು 'ಸ್ನೇಹ ಮಾಡಬೇಕಿಂಥವಳ' ವರ್ಣಿಸುತ್ತದೆ.

*ಸ್ನೇಹ ಮಾಡಬೇಕಿಂಥವಳ ಒಳ್ಳೆ*
*ಮೋಹದಿಂದಲಿ ಬಂದು ಕೂಡುವಂಥವಳ*

*ಚಂದ್ರಗಾವಿ ಶೀರಿಯನುಟ್ಟು*
*ಕೆಂದಾವರಿಯ ಕುಪ್ಪಸ ತೊಟ್ಟು*
*ಬಂದಳೋ ಮಂದಿರ ಬಿಟ್ಟು ನಾಲ್ಕು*
*ಮಂದಿಯೊಳಗ ಬಂದು ನಾಚುವಳೆಷ್ಟು*

*ಅರಗಿಳಿಗಳ ಸವಿನುಡಿಯು*
*ಚಲ್ವ ಸುಳಿನಾಭಿ ಕುಚಕುಂಭಗಳ ಹಂಸ ನಡೆಯು*
*ಥಳಥಳಿಸುವ ತೋಳ್ತೊಡೆಯು ಒಳ್ಳೆ*
*ಬಳಕುವ ನಡುವಿನ ತಳಿರಡಿಯು*

*ಕುಸುಮಲೋಚನೆಯಳ ನೋಡಿ*
*ಕಾಮ ವಿಷಯ ಸುರತಸುಖ ದಯದಿಂದ ಬೇಡಿ*
*ವಿನಯ ವಚನದಿ ಮಾತಾಡಿ*
*ದೇವ ಶಿಶುನಾಳಧೀಶನ ದಯದಿಂದ ಕೂಡಿ.*

ಶಾಕ್ತದ ಪರಿಷ್ಕೃತ ಮಾದರಿಯಲ್ಲಿ ನಾಥನ ಗುಪ್ತ ಸಾಧನೆಯ ಕ್ರಮ ಇಲ್ಲಿದೆ. ಇದರ ಸೂಕ್ಷ್ಮತೆ ಈ ಎರಡೂ ಮಾದರಿಗಳ ಕ್ರಮ ವ್ಯತ್ಯಾಸ ಬಲ್ಲವರಿಗೆ ಮನವರಿಕೆಯಾಗುತ್ತದೆ. ಹಾಗಾಗಿ ಇಲ್ಲಿ ಸಾಧನೆಗೆ ಸಂಗಾತಿಯಾದ ಶಕ್ತಿಯನ್ನು ದೈವತ್ವಕ್ಕೇರಿಸದೆ ಪ್ರಿಯತಮೆಯಾಗಿ ಕಂಡು ನಡೆಸಿಕೊಂಡಿದೆ. ಅಲ್ಲದೆ ಸಾಂಖ್ಯದರ್ಶನದ ಪ್ರಕೃತಿ ಪುರುಷ ಕಲ್ಪನೆಗಳು ಬೇರೆ ಬೇರೆಯಾಗಿರದೆ ಒಂದರೊಳಗೊಂದು ಇದ್ದು ಪರಸ್ಪರ ಅವಲಂಬನೆಯಲ್ಲೇ ತಮ್ಮ ಪರಮ ಸ್ಥಿತಿಯನ್ನು ಉಳಿಸಿಕೊಂಡಿರುವ ಕ್ರಮವನ್ನು ಅರಸಲಾಗಿದೆ.

'ಜೀವ-ಶಿವರ' ಮಿಲನವನ್ನು ಸ್ತ್ರೀ ಪುರುಷ ಸಂಗದ ಚಿತ್ರಣದ ಮೂಲಕವೇ ಶರೀಫರು ನೀಡುತ್ತಾರೆ. 'ಮುಕ್ತಿ' ಅಥವಾ 'ನಿರ್ವಾಣ'ದ ಅನುಭವವನ್ನು ಮಿಲನದ ಉತ್ಕಟ ರತ್ಯಾಸಕ್ತಿಯ ಮೂಲಕವೇ ಕೊಡಬಯಸುತ್ತಾರೆ.

ಈ ಮೇಲಿನ ಪದದಲ್ಲಿ ಮುಕ್ತಿಯನ್ನು ಹೆಣ್ಣಿಗೆ ಹೋಲಿಸಿ, ಅವಳ ಮಧುರ ಸಂಗಕ್ಕಾಗಿ ಹಾತೊರೆಯುವ ಪ್ರೇಮಿಯೊಬ್ಬನು ಅವಳನ್ನು ವರ್ಣಿಸುವ ರೀತಿಯಲ್ಲಿಯೇ ಬಣ್ಣನೆ ಮಾಡಿದ್ದನ್ನು ಕಾಣಬಹುದು. ಶರೀಫರ ದೃಷ್ಟಿಯಲ್ಲಿ

## ನವಕರ್ನಾಟಕ ಮತ್ತು 'ಹೊಸತು' ಬಳಗದ ಅಭಿನಂದನೆಗಳು

ಹಲವು ಯಶಸ್ವಿ ಚಲನಚಿತ್ರಗಳ ಛಾಯಾಗ್ರಾಹಕ, ೨೦೦೮ನೇ ಸಾಲಿನ ಪ್ರತಿಷ್ಠಿತ ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ಪುರಸ್ಕೃತರಾದ ಶ್ರೀ ವಿ. ಕೆ. ಮೂರ್ತಿ ಅವರಿಗೆ

ತಮ್ಮ 'ಕ್ರೌಂಚ ಪಕ್ಷಿಗಳು' ಕಥಾ ಸಂಕಲನಕ್ಕಾಗಿ ೨೦೦೯ನೇ ಸಾಲಿನ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತರಾದ ಶ್ರೀಮತಿ ವೈದೇಹಿ ಅವರಿಗೆ

ಭಕ್ತನಾದವನಿಗೆ ಈ 'ಮುಕ್ತಿ ಲಲನೆ'ಯ ಸಂಗ ಸಾಧ್ಯವಾಗುವುದು ಭಗವಂತನ ಅನುಗ್ರಹದಿಂದಲೇ. ಭಗವಂತನ ಲೀಲಾ ವಿನೋದಗಳನ್ನು ಅರಿತು ಉಭಯ ಭೇದಗಳನ್ನು ಮರೆಯಬಲ್ಲ ಹಂತ ತಲುಪಿದವನಿಗೆ ಈ ಮುಕ್ತಿ ಕಾಂತೆಯ ಸುಖ ದೊರಕುತ್ತದೆ.

''ಜೀವನೂ ಶಿವನೂ ಬೇರೆಯಲ್ಲ. ಶಿವನ ಮಾಯಾ ಶಕ್ತಿಯು ಸೃಷ್ಟಿಸಿದ ಆವರಣದಿಂದಾಗಿ ತಾನು ಬೇರೆಯೆಂದು ತಿಳಿದುಕೊಳ್ಳುತ್ತಾನೆ. ಶಿವನ ಶಕ್ತಿಯೇ ಮಾಯೆಯಾಗಿ ಜೀವ-ಶಿವರಿಗೆ ಭೇದವನ್ನುಂಟುಮಾಡುತ್ತದೆ. ಆದರೂ ಈ ಮಾಯೆಯ ನಿಜವಾದ ಅರಿವು ಉಂಟಾದಮೇಲೆ ಈ ಶಕ್ತಿಯೇ ಭಕ್ತಿಯಾಗಿ ಜೀವನವನ್ನು ಶಿವನೊಡನೆ ಸಮರಸ ಗೊಳಿಸುತ್ತದೆ. ಜೀವನಿಗೆ ತಾನೇ ಶಿವನೆಂಬುದು ಅರಿವಾದಾಗ ಅವನಿಂದ ಬೇರೆಯಾಗಿ ಕಂಡ ಮಾಯಾ ಶಕ್ತಿಯು ಅವನಲ್ಲಿಯೇ ಲೀನವಾಗುತ್ತದೆ. ಈ ಸ್ವರೂಪ ದರ್ಶನವೇ ಮುಕ್ತಿ ಅಥವಾ ಮೋಕ್ಷ. ಜೀವನಿಗೆ ತಾನೇ ಶಿವನೆಂದು ತಿಳಿದ ಮೇಲೆ ತನ್ನದೇ ಶಕ್ತಿಯನ್ನು ತನ್ನೊಳಗೆ ಒಳಗೊಳ್ಳುವ ಕ್ರಿಯೆಯನ್ನೇ ಶರೀಫರು ರತಿಭಾವದಿಂದ ವರ್ಣಿಸಿರಬೇಕು,'' ಎಂಬ ಆರ್. ಪಿ. ಹೆಗಡೆಯವರ ಬಿಚ್ಚುನೋಟದಲ್ಲಿ ಪೌರಾಣಿಕ ಆಯಾಮವಿದೆ. ಜೀವ-ಶಿವರ ಕಲ್ಪನೆಯನ್ನು ಇವರು ಸಾಂಖ್ಯದ ಪ್ರಕೃತಿ-ಪುರುಷ ಕಲ್ಪನೆಗೆ ಪರ್ಯಾಯವಾಗಿ ಬಳಕೆ ಮಾಡಿದ್ದಾರೆ. ಮಾನವ ದೇಹದಲ್ಲಿ ಪ್ರಕೃತಿ ನಿಯಮಕ್ಕೆ ಒಳಪಟ್ಟು ನಡೆಯುವ ದೇಹ ಮತ್ತು ಇಚ್ಛಾಶಕ್ತಿಯನ್ನುಳ್ಳ ಮನಸ್ಸು – ಇವು ಸಾಂಖ್ಯದರ್ಶನದಲ್ಲಿ ಪ್ರಕೃತಿ-ಪುರುಷ ಕಲ್ಪನೆಯಲ್ಲಿ ಪ್ರತೀಕ ಗಳಾಗಿವೆ. ಇಷ್ಟನ್ನು ಸ್ಪಷ್ಟಪಡಿಸಿಕೊಂಡರೆ, ಸಾಧನಾ ಮಾರ್ಗದಲ್ಲಿ ಅನುಸರಿಸುವ ನಿಗ್ರಹ ಮತ್ತು ಶಕ್ತಿ ಸಂಚಯ ಕಲ್ಪನೆಯ ಸಾಮಾಜಿಕ ವಾಸ್ತವ ಮತ್ತು ಅದರ ಇತರ ಆಯಾಮಗಳ ಉಪಯುಕ್ತ ಅಂಶಗಳು ತೆರೆದುಕೊಳ್ಳುತ್ತವೆ. ದೇಹ ಮತ್ತು ಮನಸ್ಸುಗಳ ಪರಸ್ಪರ ಸಂಬಂಧ ಮತ್ತು ಅವನ್ನು ನಿಯಂತ್ರಣಕ್ಕೆ ಒಳಪಡಿಸದೆ ಹಿಡಿತದಲ್ಲಿ ಇಟ್ಟು ಕೊಳ್ಳುವ ಸಾಮಾಜಿಕ ಉಪಯುಕ್ತತೆ ಮಾನವನ ನಾಗರಿಕ ನಡವಳಿಕೆ ಮತ್ತು ವ್ಯಕ್ತಿತ್ವದೊಂದಿಗೆ ಮೇಳಗೊಂಡಿವೆ.

ಅವೈದಿಕ ನಾಥಪಂಥದಲ್ಲಿ ಅವೈದಿಕ ಸಾಂಖ್ಯ ದರ್ಶನದ ಮುಂದುವರಿದ ಹಂತವನ್ನು ಕಾಣುತ್ತೇವೆ. ಸಾಂಖ್ಯದಂತೆ ನಾಥವೂ ಮಾನವ ದೇಹದೊಳಗೆ ಜೀವ ಚೈತನ್ಯಶಕ್ತಿಯನ್ನು ಕಂಡು ಅರಸುತ್ತದೆ. ದೇಹ-ಜೀವ ಕಲ್ಪನೆಯೇ ಬಸವಣ್ಣನವರಲ್ಲಿ ಸ್ಥಾವರ-ಜಂಗಮ ಕಲ್ಪನೆಯಾಗಿ ಒಡಮೂಡಿರುವುದು ತೋರಿಬರುತ್ತದೆ. ಅದರ ಮುಂದುವರಿದ ರೂಪವಾಗಿ ಶರೀಫರ 'ಗುಡಿಯ ನೋಡಿರಣ್ಣ' ಕಂಡುಬರುತ್ತದೆ. ಥಟ್ಟನೆ ಬಸವಣ್ಣನವರ 'ಉಳ್ಳವರು ಶಿವಾಲಯ ಮಾಡುವರು' ವಚನ ನೆನಪಿಗೆ ಬರುತ್ತದೆ. ಇವೆರಡರ ನಡುವೆ ಸಾಮ್ಯತೆ ಎದ್ದುಕಾಣುವಂತೆ ಇರುವುದು ಅಚ್ಚರಿಯೇನಲ್ಲ. ಬಸವಣ್ಣನವರ ಸ್ಥಾವರ-ಜಂಗಮ ಕಲ್ಪನೆಯಂತೆ ಶರೀಫರು 'ಪರಾತ್ಪರ ಬ್ರಹ್ಮರೂಪ' ಕಲ್ಪನೆಯನ್ನು ದೇಹದ ಜೀವ ಚೈತನ್ಯದಡಿ ಬಣ್ಣಿಸಿದ್ದಾರೆ.

ಗುಡಿಯ ನೋಡಿರಣ್ಣ
ದೇಹದ ಗುಡಿಯ ನೋಡಿರಣ್ಣ

ಗುಡಿಯ ನೋಡಿರಿದು
ಪೊಡವಿಗೆ ಒಡೆಯನು
ಅಡಗಿಕೊಂಡು ಕಡುಬೆಡಗಿನೊಳಿರುತಿಹ
ಗುಡಿಯ ನೋಡಿರಣ್ಣ

ಮೂರು ಮೊನೆಯ ಕಲ್ಲು ಅದರೊಳು
ಜಾರುತಿರುವ ಕಲ್ಲು
ಧೀರ ನಿರ್ಗುಣನುಸಾರ ಸಗುಣದಲಿ
ತೋರಿ ಅಡಗಿ ತಾ ಬ್ಯಾರಾಗಿರುತಿಹ
ಗುಡಿಯ ನೋಡಿರಣ್ಣ

ಆರು ಮೂರುಕಟ್ಟಿ ಮೇಲಕೆ
ಏರಿದವನು ಘಟ್ಟಿ
ಭೇರಿ ಕಾಳಿ ಶಂಖ
ಬಾರಿಸು ನಾದದಿ
ಮೀರಿದಾನಂದ ತೋರಿ ಹೊಳೆಯುತಿಹ
ಗುಡಿಯ ನೋಡಿರಣ್ಣ

ಸಾರುತಿಹವು ದಿವಸ ಬಹುದಿನ
ಹೋಗಿ ಮಾಡಿ ವಾಸ
ಯೋಗಿರಾಜ ಶಿಶುನಾಳಧೀಶ ತಾ-
ನಾಗಿ ಪರಾತ್ಪರ ಬ್ರಹ್ಮರೂಪನಿಹ
ಗುಡಿಯ ನೋಡಿರಣ್ಣ

ಸಾಮಾನ್ಯತ್ವ, ಸಾಧನತ್ವ ಮತ್ತು ದೈವತ್ವದ ನೆಲೆಗಳೆಲ್ಲ ವನ್ನು ಶರೀಫರು ದೇಹದಲ್ಲೆ ಕಂಡಿದ್ದಾರೆ. 'ಏನ ಕೊಡ ಏನ ಕೊಡವ' ಇಂಥದೇ ಮತ್ತೊಂದು ರಚನೆಯಾಗಿದೆ. ಮಾನವ ದೇಹವನ್ನು ಅಲ್ಲಿ ಗುಡಿಯೊಂದಿಗೆ ಹೋಲಿಸಿ ದೈವಾಂಶದ ಪಾವಿತ್ರ್ಯವನ್ನು ಅರಸಿದ್ದರೆ, ಇಲ್ಲಿ ಕೊಡ ದೊಂದಿಗೆ ಸಮೀಕರಿಸಿ ಸಾಮಾಜಿಕಾಂಶದ ವಾಸ್ತವವನ್ನು ಮನಗಾಣಲಾಗಿದೆ.

ಏನ ಕೊಡ ಏನ ಕೊಡವ
ಹುಬ್ಬಳ್ಳಿ ಮಾಟ ಏನ ಚೆಂದುಳ್ಳ ಕೊಡವ

ತಿಕ್ಕಿಲ್ಲ ಬೆಳಗಿಲ್ಲ ತಳತಳ ಹೊಳಿತದ
ಕಂಚಿಂದಲ್ಲ ತಾಮ್ರದ್ದಲ್ಲ ಮಿರಿಮಿರಿ ಮಿಂಚತದ

ಆರುಮಂದಿ ಅಕ್ಕ-ತಂಗ್ಯಾರು ಮೀರಿ ಮಿಂಚಿದ ಕೊಡ
ಮೂರು ಮಂದಿ ಮುತ್ತೈದಿಯರು ಲೋಲಾಡಿದ ಕೊಡ

ಶಿವರಾತ್ರಿ ಜಾತ್ರೆಗೆ ಹೋಗಿ ಸಿದ್ಧರಾಮನ ದರ್ಶನವಾಗಿ
ಮಳವ್ವ ಬಾಜಾರದಲ್ಲಿ ಬಾಳ ಹೋತವ್ವ ಕೊಡ

ಆರು ಮಂದಿ ಅಕ್ಕ-ತಂಗ್ಯಾರು ಜತ್ತಿಲೆ ನೀರಿಗೆ ಹೋಗಿ
ಜರ್‍ರನೆ ಜಾರಿಬಿದ್ದು ಸಿಗದ್ಯಂಗ ಹೋತವ್ವ ಕೊಡ

ಶಿಶುನಾಳಧೀಶನು ತಿದ್ದಿ ಮಾಡಿದ ಕೊಡ
ಬುದ್ಧಿವಂತರು ತಿಳಿದು ನೋಡಿರಿ ಕೊಡ

ಈ ದೇಹ ಆರು ಮಂದಿ ಅಕ್ಕ-ತಂಗಿಯರನ್ನು ಮೀರಿ ಮಿಂಚುವುದೆಂದರೆ, ಷಟ್‌ಸ್ಥಲ ಅಥವಾ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಗುಣಗಳನ್ನು ಹೊಂದಿಯೂ ಮೀರಿದುದೆಂದು ಹೇಳಿದೆ. ಮೂರು ಮಂದಿ ಮುತ್ತೈದೆಯರು ಅಂದರೆ ದೇಹದ ಸ್ಥೂಲ ಸೂಕ್ಷ್ಮ ಸಂಬಂಧಿತ ಕಾರಣ ಶರೀರಗಳು ಇದರ ಹಿಡಿತದಲ್ಲಿದೆ ಎಂದು ಹೇಳಿದೆ. ಇಲ್ಲಿ ಮತ್ತೊಂದು ಎಚ್ಚರಿಕೆ ಇದೆ. ಮಾನವ ದೇಹ ತನ್ನ ಆರು ಗುಣಗಳನ್ನು ಕಳೆದುಕೊಂಡು ಬಿಟ್ಟರೆ ತನ್ನ ಅಸ್ತಿತ್ವವನ್ನೇ ಕಳೆದುಕೊಂಡುಬಿಡುತ್ತದೆ ಎಂದು ಗಂಭೀರ ದನಿಯಲ್ಲಿ ಗಮನಸೆಳೆಯುತ್ತದೆ. ಇದು ಈ ಗುಣಗಳನ್ನು ನಾಶಪಡಿಸದೆ ತನ್ನ ಹಿಡಿತದಲ್ಲಿ ಇಟ್ಟುಕೊಳ್ಳಬೇಕು ಎಂಬುದರ ಸೂಚನೆ. ಅವೈದಿಕ ನಾಥ ಪಂಥದ ವಿಚಾರ ಕಲ್ಪನೆಗಳಿಂದ ಪ್ರಭಾವಿತವಾಗಿರುವ ವೈದಿಕ ಶೈವಪಂಥ ವಿಚಾರಧಾರೆಗಳನ್ನು ಸ್ವೀಕರಿಸಿದೆ ಎಂಬುದನ್ನು ಇಲ್ಲಿ ಪರೋಕ್ಷವಾಗಿ ಸೂಚಿಸಿದೆ. 'ತೇರನೆಳೆಯುತಾರೆ ತಂಗಿ' ಇಂಥದೇ ಮತ್ತೊಂದು ರಚನೆಯಾಗಿದ್ದು, ದೇಹವನ್ನು ತೇರಿಗೆ ಸಂಕೇತಿಸಲಾಗಿದೆ.

ತೇರನೆಳೆಯುತಾರೆ ತಂಗಿ
ನೋಡಲಿಕ್ಕೆ ಹೋಗುನು ಬಾರೆ

ನಾಕು ಗಾಲಿಗೆ ಒಂದೇ ಜೋಡಿ
ಆಶಾ ಎಂಬೋ ಅಚ್ಚು ಮಾಡಿ

ಎಂಟು ಕಂಬದ ಮಂಟಪ ಕಟ್ಟಿ
ಬಂಟರು ಅವರು ಇವರು ಕೂಡಿ

ಶಿಶುವಿನಾಳಧೀಶ ದೇವನ
ವ್ಯಸನದಿಂದ ಎಲ್ಲ ಜನರು ಕೂಡಿ.

ಸಾಧನತ್ವದಿಂದ ದೇಹ ದೈವೀ ನೆಲೆಗೆ ಅಥವಾ ಪೂಜ್ಯ ಭಾವನೆಗೆ ಒಳಗಾಗುತ್ತದೆ, ಆಗ ಅದು ಸಮುದಾಯದ ಭಾಗವಾಗುತ್ತದೆ ಎಂದಿಲ್ಲಿ ಸೂಚಿತವಾಗಿದೆ. ಸಾಧನತ್ವ ಕಳೆದುಕೊಂಡ ದೇಹ ಹೇಗೆ ಸಾಮಾನ್ಯತ್ವದಿಂದ ಅಧೋಗತಿಗೆ ಇಳಿಯುತ್ತದೆ ಎಂಬ ಅಂಶವನ್ನು 'ಸೋರುತಿಹುದು ಮನೆಯ ಮಾಳಿಗೆ' ಕಾಣಿಸುತ್ತದೆ.

ಸೋರುತಿಹುದು ಮನೆಯ ಮಾಳಿಗೆ ಅಜ್ಞಾನದಿಂದ
ಸೋರುತಿಹುದು ಮನೆಯ ಮಾಳಿಗೆ

ಸೋರುತಿಹುದು ಮನೆಯ ಮಾಳಿಗೆ
ದಾರುಗಟ್ಟಿ ಮಾಳ್ಪರಿಲ್ಲ
ಕಾಲ ಕತ್ತಲೆಯೊಳಗೆ ನಾನು
ಮೇಲಕೇರಿ ಮೆತ್ತಲಾರದೆ

ಮುರುಕು ಜಂತಿ ಹುಳುಕು ತೊಲೆಯು
ಮುರಿದು ಕೊರಿದು ಕೀಟ ಸರಿದು
ಮುರುಕು ಚಪ್ಪರ ಜೀರುಗಿಂಡಿ
ಮೇಲಕೇರಿ ಮೆಟ್ಟಲಾರೆ

ಕರಕಿ ಹುಲ್ಲು ಕಸವು ಹತ್ತಿ
ದುರಿತ ಭವದಿ ಇರುವೆ ಮುತ್ತಿ
ಅಳಲ ಮಳಲ ತಿಳಿಯ ಮಣ್ಣು
ಕೆಳಗೆ ಮೇಲೆ ಹಾಕಲಾರದೆ

ಕಾಂತೆ ಕೇಳೆ ಕರುಣದಿಂದ
ಬಂತು ಕಾಣೆ ಹುಬ್ಬಿ ಮಳೆಯು
ಈಗ ಶಿಶುವಿನಾಳ ಗ್ರಾಮಕೆ
ಮೇಘರಾಜ ಒಲಿದು ಬಂದ.

ಈ ಪದ ಬಸವಣ್ಣನ 'ಮನೆಯೊಳಗೆ ಮನೆಯೊಡೆಯ ನಿದ್ದಾನೊ ಇಲ್ಲವೊ' ವಚನವನ್ನು ತನ್ನ ಚಿಂತನಾಕ್ರಮದಲ್ಲಿ ಹೋಲುತ್ತದೆ. ಇವೆರಡೂ ರಚನೆಗಳು ದೇಹದಲ್ಲಿ ಚೈತನ್ಯ ಶಕ್ತಿ ನೆಲೆಸಿರುವುದನ್ನು ಒಪ್ಪಿತ ನೆಲೆಯಲ್ಲಿ ಪ್ರಸ್ತಾಪಿಸುತ್ತವೆ,

ಸಾಧನೆಗೆ ಒಳಗಾಗದ ಕ್ರಿಯಾಹೀನ ಸ್ಥಿತಿಯಲ್ಲಿ ನಿಷ್ಫಲತೆಗೆ ಸಂದಿರುವುದನ್ನು ಕಾಣಿಸುತ್ತವೆ. ಆದರೂ ಶರೀಫರ ಪದದಲ್ಲಿ ದೈವಾನುಕೃಪೆಯ ಭರವಸೆಯಿದೆ, ಆಶಾವಾದಿತನ ವ್ಯಕ್ತವಾಗಿದೆ. ಇದು ಇಲ್ಲಿನ ವಿಶೇಷ ಅಂಶ.

ಹಾದಿ ತಪ್ಪಿದ ಸಾಧಕನ ಸರಿ ದಾರಿ ಯಾವುದು ? ಗುರುಸ್ಥಾನದಲ್ಲಿರುವ ವ್ಯಕ್ತಿಯ ಸೂಕ್ತ ಮಾರ್ಗದರ್ಶನ, ತಪ್ಪು ತಿದ್ದುವ ಕ್ರಮ ಯಾವ ಬಗೆಯದು ? ಇಂಥ ಪ್ರಶ್ನೆಗಳಿಗೆ ಉತ್ತರ ರೂಪದಲ್ಲಿದೆ 'ತರವಲ್ಲ ತಗಿ ನಿನ್ನ ತಂಬೂರಿ' ಪದ.

ತರವಲ್ಲ ತಗಿ ನಿನ್ನ ತಂಬೂರಿ
ಸ್ವರ ಬರದೆ ಬಾರಿಸದಿರು ತಂಬೂರಿ
ಸರಸ ಸಂಗೀತದ ಕುರುಹುಗಳರಿಯದೆ
ಕರದೊಳ್ಹಿಡಿಬ್ಯಾಡ ತಂಬೂರಿ

ಮಧ್ಯದೊಳೇಳು ನಾದದ ತಂಬೂರಿ ಅದ್ನ
ತಿದ್ದಿ ನುಡಿಸಬೇಕು ತಂಬೂರಿ
ಸಿದ್ಧ ಸಾಧಕರ ಸುವಿದ್ಯಕ್ಕೆ ಒದಗುವ
ಬುದ್ಧಿವಂತಗೆ ತಕ್ಕ ತಂಬೂರಿ

ಬಾಳಬಲ್ಲವರಿಗೆ ತಂಬೂರಿ ದೇವ
ಬಾಳಾಕ್ಷ ರಚಿಸಿದ ತಂಬೂರಿ
ಹೇಳಲಿ ಏನಿದರ ಹಂಚಿಕೆಯರಿಯದಂಥ
ತಾಳಗೇಡಿಗೆ ಸಲ್ಲ ತಂಬೂರಿ

ಸತ್ಯ ಸುಗುಣವಂತರಿಗೆ ತಂಬೂರಿ ಇದ
ನಿತ್ಯ ಉತ್ತಮರ್ಹಾಡುವ ತಂಬೂರಿ
ಬತ್ತೀಸರಾಗದ ಬಗೆಯನರಿಯದಂಥ
ಕತ್ತೀಗಿನ್ಯಾತಕೆ ತಂಬೂರಿ

ಅಸಮ ಸುಮ್ಯಾಳಕ ತಂಬೂರಿ ಇದು
ಕುಶಲರಿಗೊಪ್ಪುವ ತಂಬೂರಿ
ಶಿಶುನಾಳ ಗ್ರಾಮದೊಳು ಓದುವ ಪುರಾಣದಿ
ಹಸನಾಗಿ ಬಾರಿಸು ತಂಬೂರಿ.

ಇಲ್ಲಿ ಸಂಗೀತ ಸಾಧನೆಯ ಅಡೆತಡೆಗಳು, ಸುಗಮತೆಗಳ ಮೂಲಕ ಸಿದ್ಧಿಸಾಧನೆಯ ರೀತಿ-ನೀತಿ, ಇತಿ-ಮಿತಿಗಳನ್ನು ತಿಳಿಯಪಡಿಸಲಾಗಿದೆ. ಸಂಗೀತ ಸಾಧನೆ ಅನ್ಯ ವಿದ್ಯೆ ಸಾಧನೆಗಿಂತ ಬೇರೆ ಬಗೆಯದಾಗಿರುವ ಹಾಗೆಯೇ ಅನುಭಾವದ ಸಿದ್ಧಿ-ಸಾಧನೆ ಕೂಡ ಬೇರೆ ತೆರನಾದುದೆ ಆಗಿವೆ. ಸಾಧನೆಯ ದೀಕ್ಷೆ ತೊಡದ ಸಾಮಾನ್ಯ ವ್ಯಕ್ತಿಗೆ ಯಾವ ಬಗೆಯ ಸಾಧನೆಯೂ ದಕ್ಕುವಂತಹದ್ದಲ್ಲ. ಸಾಧಕರು ಸಾಮಾನ್ಯರಂತೆ ತಮ್ಮ ಹಾದಿಯಲ್ಲಿ ಅಪಸ್ವರ ಹೊರಡಿಸಿದರೆ 'ತತ್ವ ಬೋಧದೊಳಗಿದ್ದು ಭವಬಾಧೆಯನು ಗೆದ್ದು' ಮುಂದುವರಿಯಲು ಸಾಧ್ಯವಿಲ್ಲ. ಹೀಗೆ ಇಲ್ಲಿ ಅನುಭಾವ ಸಾಧನೆ/ದೇಹ-ಜೀವ ಸಾಧನೆಯ ವಿಧಿವಿಧಾನಗಳನ್ನು ಬಿಡಿಸಿಟ್ಟಿದೆ.

ಸಾಮಾನ್ಯ ವ್ಯಕ್ತಿ ಸಿದ್ಧಿ-ಸಾಧಕನಾಗಿ ಪರಿವರ್ತನೆ ಹೊಂದ ಬೇಕಾದಲ್ಲಿ ಈ ವಿಧಿ ವಿಧಾನಗಳನ್ನು ಅನುಸರಿಸುವುದು, ದೇಹ-ಜೀವ ತತ್ವವನ್ನು ಸಾಧನೆ ಮಾಡುವುದು ಜರೂರಾಗಿದೆ. ಆಗ ಬಿದಿರು ಕೂಡ ಕೊಳಲು ಆಗಿ ಬದಲಾಗುತ್ತದೆ ಎಂಬ ಆಶಯ 'ಬಿದಿರು ನಾನಾರಿಗಲ್ಲದವಳು' ಪದದಲ್ಲಿದೆ.

ಬಿದಿರು ನಾನಾರಿಗಲ್ಲದವಳು
ಹುಟ್ಟುತ ಹುಲ್ಲಾದೆ
ಬೆಳೆಯುತ ಮರವಾದೆ
ಸುಂದರ ಸ್ತ್ರೀಯರಿಗೆ ಕೇರುವ ಮರವಾದೆ

ಮುದುಕಗೆ ಬಡಿಗ್ಯಾದೆ
ಮುತ್ಯಾಗೆ ಬೆತ್ತವಾದೆ
ದೊಡ್ಡ ದೊಡ್ಡ ಮಹಾತ್ಮರಿಗೆ ಕೈಯೊಳಗಿನ ಬೆತ್ತವಾದೆ

ಅಂಬಿಗನಿಗೆ ಕೋಲಾದೆ
ದಂಡಿಗಿ ನಾನಾದೆ
ನೀಟುಳ್ಳ ಹುಡುಗರಿಗೆ ಬೇಟೆಯ ಬಡಿಗ್ಯಾದೆ

ಪಲ್ಲಕ್ಕಿಗೆ ದಂಡಿಗಿಯಾದೆ
ಪತ್ರಿಗೆ ಬುಟ್ಟಿಯಾದೆ
ಎಲ್ಲಮ್ಮನ ಗುಡ್ಡದೊಳಗೆ ಅಡ್ಲಿಗಿ ನಾನಾದೆ

ಹಂದರ ಹಾಲುಗಂಬನಾದೆ
ದಂಡಿ ಬಾಸಿಂಗನಾದೆ
ದೊಡ್ಡ ದೊಡ್ಡ ಮರದೊಳಗೆ ಕಜ್ಜಾಯ ಬುಟ್ಟಿಯಾದೆ

ತಿಪ್ಪಿಯ ತೆಳಗಿದ್ದ
ಅದರುದ್ದ ಬೆಳೆದಿದ್ದ
ಸಿದ್ಧರಾಮೇಶ್ವರನಿಗೆ ನಂದಿಕೋಲಾದೆ

ದೇಶದೊಳು ಶಿಶುನಾಳ-
ಧೀಶನ್ನ ಮಠದೊಳಗೆ
ಸಾಧುರ ಕೈಯೊಳಗೆ ಏಕ ದಾರಿ ಕೊಳವೆಯಾದೆ.

ಬಿದಿರು ಇಲ್ಲಿ ಮಾನವ ದೇಹದ ಸಂಕೇತವಾಗಿದೆ. ಬಿದಿರಿನ ಸಾಮಾಜಿಕ ಉಪಯುಕ್ತತೆಯ ಬಣ್ಣನೆ ಮೂಲಕ ದೇಹದ ಉಪಯುಕ್ತತೆಯನ್ನೂ ಸಾರಿದೆ. ಅನುಭಾವ ಸಾಧನೆಯಲ್ಲಿ ಇವೆರಡೂ ಸಲಕರಣವಾಗಿರುವುದನ್ನು ಕಾಣಿಸಿದೆ. ಈ ಮೂಲಕ ನಾಥಪಂಥದ ಸಾಧನೆಯ ಕಲ್ಪನೆಯನ್ನು ತನ್ನ ರಚನೆಯ ಒಳನೇಯ್ಗೆಯಾಗಿ ಹೆಣೆದಿದೆ.

ಈ ಎಲ್ಲ ಅಂಶಗಳು ಶರೀಫರಲ್ಲಿ ಮುಖ್ಯವಾಗಿ ಕಾಣುವ ಮತಧರ್ಮಗಳಾಚೆಗಿನ ನಿಲುವಿಗೆ ಅವರು ಹುಟ್ಟಿದ ಪ್ರದೇಶದ ಸಾಮಾಜಿಕ ಮತ್ತು ರಾಜಕೀಯ ಪರಿಸರ ಮಾತ್ರ ಕಾರಣವಾಗಿರದೆ ಅದ್ವೈತ, ಶಾಕ್ತ, ನಾಥ, ಸಾಂಖ್ಯದರ್ಶನದ ಬೇರುಗಳು ಹೇಗೆ ಮೂಲಾಧಾರವಾಗಿವೆ ಎಂಬುದನ್ನು ಕಾಣಿಸುತ್ತವೆ.

ಡಾ॥ ಶ್ರೀಧರ ಓಸ್ಲೆ
ನಂ. ೬೩, ದೇಸಾಯಿ ಓಣಿ, ಕಮಲಾಪುರ - ೫೮೩ ೨೨೧
ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ

## ಸಾದರ ಸ್ವೀಕಾರ

**ಶಂಕರ ಮೊಕಾಶಿ ಪುಣೇಕರ** (ನವಕರ್ನಾಟಕ ಸಾಹಿತ್ಯ ಸಂಪದ ಮಾಲೆ) ಡಾ॥ ಜಿ. ಎನ್. ಉಪಾಧ್ಯ
**ಪುಟ : ೯೬** **ಬೆಲೆ : ರೂ. ೬೦**

**ಜಿ. ಎಸ್. ಆಮೂರ** (ನವಕರ್ನಾಟಕ ಸಾಹಿತ್ಯ ಸಂಪದ ಮಾಲೆ) ಬಾಲಸುಬ್ರಹ್ಮಣ್ಯ ಕಂಜರ್ಪಣೆ
**ಪುಟ : ೯೬** **ಬೆಲೆ : ರೂ. ೬೦**
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಶ್ರೀಕೃಷ್ಣ ಸಂದೇಶ ಮತ್ತು ಇತರ ನಾಟಕಗಳು** ಸಿ. ಎನ್. ಕೃಷ್ಣಮೂರ್ತಿ
**ಪುಟ : ೨೫೪** **ಬೆಲೆ : ರೂ. ೧೨೦**
**ಭಾಗ್ಯಲಕ್ಷ್ಮಿ ಪ್ರಕಾಶನ,** ೮೭, ೩ನೇ ಕ್ರಾಸ್, ೪ನೇ ಬ್ಲಾಕ್, ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೫೬೦ ೦೮೫

**ಕರ್ನಾಟಕದ ಸಂದರ್ಭದಲ್ಲಿ ಕೋಮುವಾದ** ಸಂ. : ದು. ಸರಸ್ವತಿ
**ಪುಟ : ೧೧೨** **ಬೆಲೆ : ರೂ. ೨೦**
**ಪರ್ಯಾಯ ಕಾನೂನು ವೇದಿಕೆ,** ೧೨೨/೪, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು - ೫೬೦ ೦೦೧

**ಆಶಾ ಸೌಧ** (ಕಥಾ ಸಂಕಲನ) ಕೃಷ್ಣಮೂರ್ತಿ ಕಲುಮಂಗಿ
**ಪುಟ : ೮೦** **ಬೆಲೆ : ರೂ. ೬೦**
**ದೆಹಲಿ ಮಿತ್ರ ಪ್ರಕಾಶನ,** ಸಿ.ಜಿ.ಒ. ಕಾಂಪ್ಲೆಕ್ಸ್, ಲೋಧಿ ರೋಡ್, ನವದೆಹಲಿ - ೧೧೦ ೦೦೩

**ಬೆಳ್ಳೆ ರಾಮಚಂದ್ರರಾಯರ ಎರಡು ಕಾದಂಬರಿಗಳು** ಬೆಳ್ಳೆ ರಾಮಚಂದ್ರರಾಯರು
**ಪುಟ : ೪೪೪** **ಬೆಲೆ : ರೂ. ೨೦೦**
**ಕರ್ನಾಟಕ ಸಂಘ,** ಬಿ. ಎಚ್. ರಸ್ತೆ, ಶಿವಮೊಗ್ಗ-೫೭೭೨೦೧

**ಹಸಿವಿನ ಸಾಮ್ರಾಜ್ಯಕ್ಕೆ ಕೊನೆಯೆಂತು ?** ವಸಂತರಾಜ ಎನ್. ಕೆ.
**ಪುಟ : ೧೮೦** **ಬೆಲೆ : ರೂ. ೧೦೦**
**ಚಿಂತನ ಪುಸ್ತಕ,** ನಂ. ೧೮೬೩, ೩೮ನೇ ಕ್ರಾಸ್, ೧೧ನೇ ಮೈನ್, ೪ 'ಟಿ' ಬ್ಲಾಕ್, ಜಯನಗರ, ಬೆಂಗಳೂರು - ೪೧

**ಎಲಿಯಟ್ಟನ ನಾಲ್ಕು ಪ್ರಬಂಧಗಳು** ಅನುವಾದ : ಸಿ. ಪಿ. ಕೆ.
**ಪುಟ : ೧೦೪** **ಬೆಲೆ : ರೂ. ೪೦**
**ನಾಗಾರ್ಜುನ ಎಂಟರ್‌ಪ್ರೈಸಸ್,** ನಂ. ೫೮, ಅಕ್ಕಮಹಾದೇವಿ ರಸ್ತೆ, ದಾವಣಗೆರೆ

**ಪ್ರಳಯ ೨೦೧೨** ಪ್ರೊ॥ ಎಚ್. ಆರ್. ರಾಮಕೃಷ್ಣ ರಾವ್
**ಪುಟ : ೩೬** **ಬೆಲೆ : ರೂ. ೧೦**
**ಭಾರತ ಜ್ಞಾನ-ವಿಜ್ಞಾನ ಸಮಿತಿ,** ಭಾರತೀಯ ವಿಜ್ಞಾನ ಸಂಸ್ಥೆಯ ಆವರಣ, ಬೆಂಗಳೂರು - ೫೬೦ ೦೧೨

**ಒಡೆಯನುಲಿದ ಪಾಡು** (ಶ್ರೀಮದ್‌ಭಗವದ್ಗೀತಾ) ಅನಂತ ಕಲ್ಲೋಳ
**ಪುಟ : ೧೦೪** **ಬೆಲೆ : ರೂ. ೫೦**
**ಅಮೋಘ ವಾಙ್ಮಯ ಪ್ರಸಾರ,** ಬೆಳಗಾವಿ - ೫೯೦ ೦೦೬

**ಸೂರ್ಯನ ಒಂದು ತುಂಡು** (ಕತೆಗಳು) ಶಾಂತಾರಾಮ ಸೋಮಯಾಜಿ
**ಪುಟ : ೧೪೬** **ಬೆಲೆ : ರೂ. ೬೫**
**ಶ್ರೀನಿವಾಸ ಪುಸ್ತಕ ಪ್ರಕಾಶನ,** ನಂ. ೧೬೪/ಎ, ಮೊದಲನೇ ಮಹಡಿ, ಎಂ.ಆರ್. ಎನ್. ಬಿಲ್ಡಿಂಗ್, ಕನಕಪುರ ಮುಖ್ಯರಸ್ತೆ, ಬಸವನಗುಡಿ, ಬೆಂಗಳೂರು-೫೬೦೦೦೪

**ಹೇಮಲತ ರಾಜಕುಮಾರ ಚರಿತ್ರೆ** ಸಂಗ್ರಹ, ಸಂಪಾದನೆ : ಡಾ॥ ಎಚ್. ಎಸ್. ಸುಜಾತಾ
**ಪುಟ : ೨೨೪** **ಬೆಲೆ : ರೂ. ೨೦೦**
**ಸುಹಾಸ ಪ್ರಕಟಣೆಗಳು,** ೫೩, ೪ನೇ ಮುಖ್ಯರಸ್ತೆ, ಮಾರುತಿ ದೇವಸ್ಥಾನದ ಬೀದಿ, ಕುವೆಂಪು ನಗರ, ಮೈಸೂರು - ೫೭೦ ೦೦೯



# ಧರ್ಮ, ಮತ ಮತ್ತು ರಾಜಕಾರಣ

ಧಾರ್ಮಿಕ ಕೇಂದ್ರಗಳು ಪ್ರಭಾವಶಾಲಿಯಾಗಿ ರಾಜಕಾರಣದಲ್ಲಿ ಸಕ್ರಿಯ ಪಾತ್ರ ವಹಿಸುವ ಪರಂಪರೆ ಐರೋಪ್ಯ ರಾಷ್ಟ್ರಗಳ ಬಳುವಳಿ. ಬೂರ್ಷ್ವಾ ಪ್ರಜಾತಂತ್ರ ಕ್ರಾಂತಿಗೂ ಮುನ್ನ ಪ್ರಚಲಿತವಾಗಿದ್ದ ಊಳಿಗಮಾನ್ಯ ವ್ಯವಸ್ಥೆಯಲ್ಲಿ ಮತ್ತು ಅದಕ್ಕೂ ಹಿಂದಣ ಕಾಲಘಟ್ಟದಲ್ಲಿ ಚರ್ಚುಗಳು ತಮ್ಮದೇ ಆದ ಶಾಸನವನ್ನು ಜಾರಿಗೊಳಿಸುತ್ತಿದ್ದವು. ಈ ಧಾರ್ಮಿಕ ಶಕ್ತಿಗಳ ವಿರುದ್ಧ ಅಲ್ಲಿ ನಡೆದ ಜನಾಂದೋಲನಗಳಿಗೆ ಬೆನ್ನೆಲುಬಾಗಿದ್ದ ಬೂರ್ಷ್ವಾ ವರ್ಗಗಳು ರಾಜಪ್ರಭುತ್ವದ ವಿರುದ್ಧ ನಡೆಸಿದ ಹೋರಾಟಗಳೂ ಪ್ರಜಾಸತ್ತಾತ್ಮಕ ವ್ಯವಸ್ಥೆಗೆ ಬುನಾದಿಯಾಗಿದ್ದವು. ಭಾರತದ ರಾಜಕಾರಣದಲ್ಲಿ ಧಾರ್ಮಿಕ ಕೇಂದ್ರಗಳ ಪ್ರಭಾವ, ಆಧಿಪತ್ಯ ಇಲ್ಲದಿರಲಿಲ್ಲ. ರಾಜಪ್ರಭುತ್ವಗಳ ಕಾಲದಲ್ಲಿ, ಮೊಘಲರ ಕಾಲದಲ್ಲಿ, ಬ್ರಿಟಿಷರ ಕಾಲದಲ್ಲಿ ತಮ್ಮದೇ ಆದ ಸಾಂಸ್ಕೃತಿಕ ಆಧಿಪತ್ಯವನ್ನು ಸಾಧಿಸುವಲ್ಲಿ ಎಲ್ಲಾ ಮತೀಯ ಶಕ್ತಿಗಳೂ ಕಾರ್ಯೋನ್ಮುಖವಾಗಿದ್ದವು. ಸಾಂಸ್ಥಿಕ ಸ್ವರೂಪದಲ್ಲಿ ಅಲ್ಲದಿದ್ದರೂ ಭಾರತದ ಸಾಮಾಜಿಕ ವೈಶಿಷ್ಟ್ಯವಾದ ಶ್ರೇಣೀಕೃತ ಜಾತಿ ವ್ಯವಸ್ಥೆಯಡಿಯಲ್ಲಿ ಮತೀಯ ಶಕ್ತಿಗಳು ಆಳ್ವಿಕರ ವಿಶ್ವಾಸ ಗಳಿಸಿ, ಅಧಿಕಾರದ ಚುಕ್ಕಾಣಿ ಹಿಡಿದಿದ್ದನ್ನು ಇತಿಹಾಸದಲ್ಲಿ ಕಾಣಬಹುದಾಗಿದೆ. ಇದೇ ಪರಂಪರೆ ಮೊಘಲರ ಕಾಲದಲ್ಲೂ ಮತ್ತೊಂದು ಸ್ವರೂಪದಲ್ಲಿ ವ್ಯಕ್ತವಾಗಿತ್ತು. ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಕೆಲವು ಮೊಘಲ್ ದೊರೆಗಳು ಅನ್ಯಧರ್ಮೀಯರೊಡನೆ ಹೊಂದಾಣಿಕೆ ಮಾಡಿಕೊಂಡರೆ, ಇನ್ನು ಹಲವರು ಇಸ್ಲಾಂ ಧರ್ಮ ಪ್ರಚಾರಕರಾಗೇ ಅಧಿಕಾರ ನಡೆಸಿದ್ದುಂಟು. ಇದೇ ಪರಂಪರೆ ಸ್ವಾತಂತ್ರ್ಯಾನಂತರದಲ್ಲೂ ಮುಂದುವರೆದಿದ್ದು ಧಾರ್ಮಿಕ ಶಕ್ತಿ ಕೇಂದ್ರಗಳು ಪ್ರಜಾತಂತ್ರದ ಚೌಕಟ್ಟಿನಲ್ಲೇ ತಮ್ಮ ಪ್ರಭಾವವನ್ನು ಉಳಿಸಿಕೊಂಡು ಬಂದಿವೆ.

ಮಠಾಧೀಶರುಗಳ, ದೇವಮಾನವರ ಆಶೀರ್ವಾದ ಪಡೆಯಲು ಹವಣಿಸದ ಪ್ರಧಾನ ಮಂತ್ರಿಗಳು ಇಲ್ಲವೇ ಇಲ್ಲ ಎಂದು ಹೇಳಬಹುದು. ನೆಹರೂ ಅವರು ವೈಯಕ್ತಿಕವಾಗಿ ಈ ನಿಟ್ಟಿನಲ್ಲಿ ಭಿನ್ನ ಎನಿಸಿದರೂ, ಧಾರ್ಮಿಕ ಮುಖಂಡರನ್ನು ವಿರೋಧಿಸುವ ಸ್ಥೈರ್ಯವನ್ನೂ ತೋರಲಿಲ್ಲ. ಸಮರ್ಥ ನಾಯಕಿ ಎನಿಸಿದ್ದ ಇಂದಿರಾ ಗಾಂಧಿಯವರೂ ಸಹ ಅನೇಕ ಸಂದರ್ಭಗಳಲ್ಲಿ, ಸಂಕಷ್ಟದ ಸಮಯದಲ್ಲಿ ಮಠಮಾನ್ಯಗಳ ಮೊರೆಹೋಗಿದ್ದುಂಟು. ಸೆಕ್ಯುಲರ್ ಸಂವಿಧಾನವನ್ನು ಪ್ರತಿನಿಧಿಸುತ್ತಲೇ ಈ ರೀತಿ ಧಾರ್ಮಿಕ ಸಂಸ್ಥೆಗಳಿಗೆ ಶರಣಾಗುವ ಸಂಸ್ಕೃತಿಯನ್ನು ಹಲವು ಪುರೋಗಾಮಿ ಚಿಂತಕರು ಪ್ರತಿಭಟಿಸಿದರೂ, ಜನಸಾಮಾನ್ಯರಲ್ಲಿ ಯಾವುದೇ ವಿರೋಧ ವ್ಯಕ್ತವಾಗದಿರುವುದಕ್ಕೆ ಕಾರಣಗಳು ಇಲ್ಲದಿಲ್ಲ. ಭಾರತದ ಸೆಕ್ಯುಲರ್ ನೀತಿ ಎಂದರೆ ಪ್ರಭುತ್ವವು ಮತಧರ್ಮದಿಂದ ಬೇರ್ಪಡುವುದಲ್ಲ, ಬದಲಾಗಿ ಎಲ್ಲ ಧರ್ಮಗಳನ್ನೂ ಸಮನಾಗಿ ಪರಿಗಣಿಸುವುದು. ಹಾಗಾಗಿ ನಮ್ಮ ರಾಜಕೀಯ ನಾಯಕರು ಎಲ್ಲ ಧರ್ಮೀಯರನ್ನೂ ಸಂತೈಸುವ ನಿಟ್ಟಿನಲ್ಲಿ ತೀವ್ರ ಎಚ್ಚರಿಕೆ ವಹಿಸುತ್ತಾರೆ. ಸಾಮುದಾಯಿಕ ಅಸ್ಮಿತೆಯ ಸಮಸ್ಯೆಗಳು ಎದುರಾದಾಗಲೆಲ್ಲಾ ಜನಸಾಮಾನ್ಯರಿಗಿಂತಲೂ ಹೆಚ್ಚಾಗಿ ಧಾರ್ಮಿಕ ನಾಯಕರ ಬಳಿ ಸಲಹೆ ಪಡೆಯುತ್ತಿರುವುದು ನಿದರ್ಶನವಷ್ಟೆ.

ಈ ನಿಟ್ಟಿನಲ್ಲಿ ಬೆಳೆದುಬಂದ ವಿಶಿಷ್ಟ ಪರಂಪರೆಯಲ್ಲಿ, ಸಾಮುದಾಯಿಕ-ಸಾಂಸ್ಕೃತಿಕ ಚಿಂತನೆಗಳೆಲ್ಲವೂ ಧಾರ್ಮಿಕ ನೆಲೆಗಟ್ಟಿನಲ್ಲಿ ವ್ಯಕ್ತವಾಗತೊಡಗಿವೆ. ಹಿಂದೂ ಉತ್ತರಾಧಿಕಾರ ಕಾಯ್ದೆಯನ್ನು ತಿದ್ದುಪಡಿ ಮಾಡಹೊರಟಾಗ ಹಿಂದೂ ಧಾರ್ಮಿಕ ಸಂಸ್ಥೆಗಳ ವಿರೋಧ ವ್ಯಕ್ತವಾಗುತ್ತದೆ ಮತ್ತು ಈ ವಿರೋಧವನ್ನು ಪ್ರಭುತ್ವ ಗಂಭೀರವಾಗಿ ಪರಿಗಣಿಸುತ್ತದೆ. ಮುಸ್ಲಿಂ ವೈಯಕ್ತಿಕ ಕಾನೂನಿನ ವಿಷಯದಲ್ಲಿ ಇಮಾಮ್‌ಗಳ ವಿರೋಧವನ್ನೇ ಪ್ರಧಾನವಾಗಿರಿಸಿಕೊಂಡು ಈವರೆಗೂ ಯಾವುದೇ ಕ್ರಮ ಕೈಗೊಳ್ಳಲಾಗಿಲ್ಲ. ಸಿರಿಯನ್ ಕ್ಯಾಥೊಲಿಕ್ ಸಮುದಾಯದಲ್ಲಿನ ಬದಲಾವಣೆಗಳಿಗೂ ಸಹ ಸಾಮುದಾಯಿಕ ಪ್ರತಿರೋಧ ಕಾರಣವಾಯಿತೇ ಹೊರತು, ಚರ್ಚಿನ ಮುಖಂಡರ ಉದಾತ್ತತೆಯಲ್ಲ. ಹೀಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ನಿರ್ದಿಷ್ಟ ಧಾರ್ಮಿಕ ಸಮುದಾಯದ ಸಮಸ್ಯೆಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ಧಾರ್ಮಿಕ ಮುಖಂಡರ ಮೊರೆಹೋಗುತ್ತಿವೆಯೇ ಹೊರತು, ಜನಾಭಿಪ್ರಾಯಕ್ಕಾಗಲೀ, ಸಮುದಾಯದಲ್ಲಿ ಧಾರ್ಮಿಕ ದೃಷ್ಟಿಕೋನಕ್ಕೆ ಹೊರತಾಗಿ ಚಿಂತಿಸುವ ಬುದ್ಧಿಜೀವಿಗಳೊಡನೆಯಾಗಲೀ ಚರ್ಚೆ ನಡೆಸಿದ ಉದಾಹರಣೆಗಳಿಲ್ಲ. ಶಾಬಾನೊ ಪ್ರಕರಣ, ರಾಮಮಂದಿರ ವಿವಾದ, ಸಲಿಂಗಕಾಮಿಗಳ ಹಕ್ಕುಗಳ ಸಮಸ್ಯೆ ಈ ನಿಟ್ಟಿನಲ್ಲಿ ಉತ್ತಮ ನಿದರ್ಶನಗಳು. ತತ್ಪರಿಣಾಮವಾಗಿ ಧಾರ್ಮಿಕ ಚೌಕಟ್ಟಿನಲ್ಲೇ ಸಂಸ್ಕೃತಿಯನ್ನು ವ್ಯಾಖ್ಯಾನಿಸಿರುವ ಪರಂಪರೆಯೂ ಬೆಳೆದು ಬಂದಿದ್ದು, ಮತೀಯ ಸಂಘರ್ಷಗಳು ಸಂಸ್ಕೃತಿಕೇಂದ್ರಿತ ಸಂಘರ್ಷಗಳಾಗಿ ಪರಿಣಮಿಸುತ್ತಿವೆ. ಪಾಶ್ಚಿಮಾತ್ಯ-ಪೌರ್ವಾತ್ಯ ಸಂಸ್ಕೃತಿಯ ಸಂಕಥನವನ್ನು ವಿಭಿನ್ನ ಸಾಮಾಜಿಕ-ಮತೀಯ ಸಂಘರ್ಷಗಳ ಸಂದರ್ಭದಲ್ಲಿ ಧಾರ್ಮಿಕ ಚೌಕಟ್ಟಿನೊಳಗೆ ವಿಶ್ಲೇಷಿಸುವುದೂ ಈ ಪರಂಪರೆಯ ಪರಿಣಾಮವೇ ಆಗಿದೆ.

ಆಳುವ ವರ್ಗದ ಈ ನೀತಿಗಳು ಮತೀಯ ಸಾಂಸ್ಥಿಕ ಶಕ್ತಿಗಳಿಗೆ ಅನುಕೂಲಕರವಾಗಿರುವುದಾದರೂ ಸಮುದಾಯದ ಜನಸಾಮಾನ್ಯರಿಗೆ ಕಗ್ಗಂಟಾಗಿ ಪರಿಣಮಿಸಿವೆ. ಧಾರ್ಮಿಕ ಶಕ್ತಿಗಳನ್ನು ಓಲೈಸುವುದರಿಂದಲೇ ಇಡೀ ಸಮುದಾಯದ ವಿಶ್ವಾಸ-ಬೆಂಬಲ ಗಳಿಸಬಹುದು ಎಂಬ ರಾಜಕೀಯ ಪಕ್ಷಗಳ ಭ್ರಮೆ ಜನಸಾಮಾನ್ಯರ ಜೀವನದಲ್ಲಿ ನೇತ್ಯಾತ್ಮಕ ಪರಿಣಾಮ ಬೀರಿರುವುದೇ ಹೆಚ್ಚು. ಈ ವಿದ್ಯಮಾನವನ್ನು ವಿಶೇಷವಾಗಿ ಮುಸ್ಲಿಂ ಸಮುದಾಯದಲ್ಲಿ ಗಮನಿಸಬಹುದು. ಮುಸ್ಲಿಂ ಸಮುದಾಯವನ್ನು ಓಲೈಸಲಾಗುತ್ತಿದೆ, ತುಷ್ಟೀಕರಿಸಲಾಗುತ್ತಿದೆ ಎಂಬ ಕೂಗು ಈ ಹಿನ್ನೆಲೆಯಲ್ಲೇ ವ್ಯಕ್ತವಾಗುವುದನ್ನು ಗಮನಿಸಬಹುದು. ಇಲ್ಲಿ ಮುಸ್ಲಿಮರ ಓಲೈಕೆ ಎಂದರೆ ಏನು ಎಂಬುದು ಸ್ಪಷ್ಟವಾಗಿರುವುದಿಲ್ಲ. ಸಾಮಾನ್ಯವಾಗಿ ಓಲೈಕೆ ಎಂದರೆ, ಆಳುವ ವರ್ಗದ ನೀತಿಗಳಿಂದ ಒಂದು ಸಮುದಾಯ ಅನೇಕ ಸವಲತ್ತುಗಳನ್ನು ಪಡೆದು, ಸಾಮಾಜಿಕವಾಗಿ, ಆರ್ಥಿಕವಾಗಿ ಅಭಿವೃದ್ಧಿ ಹೊಂದುವುದು

ನಾ. ದಿವಾಕರ

ಎಂದು ಅರ್ಥೈಸಬಹುದು. ಆದರೆ ಸಾಚಾರ್ ಸಮಿತಿಯ ವರದಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ ಭಾರತದಲ್ಲಿನ ಬಹುಪಾಲು ಮುಸ್ಲಿಮರು ಅನುಭವಿಸುತ್ತಿರುವ ಬವಣೆ ಸ್ಪಷ್ಟವಾಗುತ್ತದೆ. ಆದರೆ ಮುಸ್ಲಿಂ ಧಾರ್ಮಿಕ ಮುಖಂಡರಿಗಾಗಲೀ, ರಾಜಕೀಯ ಪಕ್ಷಗಳಿಗಾಗಲೀ ಇದು ಹೆಚ್ಚು ಪ್ರಸ್ತುತವೆನಿಸುವುದೇ ಇಲ್ಲ. ಇತ್ತ ಓಲೈಕೆ, ತುಷ್ಟೀಕರಣವನ್ನೇ ಪ್ರಚಾರದ ಸರಕನ್ನಾಗಿ ಮಾಡಿಕೊಂಡಿರುವ ಅನ್ಯ ಧರ್ಮೀಯರಿಗೂ ಇದು ಪ್ರಮುಖ ಎನಿಸುವುದಿಲ್ಲ. ಹಾಗಾಗಿ ಹಜ್ ಯಾತ್ರೆಗೆ ನೀಡುವ ಸಬ್ಸಿಡಿ ಹಣವನ್ನೇ ಓಲೈಕೆಯ ಪ್ರತೀಕವಾಗಿ ಪರಿಗಣಿಸಲಾಗುತ್ತದೆ. ಹಜ್‌ಗೆ ಹೋಗುವವರಲ್ಲಿ ಮೇಲ್ ಮಧ್ಯಮವರ್ಗದವರು ಮತ್ತು ಶ್ರೀಮಂತರೇ ಹೆಚ್ಚಾಗಿರುವುದು ಇಲ್ಲಿ ನಗಣ್ಯವಾಗುತ್ತದೆ.

ಅದೇ ವೇಳೆ ಯಾವುದೇ ರಾಜಕೀಯ ಪಕ್ಷ – ಆಡಳಿತಾರೂಢ ಪಕ್ಷವಾದರೂ – ಧಾರ್ಮಿಕ ಶಕ್ತಿಗಳ ಓಲೈಕೆಯಲ್ಲಿ ತಾರತಮ್ಯ ಮಾಡುವುದಿಲ್ಲ ಎಂಬ ಸತ್ಯಾಂಶವನ್ನೂ ನಿರ್ಲಕ್ಷಿಸುವಂತಿಲ್ಲ. ಮುಸ್ಲಿಂ ಮತೀಯ ಶಕ್ತಿಗಳನ್ನು ಓಲೈಸಲು ಶಾಬಾನೋ ಪ್ರಕರಣದಲ್ಲಿ ಜನವಿರೋಧಿ ನಿಲುವು ಕೈಗೊಂಡ ಕೂಡಲೇ ವಿವಾದಿತ ರಾಮಜನ್ಮಭೂಮಿ-ಬಾಬ್ರಿ ಮಸೀದಿಯ ಬೀಗ ತೆರೆದ ಕೇಂದ್ರ ಸರ್ಕಾರ ಹಿಂದೂ ಧಾರ್ಮಿಕ ಶಕ್ತಿಗಳನ್ನು ಓಲೈಸಲು ಯತ್ನಿಸಿದ್ದು ಈಗ ಇತಿಹಾಸ. ಹಜ್ ಯಾತ್ರೆಗೆ ಸಬ್ಸಿಡಿ ನೀಡುವಂತೆಯೇ ಅಮರನಾಥ ಮತ್ತು ಕೈಲಾಸ ಯಾತ್ರೆಗೂ ನೀಡಲಾಗುತ್ತಿದೆ. ವಕ್ಫ್ ಮಂಡಲಿಯಂತೆಯೇ ಮುಜರಾಯಿ ಇಲಾಖೆಯೂ ಕಾರ್ಯ ನಿರ್ವಹಿಸುತ್ತದೆ. ಇಮಾಮ್‌ಗಳ, ಬಿಷಪ್‌ಗಳ ಮಾತುಗಳಿಗೆ ನೀಡುವಷ್ಟೇ ಬೆಲೆಯನ್ನು ಹಿಂದೂ ಮಠಾಧೀಶರ ಮಾತುಗಳಿಗೂ ನೀಡಲಾಗುತ್ತದೆ. ಇದು ಭಾರತದ ಸೆಕ್ಯುಲರಿಸಂನ ವೈಪರೀತ್ಯವೋ, ಅಪಭ್ರಂಶವೋ ಎನ್ನುವುದು ಚರ್ಚಾಸ್ಪದ ಅಂಶ. ಆದರೂ ಇವು ಭಾರತದ ರಾಜಕಾರಣದಲ್ಲಿ ಧಾರ್ಮಿಕ ಶಕ್ತಿಗಳ ಹಸ್ತಕ್ಷೇಪ ಯಾವುದಾದರೊಂದು ರೀತಿಯಲ್ಲಿ ಹೆಚ್ಚಾಗುತ್ತಿರುವುದಕ್ಕೆ ನಿದರ್ಶನಗಳಷ್ಟೆ.

**ರಾಜಕಾರಣದಲ್ಲಿ ಮಠಾಧೀಶರು**

ಭಾರತದ ಸೆಕ್ಯುಲರಿಸಂನ ಈ ಅಪಭ್ರಂಶಗಳ ಹಿನ್ನೆಲೆಯಲ್ಲೇ ಭಾರತೀಯ ರಾಜಕಾರಣದಲ್ಲಿ ಮತಧರ್ಮದ ಪಾತ್ರ ವನ್ನೂ, 'ಧರ್ಮ'ಗಳನ್ನು ಪ್ರತಿನಿಧಿಸುವ ಮಠಾಧೀಶರುಗಳ, ಧಾರ್ಮಿಕ ಮುಖಂಡರ ಪಾತ್ರವನ್ನೂ ವಿಶ್ಲೇಷಿಸಬೇಕಾಗುತ್ತದೆ. ಪ್ರಚಲಿತ ರಾಜಕೀಯ ವಿದ್ಯಮಾನಗಳ ಹಿನ್ನೆಲೆಯಲ್ಲಿ, ಭಾರತೀಯ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಮಠಾಧೀಶರ ಅಥವಾ ಧಾರ್ಮಿಕ ಕೇಂದ್ರಗಳ ಪಾತ್ರವೇನು ಎಂಬ ಜಿಜ್ಞಾಸೆ ಜನಸಾಮಾನ್ಯರನ್ನೂ, ಮಾಧ್ಯಮಗಳನ್ನೂ ಕಾಡುತ್ತಿದೆ. ಕೆಲವು ಮಾಧ್ಯಮಗಳಲ್ಲಿ ಈ ಕುರಿತು ಗಂಭೀರ ಚರ್ಚೆಗಳು ನಡೆದಿದ್ದು, ಅನೇಕ ಧಾರ್ಮಿಕ ಮುಖಂಡರು ತಮ್ಮ ಅಭಿಪ್ರಾಯಗಳನ್ನು, ಪೂರ್ವಾಗ್ರಹಗಳನ್ನು ವ್ಯಕ್ತಪಡಿಸಿದ್ದಾರೆ.

ಇಲ್ಲಿ ಧಾರ್ಮಿಕ ಮುಖಂಡರನ್ನು ಎರಡು ಪಂಗಡಗಳಾಗಿ ವಿಂಗಡಿಸಬಹುದು. ಧರ್ಮದ ಸೀಮಿತ ದೃಷ್ಟಿಕೋನದಿಂದಲೇ ಇಡೀ ಸಮಾಜವನ್ನು ಗ್ರಹಿಸುವ ಮೂಲಕ, ಜನ ಸಮುದಾಯಗಳ ಮೇಲೆ ತಮ್ಮದೇ ಆದ ವ್ಯಾಖ್ಯಾನಗಳನ್ನು, ಧರ್ಮಸೂಕ್ಷ್ಮಗಳನ್ನು ಹೇರುವ ಮುಖಂಡರು ಒಂದು ಬಗೆಯಾದರೆ, ಸಮಸ್ತ ಜನಸಮುದಾಯಗಳೂ ಒಂದೇ ಎಂದು ಸಾರುವ ಆಧ್ಯಾತ್ಮಿಕ ನೆಲೆಗಟ್ಟಿನಲ್ಲಿ ಸಾಮುದಾಯಿಕ ದೃಷ್ಟಿಕೋನವನ್ನು ರೂಢಿಸಿಕೊಂಡಿರುವ ಮುಖಂಡರು ಮತ್ತೊಂದು ಬಗೆ. ಮೊದಲನೆಯ ವರ್ಗದಲ್ಲಿ ವಿವಿಧ ಆಚಾರ್ಯರು, ಮಠಾಧೀಶರು, ಇಮಾಮ್‌ಗಳು, ಪಾದ್ರಿಗಳು ಮತ್ತು (ವಿಡಂಬನೆ ಎನಿಸಿದರೂ) ಜಗದ್ಗುರುಗಳು ಸೇರುತ್ತಾರೆ. ಈ ಮುಖಂಡರ ಸ್ಥಾಪಿತ ಹಿತಾಸಕ್ತಿಗಳೇನೇ ಇದ್ದರೂ, ತಾವು ಎಲ್ಲರನ್ನೂ ಪ್ರತಿನಿಧಿಸುತ್ತೇವೆ ಮತ್ತು ಸರ್ವ ಜನ ಸುಖಕ್ಕಾಗಿ ತಮ್ಮ ಸೇವೆಯನ್ನು ಮುಡಿಪಾಗಿಟ್ಟಿದ್ದೇವೆ ಎಂಬ ಭ್ರಮೆ ಮತ್ತು ಅಹಂ ಹೊಂದಿರುತ್ತಾರೆ. ಹಾಗಾಗಿ ಸಾಮುದಾಯಿಕ ಸಮಸ್ಯೆ ಗಳಿಗೆ ಕೂಡಲೇ ಸ್ಪಂದಿಸುವುದೇ ಅಲ್ಲದೆ ತಮ್ಮ ಪರಿಹಾರವೇ ಸಮುದಾಯದ ಅಂತಿಮ ಪರಿಹಾರ ಎಂಬ ನಿರ್ಧಾರವನ್ನೂ ಕೈಗೊಳ್ಳುತ್ತಾರೆ. ಬಹುತೇಕ ರಾಜಕೀಯ ಪಕ್ಷಗಳು ಈ ವರ್ಗದ ಸಂಸ್ಥೆಗಳ ಹಿಂಬಾಲಕರಾಗಿರುವುದನ್ನು ಕಾಣಬಹುದು.

ಎರಡನೆ ವರ್ಗದ ಮುಖಂಡರು ಆಧ್ಯಾತ್ಮ, ಯೋಗ, ಸನಾತನ ಧರ್ಮ, ಸಮಾನತೆ ಮುಂತಾದ ಉದಾತ್ತ ಆದರ್ಶಗಳನ್ನು ತಮ್ಮ ಬಂಡವಾಳವನ್ನಾಗಿ ಮಾಡಿಕೊಂಡು, ಎಲ್ಲ ಸಮುದಾಯಗಳೊಡನೆ ಸ್ಪಂದಿಸಲು ಯತ್ನಿಸುತ್ತಾರೆ. ಇಂತಹ ಸಾಂಸ್ಥಿಕ ಶಕ್ತಿಗಳು ಒಂದು ನಿರ್ದಿಷ್ಟ ಧರ್ಮ ಅಥವಾ ಕೋಮಿನ ಬಗ್ಗೆ ಮಾತನಾಡದಿದ್ದರೂ, ದೇಶದ ಪ್ರಜೆಗಳ ಹಿತಾಸಕ್ತಿಯನ್ನು ಧರ್ಮದ ನೆಲೆಗಟ್ಟಿನಲ್ಲೇ ನೋಡಬಯಸುತ್ತವೆ. ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಈ ಧಾರ್ಮಿಕ ಮುಖಂಡರು ಜಾತಿಗಳ ಗೋಡೆಗಳನ್ನು ಭೇದಿಸಿ, ಎಲ್ಲ ಸಮುದಾಯಗಳಿಗೂ ಸಮಾನತೆಯನ್ನು ನೀಡುವ ಉದಾರ ಮನೋಭಾವವನ್ನು ತೋರುತ್ತಾರೆ. ಹಾಗಾಗಿ ಸಾಮಾಜಿಕ ಸ್ತರದಲ್ಲಿ ಕೆಳ ಶ್ರೇಣಿಯಲ್ಲಿರುವ ಸಮುದಾಯಗಳು ಈ ಸಂಸ್ಥೆಗಳ ಬೆಂಬಲಿಗರಾಗುತ್ತಾರೆ. ಕ್ರಮೇಣ ಇಲ್ಲಿನ ಮುಖಂಡರು ದೇವಮಾನವರ ಸ್ಥಾನ ಪಡೆದು ಸಮುದಾಯದ ದೃಷ್ಟಿಯಲ್ಲಿ ಸರ್ವ ಸಂಕಷ್ಟ ನಿವಾರಕರಾಗಿ ಪರಿಣಮಿಸುತ್ತಾರೆ.




ಈ ಎರಡೂ ವರ್ಗಗಳ ನಡುವೆ ಕಂಡುಬರುವ ಸಾಮ್ಯವೆಂದರೆ ರಾಜಕೀಯ ಹಿತಾಸಕ್ತಿ ಮತ್ತು ತಮ್ಮ ಸಾಂಸ್ಥಿಕ ಅಸ್ತಿತ್ವದ ರಕ್ಷಣೆ. ರಾಜಕೀಯ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಮೊದಲನೆ ವರ್ಗದ ಮುಖಂಡರು ವಿವಿಧ ಕೋಮುಗಳನ್ನು ಪ್ರತಿನಿಧಿಸಿದರೆ, ಎರಡನೆ ವರ್ಗದವರು ಸರ್ವಧರ್ಮ ಸಮಭಾವದ ಸೋಗಿನಲ್ಲಿ ಮೆರೆಯಲೆತ್ನಿಸುತ್ತಾರೆ. ಹಾಗಾಗಿ ಭಾರತೀಯ ಸೆಕ್ಯುಲರಿಸಂ ಮತ್ತು ಮತೀಯತೆ ಎರಡೂ ತತ್ವಗಳು ಇಲ್ಲಿ ಶರಣಾಗುತ್ತವೆ. ನಿರ್ದಿಷ್ಟ ಕೋಮುಗಳನ್ನು ಓಲೈಸಲು ರಾಜಕೀಯ ಪಕ್ಷಗಳು ಮೊದಲನೆ ವರ್ಗವನ್ನು ಸಂತುಷ್ಟೀಕರಿಸಿದರೆ, ಇಡೀ ಸಮಾಜದ ತೃಪ್ತಿಗಾಗಿ ಎರಡನೆ ವರ್ಗವನ್ನು ಪೋಷಿಸುತ್ತವೆ. ಇನ್ನು ತಮ್ಮ ಸಾಂಸ್ಥಿಕ ಅಸ್ತಿತ್ವದ ರಕ್ಷಣೆಗೆ ಶಿಕ್ಷಣ ಸಂಸ್ಥೆಗಳು, ಸಮಾಜ ಸೇವಾ ಸಂಸ್ಥೆಗಳು, ಆಸ್ಪತ್ರೆ, ಅನಾಥಾಶ್ರಮ, ವೃದ್ಧಾಶ್ರಮ ಮುಂತಾದ ಜನಪರ ಎನಿಸುವ ಚಟುವಟಿಕೆಗಳಲ್ಲಿ ತೊಡಗಿಕೊಳ್ಳಲಾಗುತ್ತದೆ. ಜನಸೇವೆಯ ನೆಪದಲ್ಲಿ ಸರ್ಕಾರದಿಂದಲೂ ಉದಾರವಾದ ನೆರವು ಪಡೆಯಲಾಗುತ್ತದೆ. ಭಕ್ತಾದಿಗಳಿಂದ ಸಲ್ಲುವ ಕಾಣಿಕೆಗಳನ್ನೇ ಬಂಡವಾಳವನ್ನಾಗಿಸಿಕೊಂಡು ಈ ಸಂಸ್ಥೆಗಳು ಬೃಹತ್ ಉದ್ಯಮಗಳಂತೆ ಬೆಳೆಯುತ್ತವೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಪುಟ್ಟಪರ್ತಿ, ಬಾಬಾ ರಾಮ್‌ದೇವ್, ರವಿಶಂಕರ್, ದತ್ತಪೀಠ, ಚಿನ್ಮಯ ಮಿಷನ್ ಮುಂತಾದವು ಎರಡನೆ ವರ್ಗಕ್ಕೆ ಸೇರಿದರೆ, ಆದಿಚುಂಚನಗಿರಿ, ಜೆಎಸ್‌ಎಸ್, ಉಡುಪಿ ವಿದ್ಯಾಪೀಠ, ಕಂಚಿ ಮಠ, ಕ್ರೈಸ್ತ ಸಂಸ್ಥೆಗಳು – ಇವೆಲ್ಲವೂ ಮೊದಲನೆ ವರ್ಗಕ್ಕೆ ಸೇರುತ್ತವೆ.

ಧಾರ್ಮಿಕ ಸಂಸ್ಥೆಗಳು, ಧಾರ್ಮಿಕ ಮುಖಂಡರು ರಾಷ್ಟ್ರ ರಾಜಕಾರಣದಲ್ಲಿ ವಹಿಸಬೇಕಾದ ಪಾತ್ರವೇನು, ಎಂದು ಯೋಚಿಸುವಾಗ ಈ ಎರಡೂ ವರ್ಗಗಳನ್ನು ಗಮನದಲ್ಲಿ ಇರಿಸಿಕೊಳ್ಳುವುದು ಅಗತ್ಯವಾಗುತ್ತದೆ. ಇಲ್ಲಿ ರಾಜಕಾರಣ ಎಂದರೆ ಚುನಾವಣಾ ರಾಜಕೀಯ ಎಂಬ ಅರ್ಥದಲ್ಲೇ ನೋಡುವುದರ ಬದಲು, ಚುನಾವಣಾ ಪ್ರಕ್ರಿಯೆಗಳನ್ನು ಹೊರತುಪಡಿಸಿಯೂ ಒಂದು ರಾಜಕಾರಣದ ಸ್ಪೇಸ್ ಇದೆ ಎಂಬ ಅಂಶವನ್ನು ಪರಿಗಣಿಸಬೇಕಾಗಿದೆ. ಬಹುಸಂಸ್ಕೃತಿಯ ದೇಶವಾದ ಭಾರತದಂತಹ ಪ್ರಜಾತಾಂತ್ರಿಕ ರಾಷ್ಟ್ರದ ಸೆಕ್ಯುಲರ್ ರಾಜಕಾರಣದಲ್ಲಿ ಧಾರ್ಮಿಕ ಮುಖಂಡರು ಯಾವ ನಿಲುವು ಹೊಂದಿರಬೇಕು ಎನ್ನುವುದು ಸಹ ಮೂರ್ತ ಪ್ರಶ್ನೆಯಾಗುತ್ತದೆ. ಸಂವಿಧಾನಾತ್ಮಕವಾಗಿ ನೋಡಿದರೆ ಭಾರತದ ರಾಜಕಾರಣದ ತಳಹದಿ ಸಮಾಜವಾದ, ಸಮಾನತೆ, ಜ್ಯಾತ್ಯತೀತತೆ ಮತ್ತು ಮತನಿರಪೇಕ್ಷತೆಗಳನ್ನು ಆಧರಿಸಿದೆ. ಜನತೆ ಮಾನ್ಯ ಮಾಡಿರುವ ಪ್ರಸಕ್ತ ಸಂಸದೀಯ ಸೆಕ್ಯುಲರ್ ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಧಾರ್ಮಿಕ ಕೇಂದ್ರಗಳಿಗೆ ಒಂದು ಸ್ಥಾನ ಇರುವುದು ಸಾಧ್ಯವೇ ಎಂಬುದಷ್ಟೇ ಇಲ್ಲಿ ಮುಖ್ಯವಾಗುತ್ತದೆ.

ಭಾರತದ ಸಾಮಾಜಿಕ ಸನ್ನಿವೇಶದಲ್ಲಿ ಧಾರ್ಮಿಕ ಕೇಂದ್ರಗಳೆಂದರೆ ಒಂದು ನಿರ್ದಿಷ್ಟವಾದ ಧರ್ಮವನ್ನು ಸಂಪೂರ್ಣವಾಗಿ ಪ್ರತಿನಿಧಿಸುವ ಸಾಂಸ್ಕೃತಿಕ ಅಥವಾ ಆಧ್ಯಾತ್ಮಿಕ ಕೇಂದ್ರಗಳೆಂದು ಪರಿಗಣಿಸಲಾಗುವುದಿಲ್ಲ. ಇದು ಎಲ್ಲಾ ಧಾರ್ಮಿಕ ಸಂಸ್ಥೆಗಳಿಗೂ ಸಲ್ಲುವಂತಹ ಆರೋಪ ಅಥವಾ ಸತ್ಯಾಂಶ. ಒಂದು ಧರ್ಮದ ಪರಿಧಿಯಲ್ಲಿ ಒಳಗೊಳ್ಳಲಾಗುವ ಉಪಜಾತಿಗಳ ಅಥವಾ ಪಂಗಡಗಳ ಹಿತಾಸಕ್ತಿಗಳನ್ನು ಪ್ರತಿನಿಧಿಸುವ ಮಠಗಳು ಭಾರತೀಯ ಸಮಾಜದ

ವಾಸ್ತವ. ಈ ಧಾರ್ಮಿಕ ಕೇಂದ್ರಗಳ ಪ್ರಮುಖ ಉದ್ದೇಶ ತಾವು ಪ್ರತಿನಿಧಿಸುವ ಜಾತಿಗಳ ಅಥವಾ ಮತೀಯ ಸಮುದಾಯಗಳ ಕ್ರೋಡೀಕರಣ ಮತ್ತು ಕೆಲವು ಸಂದರ್ಭಗಳಲ್ಲಿ ಆಧ್ಯಾತ್ಮಿಕ ಉನ್ನತಿ ಮಾತ್ರವಾಗಿರುತ್ತದೆ. ಯಾವುದೇ ಮಠಗಳು ತಮ್ಮ ಜಾತೀಯ ಅಥವಾ ಮತೀಯ ಚೌಕಟ್ಟುಗಳನ್ನು ಮೀರಿ ತಮ್ಮ ಕಾರ್ಯವ್ಯಾಪ್ತಿಯನ್ನು ಗುರುತಿಸಿಕೊಂಡ ನಿದರ್ಶನ ಕಂಡುಬರುವುದಿಲ್ಲ. ಹೆಚ್ಚೆಂದರೆ ತಮ್ಮ ಉನ್ನತ ಆದರ್ಶ ಮತ್ತು ದಾರ್ಶನಿಕತೆಯನ್ನು ಪ್ರದರ್ಶಿಸಿಕೊಳ್ಳಲು ಸಾರ್ವಜನಿಕವಾಗಿ ಇತರ ಸಮುದಾಯದ ವೇದಿಕೆಗಳಲ್ಲಿ ಕಾಣಿಸಿಕೊಂಡಿರಬಹುದು ಅಥವಾ ತಾವು ನಡೆಸುವ ಶೈಕ್ಷಣಿಕ ಸಂಸ್ಥೆಗಳಲ್ಲಿ ಇತರರಿಗೆ ಅವಕಾಶ ನೀಡಿರಬಹುದು. ಆದರೂ ತಾತ್ವಿಕವಾಗಿ ಎಲ್ಲ ಮಠಮಾನ್ಯಗಳೂ ಒಂದು ವರ್ಗಕ್ಕೇ ಸೀಮಿತವಾಗಿರುವುದು ಸತ್ಯ. ಈ ಶೈಕ್ಷಣಿಕ ಸಂಸ್ಥೆಗಳು ಉಳ್ಳವರ ಪರವಾಗಿವೆಯೇ ಹೊರತು, ಬಡಜನತೆಯ ಪರವಾಗಿ ಇಲ್ಲ. ಕ್ಯಾಪಿಟೇಷನ್, ಡೊನೇಷನ್ ಹಾವಳಿಯಲ್ಲಿ ಮಠಗಳ ನಿಯಂತ್ರಣದಲ್ಲಿರುವ ಶೈಕ್ಷಣಿಕ ಸಂಸ್ಥೆಗಳೇ ಮುಂಚೂಣಿಯಲ್ಲಿರುವುದನ್ನು ಅಲ್ಲಗಳೆಯಲಾಗುವುದಿಲ್ಲ.

ಇನ್ನೊಂದೆಡೆ, ಭಾರತೀಯ ಸಂಸದೀಯ ಪ್ರಜಾತಂತ್ರದಲ್ಲಿ ಮತೀಯವಾದಿಗಳ ಅಟ್ಟಹಾಸ ಎಷ್ಟೇ ಪ್ರಬಲವಾಗಿದ್ದರೂ, ಸೆಕ್ಯುಲರ್ ನೀತಿಗಳು ಇಂದಿಗೂ ಜೀವಂತವಾಗಿವೆ. ರಾಜಕೀಯ ಪಕ್ಷಗಳಿಗೆ ಕೋಮುವಾದ ಮತ್ತು ಮತೀಯವಾದಗಳು ಒಂದು ಅಸ್ತ್ರವಾಗಿರುವುದಾದರೂ, ಜನಸಾಮಾನ್ಯರು ತಮ್ಮ ಪ್ರಜಾತಾಂತ್ರಿಕ ಹಕ್ಕುಗಳನ್ನು ಚಲಾಯಿಸುವಾಗ ಇವುಗಳನ್ನು ಶಸ್ತ್ರವನ್ನಾಗಿ ಬಳಸುವುದಿಲ್ಲ. ಬದಲಾಗಿ ತಮ್ಮ ಸಂವಿಧಾನಾತ್ಮಕ ಹಕ್ಕುಗಳನ್ನು ಪ್ರಜಾತಂತ್ರದ ಚೌಕಟ್ಟಿನಲ್ಲೇ ಪ್ರಯೋಗಿಸುತ್ತಾರೆ. ಕೆಲವೊಮ್ಮೆ ಕೋಮುವಾದಿ ಪಕ್ಷ ಮತ್ತು ಸಂಘಟನೆಗಳ ಪ್ರಚೋದನೆಗೆ ಬಲಿಯಾಗಿ ಮತೀಯ ಸಂಘರ್ಷದಲ್ಲಿ ತೊಡಗಿದರೂ, ಭಾರತೀಯ ಜನಸಾಮಾನ್ಯರಲ್ಲಿ ಬಹುತೇಕವಾಗಿ ಬಹುಮುಖೀ ಸಂಸ್ಕೃತಿ ಇನ್ನೂ ಮಾಸಿಲ್ಲ. ಭಾಜಪ ನೇತೃತ್ವದ ಎನ್‌ಡಿಎ ಆಳ್ವಿಕೆಯಲ್ಲಿ ಸಂವಿಧಾನವನ್ನು ಪುನಾರಚಿಸಲು ಧರ್ಮ ಸಂಸತ್ ಆಗ್ರಹಿಸಿದರೂ ಭಾರತೀಯ ಜನತೆ ಆ ಕ್ರಮವನ್ನು ತಿರಸ್ಕರಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ಇತ್ತೀಚಿನ ದಿನಗಳಲ್ಲಿ ಮತೀಯ ಸಂಘರ್ಷ ಮತ್ತು ಭಯೋತ್ಪಾದಕ ಕೃತ್ಯಗಳ ಸಂದರ್ಭಗಳಲ್ಲೂ ಸಾಮಾನ್ಯ ಜನತೆ ತಮ್ಮ ಅಸ್ಮಿತೆಗಳನ್ನು ಮೀರಿ ನಿಂತಿರುವುದು ವಾರಣಾಸಿ, ಮುಂಬೈಗಳಲ್ಲಿ ವ್ಯಕ್ತವಾಗಿದೆ. ಸಮಾಜದ ಉನ್ನತಿಗೆ ಈ ಮನೋಭಾವವನ್ನು ಗಟ್ಟಿಗೊಳಿಸುವುದು ಇಂದಿನ ಅಗತ್ಯವಾಗಿದೆ. ಆದರೆ ಈ ಕಾರ್ಯ ಚುನಾವಣಾ ರಾಜಕೀಯದ ಚೌಕಟ್ಟಿನಿಂದ ಹೊರತಾದುದು.

ಈ ಮಹತ್ತರ ಕಾರ್ಯವನ್ನು ನಿರ್ವಹಿಸಲು ಶ್ರಮಿಸುವ ಯಾವುದೇ ಸಂಸ್ಥೆಯಾದರೂ ಜಾತಿ, ಧರ್ಮ, ಭಾಷೆ ಮತ್ತು ಪ್ರಾಂತೀಯ ಭಾವನೆಗಳಿಂದ ಮುಕ್ತವಾಗಿರುವುದು ಅತ್ಯವಶ್ಯ. ಈ ಪ್ರಕ್ರಿಯೆಯನ್ನು ರಾಜಕಾರಣದ ಪರಿಧಿಯಿಂದ ಹೊರಗಿಟ್ಟು ನೋಡುವುದಕ್ಕಿಂತಲೂ ಅದರ ಒಂದು ಅಂಶಿಕ ಭಾಗವಾಗಿಯೇ ಪರಿಗಣಿಸಿದಲ್ಲಿ ರಾಜಕೀಯದ ಪರಿಪೂರ್ಣತೆಯನ್ನು ಗ್ರಹಿಸಬಹುದು. ಇಂದು ದೇಶ ಎದುರಿಸುತ್ತಿರುವ ಜಾತಿ ವೈಷಮ್ಯ, ಮತೀಯ ಸಂಘರ್ಷ, ಧರ್ಮಾಂಧತೆ, ಕೋಮುವಾದಿ ಫ್ಯಾಸಿಸಂ, ಭಯೋತ್ಪಾದನೆ, ಸಾಂಸ್ಕೃತಿಕ ಅರಾಜಕತೆ, ಮಹಿಳೆ-ದಲಿತರು-ಅಲ್ಪಸಂಖ್ಯಾತರು ಮತ್ತು ಬಲಹೀನ ಸಮುದಾಯಗಳ ಮೇಲಿನ ದೌರ್ಜನ್ಯ,



ನಮ್ಮನ್ನಗಲಿದ ಹಿರಿಯ ಚಲನಚಿತ್ರ ಕಲಾವಿದ ಡಾ|| ಕೆ. ಎಸ್. ಅಶ್ವತ್ಥ್ (೧೯೨೫-೨೦೧೦) ಅವರ ನೆನಪಿಗೆ 'ಹೊಸತು' ಗೌರವ ಸಲ್ಲಿಸುತ್ತದೆ.

ಪ್ರಾಂತೀಯ ಮನೋಭಾವ ಎಲ್ಲವೂ ಚುನಾವಣಾ ರಾಜಕೀಯದ ಪರಿಣಾಮವಾಗಿ ಮತ್ತು ಸಮಾಜದಲ್ಲಿ ಅಂತರ್ಗತವಾಗಿರುವ ಅಸಮಾನತೆಯ ಪರಿಣಾಮವಾಗಿ ಹೊರಹೊಮ್ಮಿವೆ. ಈ ಸಾಮಾಜಿಕ ಅನಿಷ್ಟಗಳನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಶ್ರಮಿಸುತ್ತಿರುವ ಅನೇಕ ಸಂಸ್ಥೆಗಳು ದೇಶದಾದ್ಯಂತ ಹರಡಿವೆ. ಹಲವೆಡೆ ಯಶಸ್ಸನ್ನೂ ಕಂಡಿವೆ. ಆದರೆ ಈ ಸಂಸ್ಥೆಗಳೊಡನೆ ಗುರುತಿಸಿಕೊಂಡಿರುವ ಧಾರ್ಮಿಕ ಸಂಸ್ಥೆಗಳು, ಆಧ್ಯಾತ್ಮಿಕ ವ್ಯಕ್ತಿಗಳ ಸಂಖ್ಯೆ ಬೆರಳೆಣಿಕೆಯಷ್ಟು ಮಾತ್ರ.

ಮಠಾಧೀಶರು, ಮಠಮಾನ್ಯಗಳು ಮತ್ತು ಧಾರ್ಮಿಕ ಕೇಂದ್ರಗಳ ರಾಜಕೀಯ ಪ್ರಜ್ಞೆ ಇಲ್ಲಿ ಹೆಚ್ಚು ಪ್ರಸ್ತುತವೆನಿಸುತ್ತದೆ. ಜಗದ್ಗುರುಗಳೆಂದು ತಮ್ಮನ್ನು ತಾವೇ ಗುರುತಿಸಿಕೊಂಡಿರುವ ಅಸಂಖ್ಯಾತ ಮಠಾಧೀಶರುಗಳೂ ಧಾರ್ಮಿಕ-ಜಾತೀಯ ಅಸ್ಮಿತೆಗಳಿಂದಲೇ ತಮ್ಮ ಸಂಸ್ಥೆಗಳನ್ನು ಗುರುತಿಸಿಕೊಳ್ಳುತ್ತಾರೆ. ಜಗದ್ಗುರುಗಳೆಂದು ಪರಿಗಣಿಸಲ್ಪಡುವವರು ಒಂದು ನಿರ್ದಿಷ್ಟ ಸಮುದಾಯವನ್ನು ಮಾತ್ರ ಪ್ರತಿನಿಧಿಸುವುದು ವಿಡಂಬನೆಯಲ್ಲವೇ? ಸಮಸ್ತ ಹಿಂದೂಗಳನ್ನು ಅಥವಾ ಭಾರತೀಯರನ್ನು ಪ್ರತಿನಿಧಿಸುವ ಸೋಗು ಹಾಕುವ ಸ್ವಾಮಿಜೀಗಳು ತಮ್ಮ ಮೂಲಬೇರಿನ ಅಸ್ಮಿತೆಗಳಿಗೆ ಜೋತುಬೀಳುತ್ತಾರೆ. ಜಾತ್ಯತೀತತೆಯಲ್ಲಿ ನಂಬಿಕೆ ವ್ಯಕ್ತಪಡಿಸುತ್ತಲೇ ತಮ್ಮ ಆಚರಣೆ ಮತ್ತು ಸಂಪ್ರದಾಯಗಳಲ್ಲಿ ಒಂದು ನಿರ್ದಿಷ್ಟ ಕೋಮಿನ ಆಚರಣೆಗಳನ್ನು ಪಾಲಿಸುತ್ತಾರೆ. ಯಾವುದೇ ಒಂದು ಮಠದಲ್ಲೂ ಇತರ ಜಾತಿ-ಸಮುದಾಯಗಳ ಸಾಂಪ್ರದಾಯಿಕ ಆಚರಣೆಗಳನ್ನು ಅನುಸರಿಸುವ ನಿದರ್ಶನಗಳಿಲ್ಲ.

ಇನ್ನು ಕೆಲವು ಮಠಗಳು ಮತ್ತು ಮಠಾಧೀಶರು ಭಾರತೀಯತೆ, ರಾಷ್ಟ್ರೀಯತೆ, ದೇಶಪ್ರೇಮದ ಬಗ್ಗೆ ಪುಂಖಾನುಪುಂಖವಾಗಿ ಉಪನ್ಯಾಸ ಮಾಡಿದರೂ ಭಾರತದ ಬಹುಮುಖೀ ಸಂಸ್ಕೃತಿಗೆ ವಿರುದ್ಧವಾಗಿಯೇ ನಡೆದುಕೊಳ್ಳುವುದು ಭಾರತೀಯ ಜನತೆ ಕಂಡಿರುವ ಸತ್ಯ. ಅಸ್ಪೃಶ್ಯತೆಯನ್ನು ಹೋಗಲಾಡಿಸುವ ಸಂಕಲ್ಪ ತೊಡುವ ಸೋಗಿನಲ್ಲೇ ಗರ್ಭಗುಡಿ ಸಂಸ್ಕೃತಿಯನ್ನು ಪೋಷಿಸಿ ಬೆಳೆಸುವ ಈ ಮಠಾಧೀಶರು ಹೇಯವಾದ ಅಸ್ಪೃಶ್ಯತೆಯನ್ನು ಹೋಗಲಾಡಿಸುವುದಿಲ್ಲ. ಈ ಮಹಾನುಭಾವರು ಮಾನಸಿಕ ಮತ್ತು ಸಾಂಸ್ಕೃತಿಕ ಪರಿವರ್ತನೆಯೇ ಸಿದ್ಧೌಷಧ ಎಂಬ ಸತ್ಯವನ್ನೇಕೆ ಗ್ರಹಿಸುವುದಿಲ್ಲ? ಭಾರತೀಯರೆಲ್ಲರೂ ಒಂದೇ ಎಂದು ಬೋಧಿಸುವ ಮಠಾಧಿಪತಿಗಳು ಇಡೀ ಭಾರತೀಯರನ್ನು ಒಳಗೊಳ್ಳುವಂತಹ ಸಾಂಸ್ಕೃತಿಕ ವಾತಾವರಣವನ್ನು ನಿರ್ಮಿಸಲು ಏಕೆ ಯತ್ನಿಸುವುದಿಲ್ಲ? ಹಸಿದವರ ಹೊಟ್ಟೆಯನ್ನು ಉಪನ್ಯಾಸಗಳಿಂದಲೇ ಭರಿಸುವ ಮಠಾಧೀಶರು, ಔದ್ಯಮಿಕ ದೃಷ್ಟಿಕೋನದ ಶಾಲಾ ಕಾಲೇಜು-ಆಸ್ಪತ್ರೆಗಳನ್ನು ತೆರೆಯುವುದರ ಬದಲು, ತಮ್ಮ ಸಂಸ್ಥೆಗಳು ಕೂಡಿಟ್ಟಿರುವ ಕೋಟ್ಯಾಂತರ ರೂಪಾಯಿಗಳ ಸ್ಥಿರಾಸ್ತಿ, ಚರಾಸ್ತಿಗಳನ್ನೇಕೆ ಬಡಜನತೆಗೆ ಉಪಯುಕ್ತವಾಗುವ ರೀತಿಯಲ್ಲಿ ವಿನಿಯೋಗಿಸುವುದಿಲ್ಲ?

ಇತ್ತೀಚೆಗೆ ಕರ್ನಾಟಕದ ಮಂತ್ರಿವರ್ಯರೊಬ್ಬರು ತಿರುಪತಿ ತಿಮ್ಮಪ್ಪನಿಗೆ ೪೦ ಕೋಟಿ ರೂಪಾಯಿ ಬೆಲೆಯ ಚಿನ್ನದ ಕಿರೀಟವನ್ನು ಸಮರ್ಪಿಸಿದರು. ಇಂತಹ ಅನೇಕ ನಿದರ್ಶನಗಳಿವೆ. ಪ್ರತಿಯೊಂದು ಐಷಾರಾಮಿ ಕಟ್ಟಡದ ಹಿಂದೆಯೂ ಒಂದು ಕೊಳೆಗೇರಿ ಇರುತ್ತದೆ ಎಂಬ ಮಾತಿದೆ, ಹಾಗೆ ಪ್ರತಿಯೊಂದು ಧಾರ್ಮಿಕ ಕೇಂದ್ರದ ಹಿಂದೆಯೂ ಒಂದು ಕೇರಿ ಇರುತ್ತದೆ. ಪ್ರತಿಯೊಂದು ಪ್ರತಿಷ್ಠಿತ ದೇವಾಲಯ-ಮಠದಲ್ಲೂ, ಕೋಟ್ಯಂತರ ರೂಪಾಯಿಗಳ ಮೌಲ್ಯದ ಚಿನ್ನದ ಆಭರಣಗಳಿವೆ, ಚಿನ್ನದ ರಥಗಳಿವೆ, ಸಾವಿರಾರು ಎಕರೆ ಭೂಮಿ ಇದೆ, ದೇವಾಲಯದ ಖಾತೆಗಳಲ್ಲಿ ಕೋಟ್ಯಂತರ ರೂಪಾಯಿಗಳ ಠೇವಣಿ ಇದೆ. ಇವೆಲ್ಲವೂ ಭಕ್ತಾದಿಗಳ ಕೊಡುಗೆಯೇ ಇರಬಹುದು, ಆದರೆ ಆ ಸಂಪತ್ತನ್ನು ಸಾಮುದಾಯಿಕ ಒಳಿತಿಗೆ ಉಪಯೋಗಿಸಬಾರದೆಂಬ ನಿಯಮವೇನೂ ಇಲ್ಲ. ಬದಲಾಗಿ ದೇವಾಲಯಗಳು, ಮಠಮಾನ್ಯಗಳು ಪಟ್ಟಭದ್ರ ಹಿತಾಸಕ್ತಿಗಳಿಗೆ ಚಿನ್ನದ ಗಣಿಗಳಾಗಿ, ವಾಣಿಜ್ಯ ಕೇಂದ್ರಗಳಾಗಿ ಪರಿಣಮಿಸಿವೆ. ಯಾವುದೇ ಆದಾಯ ತೆರಿಗೆಯನ್ನು ಪಾವತಿ ಮಾಡದ ಈ ಉದ್ದಿಮೆಗಳು ಸರ್ಕಾರದ ಸುಪರ್ದಿಗೂ ಒಳಪಡದಿರುವುದು ದುರದೃಷ್ಟಕರ.

ಯಾವುದೇ ರೀತಿಯ ಜನಪರ ಕಾಳಜಿ, ಸಾಮುದಾಯಿಕ ಚಿಂತನೆ ಮತ್ತು ಕಾಳಜಿ ಇಲ್ಲದ ಈ ಧರ್ಮಪೀಠಗಳು, ಮಠಗಳು, ಧಾರ್ಮಿಕ ಸಂಸ್ಥೆಗಳು, ಭಾರತೀಯ ಸಂದರ್ಭದಲ್ಲಿ ಯಾವ ರೀತಿಯ ರಾಜಕಾರಣ ಮಾಡಬಲ್ಲವು? ಚುನಾವಣೆಯ ಸಂದರ್ಭದಲ್ಲಿ ವ್ಯಕ್ತವಾಗುವ ಪಕ್ಷ ರಾಜಕಾರಣಕ್ಕೆ ಸ್ಪಂದಿಸುವ ಮಠಾಧೀಶರು, ನಂತರದಲ್ಲಿ ತಮ್ಮ ಸ್ವಜಾತೀಯ ಅಥವಾ ಮತೀಯ ಭಾವನೆಗಳಿಗೇ ಜೋತುಬೀಳುತ್ತಾರೆ. ಈ ಪ್ರವೃತ್ತಿಗಳಿಗೆ ರಾಜಕೀಯ ಅವಶ್ಯವೇ ಅಥವಾ ಭಾರತದ ರಾಜಕಾರಣದಲ್ಲಿ ಈ ಮುಖಂಡರ ಅಗತ್ಯತೆ ಇದೆಯೇ ಎಂಬ ಪ್ರಶ್ನೆ ಸ್ವಾಭಾವಿಕವಾಗಿ ಉದ್ಭವಿಸುತ್ತದೆ. ಧಾರ್ಮಿಕ ಸಂಸ್ಥೆಗಳ ಸಾಮಾಜಿಕ, ಸಾಂಸ್ಕೃತಿಕ ಹೊಣೆಗಾರಿಕೆ ಏನಾದರೂ ಇದ್ದರೆ ಅದು ಚುನಾವಣಾ ರಾಜಕೀಯದ ಚೌಕಟ್ಟಿನಿಂದ ಹೊರಗೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಾತ್ರ ಇರುತ್ತದೆ. ಸಾಮುದಾಯಿಕ ಕಾಳಜಿ ಇಲ್ಲದ ಯಾವುದೇ ಸಂಸ್ಥೆ ಪ್ರಜಾ ತಾಂತ್ರಿಕ ವ್ಯವಸ್ಥೆಯಲ್ಲಿ ಆಳ್ವಿಕರ ಪರವಾಗಿಯೇ ಇರುತ್ತದೆ. ಮಠಗಳೂ, ಧಾರ್ಮಿಕ ಕೇಂದ್ರಗಳೂ ಈ ಅಪವಾದಕ್ಕೆ ಹೊರತಲ್ಲ.

ನಾ. ದಿವಾಕರ
ನಂ. ೫೦೪, 'ಚಿರಂತನ', ೧೩ನೇ ಅಡ್ಡರಸ್ತೆ, ೨ನೇ ಹಂತ
ಶ್ರೀರಾಂಪುರ, ಮೈಸೂರು - ೫೭೦ ೦೨೩

# ಕಡಲು – ಕವಿತೆ



**ಕಡಲು**

ಅಲ್ಲ ಬರೀ ಬುರುಗು
ದಾನವೇ ಪ್ರಧಾನವಾಗಿರುವ
ಬೆರಗು

*　　*　　*

ಆಕಾಶದ ಮೇಲೆ
ಹಾರುವ ಹಕ್ಕಿ
ನೀರ ಒಳಗೆ
ಈಜುವ ಮೀನ ಕಂಡು
ಎರಗಿದಾಗ
ಅರೆಕ್ಷಣ
ಕಡಲು ತಲ್ಲಣ
ಮತ್ತೆ ಯಥಾಪ್ರಕಾರ
ತೆರೆಗಳ ಅನುರಣನ

*　　*　　*

ದೈತ್ಯ ತಿಮಿಂಗಿಲಗಳು
ಕ್ರೂರಿ ಶಾರ್ಕ್‌ಗಳು
ವಿಷಪೂರಿತ ಸರ್ಪಗಳು
ಒಳಗೆ
ಹೊರಗೋ
ಶುಭ್ರ ನೀಲಿ ನಗೆ

*　　*　　*

ಕಡಲಿನ ಹೃದಯವೆಂದರೆ ಹಾಗೆ
ಕಣ್ಣಿಗೆಟುಕದ ವಿಸ್ತಾರವೂ
ಕಲ್ಪಿಸಲಾಗದ ಆಳವೂ
ಒಟ್ಟಿಗೇ ಇರುವ ಬಗೆ

*　　*　　*

ಮೂರು ಪಾಲು ಕಡಲು
ಒಂದು ಭಾಗ ನೆಲ
ಆದರೂ ಸಾಲುತ್ತಿಲ್ಲ
ಮನುಜ ಸ್ವಾರ್ಥಕ್ಕೆ ಜಲ

*　　*　　*

ಭೂಖಂಡಗಳನ್ನು ಶೋಧಿಸಲು
ದಾರಿ ತೋರಿದ್ದು ಕಡಲು
ಚರಿತ್ರೆಯಲ್ಲಿ ಮಾತ್ರ
ಯಾನಿಗಳ ಹೆಸರೇ ದಾಖಲು

*　　*　　*

ಭೋರ್ಗರೆದೆದ್ದು ಬಿದ್ದು
ಮರಳಿ ಹಿಂದಿರುಗುವ
ತೆರೆಗಳು
ಗಡಿದಾಟಬಾರದ
ನಿಯಮಗಳು

*　　*　　*

ವಿಷ ಕೊಚ್ಚೆ ರಾಡಿ
ತುಂಬಿಸುತ್ತಿದ್ದಾನೆ ನಿತ್ಯ
ಕಡಲಿಗೆ ಮನುಜ
ಜಲಚರಗಳು ಸುರಿಸುವ
ಕಣ್ಣೀರು ಮಾತ್ರ
ಕಾಣದಾಗಿದೆ ನಿಜ

*　　*　　*

ಹಡಗುಗಳು ಹೋದ ಹಾದಿ
ಕಡಲು ಮೂಡಿಸುವುದಿಲ್ಲ
ಹಾದಿ ಮೂಡಿಸಿ ತೋರುವ
ಅಹಮಿಕೆಗಲ್ಲಿ ಸ್ಥಾನವೇ ಇಲ್ಲ

**ರವಿಶಂಕರ ಒಡ್ಡಂಬೆಟ್ಟು**
ಅಭ್ಯುದಯ ಪ್ರೆಸ್ ಬಳಿ, ಅಂಚೆ : ಕನ್ಯಾನ - ೫೭೪ ೨೭೯, ಬಂಟ್ವಾಳ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ

# ಚರಿತ್ರೆಯ ಜನಮುಖಿ ನೆಲೆ

ಚರಿತ್ರೆ ಇಂದು ತನ್ನ ಅಧ್ಯಯನದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತಾ ಹೊಸ ಬಗೆಯಲ್ಲಿ ನಿರ್ವಚನೆಗೊಳ್ಳುತ್ತಿದೆ. ಚರಿತ್ರೆ ನಮ್ಮದು, ನಮ್ಮ ವರ್ತಮಾನಕ್ಕೆ ಅಥವಾ ಬದುಕಿಗೆ ಸಂಬಂಧಿಸಿದ್ದು ಎನ್ನುವ ಅಸ್ಮಿತೆಯ ಹಿನ್ನೆಲೆಯ ಭಾವನೆ ಅಥವಾ ಜಾಗೃತಿ ಜನರಲ್ಲಿ ಮೂಡುತ್ತಿದ್ದು, ಇದು ಜನಕೇಂದ್ರಿತ ಚರಿತ್ರೆ ರಚನೆಗೆ ಎಡೆಮಾಡಿಕೊಟ್ಟಿದೆ. ಈ ರಚನೆಗೆ ಪೂರಕವಾದ ಅಧ್ಯಯನ ವಿಧಾನ ಹಾಗೂ ಸಿದ್ಧಾಂತವೂ ರೂಪುಗೊಂಡಿದೆ. ಮಾನವನ ಬದುಕಿನ ನೆಲೆಯ ಮೂಲಕ ಚರಿತ್ರೆಯನ್ನು ನೋಡುವ ವಿಧಾನವೇ ಜನರ ಚರಿತ್ರೆ. ಇಲ್ಲಿ 'ಜನರು' ಎಂದರೆ ಅದೊಂದು ಪರಿಕಲ್ಪನೆ. ಈ ಪರಿಕಲ್ಪನಾತ್ಮಕ ಚೌಕಟ್ಟಿನಲ್ಲಿ ಬರುವವರು ಅಧಿಕಾರ ಹಾಗೂ ಸವಲತ್ತುಗಳಿಂದ ವಂಚಿತರಾದ ಜನಸಮುದಾಯಗಳು. ಇವರು ಪ್ರಾಚೀನದಿಂದಲೂ ವರ್ಣ/ಜಾತಿ/ವರ್ಗದ ಹಿನ್ನೆಲೆಯ ಶ್ರೇಣೀಕೃತ ಸಾಮಾಜಿಕ ರಚನೆಯ ಲಕ್ಷ್ಮಣರೇಖೆಗಳನ್ನು ಮೀರದೆ ಅಥವಾ ಮೀರಲಾರದೆ, ಅದರೊಳಗೇ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವ ಒತ್ತಾಯಕ್ಕೆ ಒಳಗಾದಂಥವರು. ಈ ಜನಸಮುದಾಯಗಳು ಅಧಿಕಾರ ಹಾಗೂ ಸವಲತ್ತುಗಳನ್ನು ಹೊಂದಿಲ್ಲದಿದ್ದರೂ ರಾಜ್ಯ ನಿರ್ಮಾಣ ಪ್ರಕ್ರಿಯೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುವ ಸಾಮರ್ಥ್ಯವನ್ನು ಹೊಂದಿದ್ದವು. ಇವು ರಾಜ್ಯ, ಧರ್ಮ, ಜಾತಿ ಹಾಗೂ ಲಿಂಗ ಆಧಾರಿತ ಲಕ್ಷ್ಮಣರೇಖೆಗಳನ್ನು ಮೀರುವ ಪ್ರಯತ್ನ ಮಾಡಿರುವುದು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ, ಇದಕ್ಕೆ ಪ್ರೇರಣೆಯಾಗಿ ಕಂಡುಬರುವುದು ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ಕಾಣಿಸಿಕೊಂಡ ಪಾಶ್ಚಿಮಾತ್ಯೀಕರಣ ಹಾಗೂ ಸ್ಥಳೀಯ ಸಂಸ್ಕೃತೀಕರಣ/ಸಂಸ್ಕೃತಾನುಸರಣ ಪ್ರಕ್ರಿಯೆಗಳ ವಿರುದ್ಧ ರೂಪುಗೊಂಡ ಚಿಂತನೆಗಳು ಹಾಗೂ ನಡೆದ ಹೋರಾಟಗಳು.

ಪ್ರಭುತ್ವಕೇಂದ್ರಿತ ಧೋರಣೆಗಳು ಚರಿತ್ರೆಯನ್ನು ರಾಜ, ರಾಜ್ಯ ಹಾಗೂ ರಾಜಕೀಯಕ್ಕಷ್ಟೇ ಸೀಮಿತಗೊಳಿಸಿ ವ್ಯಾಖ್ಯಾನಿಸಿದವು. ಇದರಿಂದಾಗಿ ಬೃಹತ್ ಅರಸುಮನೆತನಗಳ ವೈಭವದ ಚರಿತ್ರೆಗಳು ನಿರ್ಮಾಣಗೊಳ್ಳುವಂತಾಯಿತು. ಪ್ರಭುತ್ವ ಸಂಸ್ಕೃತಿ ಲೌಕಿಕ ನೆಲೆಯಲ್ಲಿ ಹಾಗೂ ವೈದಿಕ ಸಂಸ್ಕೃತಿ ಅಲೌಕಿಕ ನೆಲೆಯಲ್ಲಿ ಚರಿತ್ರೆಯನ್ನು ವ್ಯಾಪಿಸಿದವು. ಚರಿತ್ರೆಗೆ ಶ್ರೇಷ್ಠತೆಯ ಹಾಗೂ ಮಡಿವಂತಿಕೆಯ ಲೇಪನವನ್ನು ಹಚ್ಚಿ ಅದರ ಜನಮುಖಿ ನೆಲೆಯನ್ನು ಮರೆಮಾಚಲಾಯಿತು. ಇದರಿಂದಾಗಿ ಮಾನವನ ವಿಕಾಸದ ವಿವಿಧ ಹಂತಗಳು ಚರ್ಚೆಗೊಳಗಾಗದೆ 'ಸ್ಟೇಟ್' ಅಧಿಕಾರದ ನೆಲೆಯಲ್ಲಿ ಪ್ರಜಾವರ್ಗದ ಅಭಿಪ್ರಾಯಗಳನ್ನು ತಾನೇ ಪ್ರಕಟಿಸುತ್ತಿತ್ತು. ಬೇಟೆ, ಕೃಷಿ, ವ್ಯಾಪಾರ, ಕೈಗಾರಿಕೆ, ಪೇಟೆ-ಪಟ್ಟಣಗಳು, ಮಾನವ ಹಾಗೂ ಪ್ರಕೃತಿಯ ನಡುವಿನ ಸಂಬಂಧ ಮುಂತಾದ ವಿಚಾರಗಳು ಅಲಕ್ಷ್ಯಕ್ಕೆ ಒಳಗಾಗಬೇಕಾಯಿತು. ಆದರೆ ಚರಿತ್ರೆಯಲ್ಲಿ ಕೊನೆಗೂ ಉಳಿಯುವುದು ಜನಮುಖಿ ನೆಲೆ ಮಾತ್ರ ಎನ್ನುವುದು ವಾಸ್ತವ. ಏಕೆಂದರೆ ಅಧಿಕಾರ ಹಾಗೂ ಸವಲತ್ತುಗಳ ಮೂಲಕ ನಿರ್ಮಾಣಗೊಳ್ಳುವ ಯಾವುದೇ ವ್ಯವಸ್ಥೆ ತಾತ್ಕಾಲಿಕ ಸ್ವರೂಪದ್ದಾಗಿರುತ್ತದೆ. ಇದಕ್ಕೆ ಚರಿತ್ರೆಯ ರಾಜಪ್ರಭುತ್ವದ ದಿನಗಳೇ ಉದಾಹರಣೆಗಳಾಗಿವೆ. ಸಾಮ್ರಾಜ್ಯಗಳು ಅವನತಿಯ ಭಯದ ನೆರಳಲ್ಲೇ ಆಳ್ವಿಕೆ ನಡೆಸುತ್ತಿದ್ದವು. ಸುಸಜ್ಜಿತ ಸೈನ್ಯವನ್ನು ಹೊಂದುವುದು, ಕೋಟೆಗಳನ್ನು ನಿರ್ಮಿಸುವುದು, ಧಾರ್ಮಿಕ ಸಾಮರಸ್ಯ ಎನ್ನುವ ನಾಟಕವಾಡುವುದು ಸಾಮ್ರಾಜ್ಯಗಳಿಗೆ ಅಸ್ತಿತ್ವದ ದೃಷ್ಟಿಯಿಂದ ಅನಿವಾರ್ಯವಾಗಿತ್ತು. ಆದರೆ ಇವು ಸಾಮ್ರಾಜ್ಯಗಳಿಗೆ ತಾತ್ಕಾಲಿಕ ರಕ್ಷಣೆ ನೀಡಿದವೇ ಹೊರತು ಅವನತಿಯನ್ನು ತಪ್ಪಿಸಲು ಸಾಧ್ಯವಾಗಲಿಲ್ಲ. ಆದರೆ ಚರಿತ್ರೆಯ ತಳಹದಿಯಾದ ಪ್ರಕೃತಿ ಹಾಗೂ ಮಾನವ ಸಮಾಜ ನಿರಂತರ ಸಂಬಂಧವನ್ನು ಉಳಿಸಿಕೊಂಡು ಮುಂದುವರಿದುವು. ಈ ಸಂಬಂಧದಲ್ಲೂ ಏರಿಳಿತಗಳು ಕಾಣಿಸಿಕೊಂಡಿರುವುದು ಪ್ರಭುತ್ವ ಮತ್ತೊಮ್ಮೆ ಬಂಡವಾಳದ ರೂಪದಲ್ಲಿ ಕಾಣಿಸಿಕೊಂಡಾಗ. ಪ್ರಕೃತಿ ಹಾಗೂ ಜನತೆಯ ನೆರವಿನಿಂದ ಪ್ರಭುತ್ವದ ಸೌಧಗಳು ನಿರ್ಮಾಣಗೊಳ್ಳುತ್ತಿರುತ್ತವೆ. ಆದರೆ ಅವು ಒಂದು ಬಾರಿ ನಿರ್ಮಾಣಗೊಂಡ ನಂತರ ತಳಹದಿಗಿಂತ ಮೇಲ್ಕಟ್ಟಡದ ಕುರಿತೇ ಯೋಚಿಸುತ್ತಿರುತ್ತವೆ. ಈ ವ್ಯವಸ್ಥೆಯನ್ನು ಸಮರ್ಥಿಸಿಕೊಳ್ಳುವ ಅಧ್ಯಯನಗಳು ಅರಮನೆ ಕೇಂದ್ರಿತವಾಗಿರುತ್ತವೆಯೇ ಹೊರತು ಜನಕೇಂದ್ರಿತವಾಗಿರುವುದಿಲ್ಲ.

ಚರಿತ್ರೆಯ ಜನಮುಖಿ ನೆಲೆಗೆ ಗತ ಅಥವಾ ವರ್ತಮಾನಗಳೆನ್ನುವ ಗಡಿಗಳಿರುವುದಿಲ್ಲ. ಅದೊಂದು ನಿರಂತರ ಪ್ರಕ್ರಿಯೆಯಾಗಿ ಮುಂದುವರಿಯುತ್ತಿರುತ್ತದೆ. ಆದರೆ ಚರಿತ್ರೆ ಗತದ ನಿರೂಪಣೆಯಾಗಿಯೆ ಬಿಂಬಿತವಾಗಿರುವುದು ಪ್ರಭುತ್ವದ ಹಿನ್ನೆಲೆಯಿಂದ ಅಧ್ಯಯನಕ್ಕೊಳಗಾದ ಕಾರಣ. ಚರಿತ್ರೆಯನ್ನು ಗತವನ್ನಾಗಿ ಹಾಗೂ ಗತವನ್ನು ಸುವರ್ಣಯುಗವನ್ನಾಗಿ ನೋಡುವ ಪರಿಪಾಠ ಇರುವುದರಿಂದಾಗಿ ಚರಿತ್ರೆ ತನ್ನ ನಿರಂತರತೆಯನ್ನು ಕಳೆದುಕೊಳ್ಳಬೇಕಾಯಿತು. ಇದು ಚರಿತ್ರೆಯ ವ್ಯಾಪ್ತಿಯನ್ನು ಕುಗ್ಗಿಸಿ, ಚರಿತ್ರೆಯೆಂದರೆ ರಾಜ-ಮಹಾರಾಜರದ್ದು ಎನ್ನುವ ಸೀಮಿತ ನೆಲೆ ಗಟ್ಟಿಗೊಳ್ಳುವಂತೆ ಮಾಡಿತು. ನಿಜಾರ್ಥದಲ್ಲಿ ಹೇಳುವುದಾದರೆ ಗತ ಹಾಗೂ ವರ್ತಮಾನ ಮಾನವನ ಬದುಕಿನ ಪ್ರತಿಯೊಂದು ಹಂತದಲ್ಲೂ ಇರುವ ಸ್ಥಿತಿ. ಗತವನ್ನು ಕಾಲದ ನೆಲೆಯಿಂದಷ್ಟೇ ಅಲ್ಲದೆ, ಸಿದ್ಧಾಂತವಾಗಿ ಹಾಗೂ ಅಜೆಂಡಾವಾಗಿಯೂ ನಿರೂಪಿಸಲಾಯಿತು. ಆದರೆ ಇಂದು ಚರಿತ್ರೆ ತನ್ನ ಗಡಿಗಳನ್ನು ವಿಸ್ತರಿಸಿಕೊಂಡಿರುವುದರಿಂದಾಗಿ ಗತವು ಅನುಭವದ ರೂಪದಲ್ಲಿ ವರ್ತಮಾನವನ್ನು ಪ್ರಭಾವಿಸುವ ಹಾಗೂ ಪೂರಕವಾಗಿರುವ ಒಂದು ಸ್ಥಿತಿಯಾಗಿ ಮುಖಾಮುಖಿಯಾಗಿದೆ. ಇದು ಗತದ ವರ್ತಮಾನ ಹಾಗೂ ವರ್ತಮಾನದ ಗತ ಇವುಗಳೆರಡಕ್ಕೂ ಸಂಬಂಧಪಟ್ಟ ವಿಚಾರವಾಗಿದೆ. ಚರಿತ್ರೆಯನ್ನು ವರ್ತಮಾನದ ನೆಲೆಯಲ್ಲಿ ಅರ್ಥೈಸಿಕೊಳ್ಳುತ್ತಾ ಹೋದಂತೆ ಗತ ಅದರೊಳಗೆ ಸೇರಿಕೊಳ್ಳುತ್ತಾ ಹೋಗುತ್ತದೆ. ಹಾಗೂ ಚರಿತ್ರೆ ವರ್ತಮಾನದ ಕಥನವಾಗಿ ರೂಪುಗೊಳ್ಳುತ್ತದೆ. ಚರಿತ್ರೆಯಲ್ಲಿ ರೈತರು, ವ್ಯಾಪಾರಸ್ಥರು, ಕುಶಲಕರ್ಮಿಗಳು ಮುಂತಾದವರು ಅಥವಾ ಅವರು ಪ್ರತಿನಿಧಿಸುವ ವ್ಯವಸ್ಥೆ

ಸಬಾಲ್ಟರ್ನ್ ಹಾಗೂ ಆಧುನಿಕೋತ್ತರ ಚಿಂತನೆಗಳು ರಾಷ್ಟ್ರದ ಪರಿಕಲ್ಪನೆಯನ್ನು ಒಡೆಯುವುದರ ಮೂಲಕ ರಾಷ್ಟ್ರವನ್ನು ದುರ್ಬಲವನ್ನಾಗಿಸುವ ಹಾಗೂ ಆ ಮೂಲಕ ಅರಾಜಕತೆಯ ಹುಟ್ಟಿಗೆ ಕಾರಣವಾಗಿವೆ ಎನ್ನುವ ಕಟುವಿಮರ್ಶೆಯನ್ನು ಎದುರಿಸಬೇಕಾಗಿ ಬಂದಿದೆಯಾದರೂ ಅವು ಹುಟ್ಟುಹಾಕಿದ ವೈಚಾರಿಕತೆ ಚರಿತ್ರೆ ಅಧ್ಯಯನಕ್ಕೆ ಹೊಸ ತಿರುವನ್ನು ನೀಡಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಚರಿತ್ರೆಯು ಇಂದು ನವಚಾರಿತ್ರಿಕವಾದದ ನೆಲೆಯಲ್ಲಿ ವ್ಯಾಖ್ಯಾನಗೊಳ್ಳುತ್ತಿದೆ. ಸಂಪ್ರದಾಯ-ಆಧುನಿಕತೆ, ಗತ-ವರ್ತಮಾನ, ಕಲ್ಪನೆ-ವಾಸ್ತವ ಮುಂತಾದ ವಿಚಾರಗಳು ಪುನರ್ ವಿಮರ್ಶೆಗೆ ಒಳಗಾಗುತ್ತವೆ. ಚರಿತ್ರೆಯ ವ್ಯಾಪ್ತಿ ವಿಸ್ತಾರವಾಗಿ 'ಚರಿತ್ರೆಗಳು' ಎನ್ನುವ ಹೊಸ ಸೈದ್ಧಾಂತಿಕತೆ ರೂಪು ಪಡೆದಿದೆ. ಚರಿತ್ರೆಯನ್ನು ಒಂದು ಪ್ರಕ್ರಿಯೆಯನ್ನಾಗಿ ನೋಡುವ ಹಾಗೂ ಜನಮುಖಿ ನೆಲೆಯಲ್ಲಿ ವ್ಯಾಖ್ಯಾನಿಸುವ ಪ್ರಯತ್ನಗಳು ಸ್ಟೇಟ್‌ನ ಅಜೆಂಡಾಗಳನ್ನು ಹಾಗೂ ಚರಿತ್ರೆಕಾರರ ಪೂರ್ವಗ್ರಹಗಳನ್ನು ಬಯಲಿಗೆಳೆದಿವೆ. ಅಷ್ಟೇ ಅಲ್ಲದೆ ಅಧ್ಯಯನದ ಹೊಸ ಸಾಧ್ಯತೆಗಳತ್ತ ಮುಖ ಮಾಡಿ ಮಾನವ ಪರಿಸರ ಹಾಗೂ ಭೌಗೋಳಿಕ ಪರಿಸರಗಳ ನಡುವಿನ ಸಂಬಂಧಗಳು ಮರುವ್ಯಾಖ್ಯಾನಗೊಳ್ಳುವಂತೆಯೂ ಮಾಡಿವೆ.

**ಡಾ|| ಕೆ. ಮೋಹನ್‌ಕೃಷ್ಣ ರೈ**

ಗತವಾಗಿ ಕಂಡುಬರುವುದಿಲ್ಲ. ಏಕೆಂದರೆ ಅದು ನಿರಂತರವಾಗಿರುವ ಒಂದು ಅನುಭವ ಹಾಗೂ ಅದಕ್ಕೆ ಕಾಲ, ಪ್ರದೇಶ ಹಾಗೂ ಪರಂಪರೆಗಳೆನ್ನುವ ಗಡಿಗಳಿರುವುದಿಲ್ಲ. ಇದೇ ಮಾತನ್ನು ಪ್ರಭುತ್ವಕ್ಕೆ ಸಂಬಂಧಿಸಿ ಹೇಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಪ್ರಭುತ್ವವು ಕಾಲ, ಪ್ರದೇಶ ಹಾಗೂ ಪರಂಪರೆ ಇವುಗಳ ಮಿತಿಯೊಳಗೆ ವ್ಯವಹರಿಸಿದ ಒಂದು ವ್ಯವಸ್ಥೆ. ಚರಿತ್ರೆಯನ್ನು ಒಟ್ಟಾರೆಯಾಗಿ ವರ್ತಮಾನದ ಕಥನವನ್ನಾಗಿ ವಿಶ್ಲೇಷಿಸುವಾಗ ಅದರಲ್ಲಿ ಪ್ರಭುತ್ವ ಹಾಗೂ ಜನತೆ ಇವುಗಳೆರಡರ ಅನುಭವವೂ ಸೇರಿಕೊಂಡಿರುತ್ತದೆ. ಜನಕೇಂದ್ರಿತ ಅಧ್ಯಯನ ಈ ಅನುಭವಗಳನ್ನು 'ಹಿಸ್ಟರಿ ಫ್ರಂ ಬಿಲೋ' ಎನ್ನುವ ಸಿದ್ಧಾಂತದ ಅಡಿಯಲ್ಲಿ ಗ್ರಹಿಸುತ್ತದೆ.

ಚರಿತ್ರೆಯನ್ನು ಅಧ್ಯಯನ ನಡೆಸುವ ವಿವಿಧ ಪಂಥಗಳು ತಮ್ಮ ಸೈದ್ಧಾಂತಿಕತೆಗೆ ಅನುಗುಣವಾಗಿ ಮಾನವ ಸಮಾಜವನ್ನು ಅರ್ಥೈಸಿಕೊಂಡು ನಿರ್ವಚಿಸಿದವು. ಭಾರತ ದೇಶದ ಚರಿತ್ರೆ ನಿರ್ಮಾಣಗೊಂಡ ಬಗೆಯನ್ನೊಮ್ಮೆ ಅವಲೋಕಿಸಿದಾಗ ನಾನಾ ಸ್ವರೂಪದ ಅಧ್ಯಯನಗಳು ಗೋಚರಿಸುತ್ತವೆ. ಬಹುತೇಕ ಅಧ್ಯಯನಗಳು ವಾದ-ಪ್ರತಿವಾದಗಳಿಂದ ಕೂಡಿದ್ದು, ನೈಜ ಚರಿತ್ರೆಯ ಪರಿಧಿಯಿಂದಾಚೆಗೆ ಸಕ್ರಿಯವಾಗಿರುವುದನ್ನು ಕಾಣಬಹುದಾಗಿದೆ. ಮಾನವ ಸಮಾಜವನ್ನು ಪ್ರಕೃತಿಯಿಂದ ಬೇರ್ಪಟ್ಟ ರೀತಿಯಲ್ಲಿ ಹಾಗೂ ಪ್ರಭುತ್ವದ ಖಾಸಗಿ ಚಟುವಟಿಕೆಗಳಿಗೆ ಸೀಮಿತಗೊಳಿಸಿ ಅಧ್ಯಯನ ನಡೆಸಿದ ಚರಿತ್ರೆಕಾರರ ಸಂಖ್ಯೆಯೇ ಹೆಚ್ಚಿನದು. ಇದರಿಂದಾಗಿ ಮಾನವ ಸಮಾಜ ಬೆಳೆದು ಬಂದಿರುವ ಹಾದಿ ಅಥವಾ ವಿಕಾಸದ ನೆಲೆಗಳು ಮಸುಕಾಗಿ, ವೈಭವ, ಸುವರ್ಣಯುಗ ಮುಂತಾದ ರಚನೆಗಳು ಪ್ರಧಾನವಾಗಿ ಕಂಡುಬರಲಾರಂಭಿಸಿದವು. ಓರಿಯಂಟಾಲಿಸ್ಟ್ ಅಥವಾ ಪೌರ್ವಾತ್ಯವಾದಿ ವಿದ್ವಾಂಸರು ಭಾರತವನ್ನು ಸಂಸ್ಕೃತದ ಅಥವಾ ವೈದಿಕ ಸಾಹಿತ್ಯದ ಮೂಲಕ ಯೂರೋಪಿಗೆ ಪರಿಚಯಿಸುವ ಕೆಲಸ ಮಾಡಿದರು. ಇವರು ಯೂರೋಪಿನ ರಮ್ಯವಾದದ ಪ್ರಭಾವಕ್ಕೆ ಒಳಗಾದ ವಿದ್ವಾಂಸರಾಗಿದ್ದರು. ಇವರಿಗೆ ಭಾರತದ ಬಹುತ್ವದ ನೆಲೆಗಳು ಮುಖ್ಯವಾಗಿರಲಿಲ್ಲ. ತಾವು ಯೂರೋಪಿನಲ್ಲಿ ಕಳೆದುಕೊಂಡ ಆಧ್ಯಾತ್ಮಿಕ ಗತವನ್ನು ಭಾರತದಲ್ಲಿ ಕಾಣುವುದು ಹಾಗೂ ವಸಾಹತು ಆಳ್ವಿಕೆಗೆ ಪೂರಕವಾಗಿ ಭಾರತವನ್ನು ಸಜ್ಜುಗೊಳಿಸುವುದು ಹಾಗೂ ಅರ್ಥೈಸಿಕೊಳ್ಳುವುದು ಇವರ ಉದ್ದೇಶವಾಗಿತ್ತು. ವಸಾಹತು ಆಳ್ವಿಕೆಯ ಸಂದರ್ಭದಲ್ಲಿ ಸಾಮ್ರಾಜ್ಯಶಾಹಿ ಚರಿತ್ರೆಕಾರರು ಬ್ರಿಟಿಷ್ ಸರ್ಕಾರದ ಮರ್ಕೆಂಟೈಲ್, ಇಂಪೀರಿಯಲ್ ಹಾಗೂ ಮಿಲಿಟರಿ ಧೋರಣೆಗಳಿಗೆ ಅನುಗುಣವಾಗಿ ಚರಿತ್ರೆ ರಚಿಸಿದರು. ಅವರ ಬರಹಗಳು ಬ್ರಿಟಿಷ್ ಸರ್ಕಾರದ ವಿಭಜಿಸಿ ಆಳುವ ನೀತಿಯ, ಬಿಳಿಯರ ಜವಾಬ್ದಾರಿಯ ಹಿನ್ನೆಲೆಯ ಹಾಗೂ ಅನಾಗರಿಕರನ್ನು ನಾಗರಿಕರನ್ನಾಗಿಸುವುದು ನಮಗೆ ನಿಸರ್ಗದತ್ತವಾಗಿ ಬಂದಿರುವುದು ಎನ್ನುವ ಸಿದ್ಧಾಂತದ ಪ್ರಭಾವದಿಂದ ರೂಪುಗೊಂಡಿದ್ದವು.

ಸಾಮ್ರಾಜ್ಯಶಾಹಿ ಬರಹಗಳಲ್ಲಿ ಚಿತ್ರಿತವಾದ ಮೂರು ಪ್ರಮುಖ ವಿಚಾರಗಳೆಂದರೆ ಆಧುನಿಕ, ಬ್ರಿಟಿಷ್ ಹಾಗೂ ವಸಾಹತು. ಆಧುನಿಕವೆಂದರೆ ತಂತ್ರಜ್ಞಾನ ಹಾಗೂ ಕೈಗಾರಿಕಾ ಅರ್ಥವ್ಯವಸ್ಥೆ, ಬ್ರಿಟಿಷ್ ಎಂದಾಗ ಪಾಶ್ಚಿಮಾತ್ಯ ಸಂಸ್ಕೃತಿ, ವಸಾಹತು ಎಂದರೆ ವಸಾಹತು ಆಳ್ವಿಕೆಗೆ ಸಂಬಂಧಪಟ್ಟ ಹಾಗೂ ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಪ್ರಬಲವಾದ ವ್ಯವಸ್ಥೆ ಎಂದರ್ಥ. ನಾಗರಿಕ-ಅನಾಗರಿಕ, ಸಂಪ್ರದಾಯ-ಆಧುನಿಕತೆ, ಕೈಗಾರಿಕಾ-ಕೈಗಾರಿಕಾಪೂರ್ವ ಮುಂತಾದ ವಿಂಗಡನೆಗಳನ್ನು ಪೂರ್ವ ಮತ್ತು ಪಶ್ಚಿಮವನ್ನು ಆಧರಿಸಿ ಉದ್ದೇಶಪೂರ್ವಕವಾಗಿಯೇ ಮಾಡಲಾಯಿತು. ವಸಾಹತು ಚರಿತ್ರೆ ಬರವಣಿಗೆಗಳು 'ಸಾಮ್ರಾಜ್ಯ' ಎನ್ನುವ ಪರಿಕಲ್ಪನೆಗೆ ಒತ್ತನ್ನು ಕೊಡುವ, ಕೋಮುವಾದಿ ಭಾವನೆಗಳನ್ನು ಹರಡುವ ಹಾಗೂ ಪಶ್ಚಿಮ ಎನ್ನುವ ಶ್ರೇಷ್ಠತೆಯ ಹಿನ್ನೆಲೆಯಲ್ಲಿ ಯೂರೋಪ್ ಕೇಂದ್ರಿತವಾಗಿ ರೂಪುಗೊಂಡವು. ನವಸಾಮ್ರಾಜ್ಯಶಾಹಿ ಬರಹಗಳು ಕೂಡ ಬದಲಾದ ಸಂದರ್ಭದಲ್ಲಿ ಹೊಸ ಸೈದ್ಧಾಂತಿಕತೆಯೊಂದಿಗೆ ಹಿಂದಿನ ವಾದಗಳನ್ನು ಪುಷ್ಟೀಕರಿಸುವ, ಅವುಗಳಿಗೆ ಹೊಸ ರೂಪ ಕೊಡುವ, ಸಮರ್ಥಿಸಿಕೊಳ್ಳುವ ಹಾಗೂ ಜಾಗತಿಕ ನೆಲೆಯಲ್ಲಿ ಇಟ್ಟು ವ್ಯಾಖ್ಯಾನಿಸುವ ಕೆಲಸವನ್ನು ಮಾಡಿವೆ ಹಾಗೂ ಮಾಡುತ್ತಿವೆ. ರಾಷ್ಟ್ರ, ರಾಷ್ಟ್ರೀಯತೆ, ದೇಶೀಯತೆ ಮುಂತಾದ ಪರಿಕಲ್ಪನೆಗಳು ಭಾರತದಲ್ಲಿ ಕಾಣಿಸಿಕೊಳ್ಳುವುದಕ್ಕೆ ಯೂರೋಪ್ ಕಾರಣ ಎನ್ನುವ ವಾದ ನವಸಾಮ್ರಾಜ್ಯಶಾಹಿಗಳದ್ದು. ಭಾರತೀಯರಿಗೆ 'ಚಾರಿತ್ರಿಕ ಪ್ರಜ್ಞೆ'ಯನ್ನು ನೀಡಿರುವುದೇ ಯೂರೋಪ್ ಎನ್ನುವುದು ಇನ್ನೊಂದು ವಾದ. ಪ್ರಸ್ತುತ ಈ ವಾದ ಮಾರುಕಟ್ಟೆ ಕೇಂದ್ರಿತ ವ್ಯವಸ್ಥೆಯ ಹಿನ್ನೆಲೆಯಲ್ಲಿ 'ಜ್ಞಾನ ವ್ಯವಸ್ಥೆ' ಎನ್ನುವ ಸಿದ್ಧಾಂತದ ಮೂಲಕ ಜಗತ್ತನ್ನು ಆವರಿಸಿಕೊಂಡಿದೆ.

ಸಾಮ್ರಾಜ್ಯಶಾಹಿ ಚಿಂತನೆಗಳಿಗೆ ಪ್ರತಿರೋಧವನ್ನು ಒಡ್ಡುವ, ನಿರಂತರ ಸಂವಾದವನ್ನು ನಡೆಸುವ ಹಾಗೂ ಈ ಬಗೆಯ ವಾದ-ಪ್ರತಿವಾದಗಳಿಂದ ಕೂಡಿರುವ ರಾಷ್ಟ್ರೀಯವಾದಿ ಚಿಂತನಾ ಪರಂಪರೆ ಭಾರತದ ಚರಿತ್ರೆಯನ್ನು ವೈಭವ, ಸುವರ್ಣಯುಗ, ಹಿರಿಮೆ, ಅಭಿಮಾನ ಮುಂತಾದ ಶ್ರೀಮಂತಿಕೆಯ ಚೌಕಟ್ಟಿನಲ್ಲಿ ನಿರ್ಮಿಸಿತು. ಪೌರ್ವಾತ್ಯವಾದಿಗಳಂತೆ ಇವರಿಗೂ ಭಾರತದ ಬಹುತ್ವದ ನೆಲೆಗಳು ಮುಖ್ಯವಾಗಿ ಕಂಡುಬರಲೇ ಇಲ್ಲ. ಚರಿತ್ರೆಯ ಪ್ರಾದೇಶಿಕ ಹಾಗೂ ಮೌಖಿಕ ನೆಲೆಗಳಂತೂ ಸಂಪೂರ್ಣವಾಗಿ ನಿರ್ಲಕ್ಷ್ಯಕ್ಕೆ ಒಳಗಾದವು. ರಾಜಪ್ರಭುತ್ವ ಹಾಗೂ ಧಾರ್ಮಿಕ ಪ್ರಭುತ್ವಕ್ಕೆ ಸಂಬಂಧಿಸಿದ ವಿಚಾರಗಳು ರಾಷ್ಟ್ರೀಯವಾದಿ ಚಿಂತನೆಯ ಹಿನ್ನೆಲೆಯಲ್ಲಿ ರಚನೆಗೊಂಡ ಚರಿತ್ರೆ ಕೃತಿಗಳಲ್ಲಿ ತುಂಬಿಕೊಂಡವು. ರಾಷ್ಟ್ರೀಯವಾದಿಗಳು ರಾಷ್ಟ್ರೀಯ ಚರಿತ್ರೆಯನ್ನು ನಿರ್ಮಿಸಿರುವುದು ವೇದ, ಪುರಾಣ, ಧರ್ಮ ಹಾಗೂ ಸಾಮ್ರಾಜ್ಯಗಳ ರಾಜಕೀಯ ಚರಿತ್ರೆಯ ಮೂಲಕ. ಇವರಿಗೆ ಭಾರತದೊಳಗಿನ ಹಲವಾರು ಭಾರತಗಳು, ಆಂತರಿಕ ವೈರುಧ್ಯಗಳು,

## ಪ್ರೀತಿಯ ಮಾತಾಡೋಣ

ನಿನ್ನನ್ನು ಎಲ್ಲೋ
ನೋಡಿದ ನೆನಪು
ದೇಶ ಒಡೆದ ದಿನ
ಶಾಂತಿ ಕದಡಿದವರ ಹಿಂದೆ
ನಿಂತಿದ್ದವನು
ನೀನೇ ಅಲ್ಲವೇ ?

ತಾತನ ಎದೆಯಿಂದ
ನೆತ್ತರು ಚೆಲ್ಲಿದ ದಿನ
ನಾನು ಅಳುತ್ತಿರುವಾಗ
ನನ್ನನ್ನು ನೋಡಿ
ನಕ್ಕವನು ನೀನಲ್ಲವೇ ?

ಬಾಬ್ರಿ ಮಸೀದಿಯ
ಧ್ವಂಸದ ದಿನ
ಅವರಿಗೆ ಸಿಹಿ ಹಂಚಿದವನು
ನೀನೇ ಅಲ್ಲವೆ ?

ಹೌದು !
ನೀನೇಕೆ ಈ ನೆಲದ
ಶಾಂತಿ, ನೆಮ್ಮದಿಯ
ಸಹಿಸದೆ
ಹಲ್ಲು ಕಡಿಯುತ್ತಿರುವೆ ?

ಮಂದಿರ, ಮಸೀದಿಗಳ
ಹಿಂದೆ ನಿಂತು
ಬೆಂಕಿ ಹಚ್ಚುತ್ತಿರುವೆ
ಮತ್ತೆ ಮತ್ತೆ ನಮ್ಮನ್ನು
ಏಕೆ ಕಾಡುತ್ತಿರುವೆ
ಬೆನ್ನು ಹತ್ತಿದ ಬೇತಾಳವೇ
ಕುಡಿದ ನೆತ್ತರು
ಸಾಕಾಗಲಿಲ್ಲವೇ ನಿನಗೆ !



ನೀನು ಬಾಯ್ತೆರೆದರೆ ಸಾಕು
ಬರೀ ದ್ವೇಷದ ಮಾತುಗಳು.
ಸಾಕು ನಿಲ್ಲಿಸು
ನಿನ್ನ ದ್ವೇಷದ ಮಾತುಗಳನ್ನು !
ಬಾ ಮಾತಾಡೋಣ
ಪ್ರೀತಿಯ ಒಂದೆರಡು
ಮಾತುಗಳನ್ನು

**ಹುಲಿಕಟ್ಟಿ ಚನ್ನಬಸಪ್ಪ**
ಮನೆ ನಂ. ಇ.ಡಬ್ಲ್ಯು.ಎಸ್-೬೦, ಹುಡ್ಕೋ ಬಡಾವಣೆ
ಸಿರುಗುಪ್ಪ - ೫೮೩ ೧೨೧, ಬಳ್ಳಾರಿ ಜಿಲ್ಲೆ

ಅಸಮಾನತೆಗಳು ಹಾಗೂ ಕೆಳವರ್ಗಗಳು ನಡೆಸಿದ ಹೋರಾಟಗಳು ಚಿಂತನಯೋಗ್ಯ ಎಂದು ಕಂಡುಬರಲೇ ಇಲ್ಲ. ವಿದ್ಯಾವಂತ ಮೇಲ್ವರ್ಗದ ಜನತೆ ಹುಟ್ಟುಹಾಕಿದ ರಾಷ್ಟ್ರ ಹಾಗೂ ರಾಷ್ಟ್ರೀಯತೆಯ ಕಲ್ಪನೆಯನ್ನು ವಿರೋಧಿಸುವ ಹಾಗೂ ಹೊಸ ಬಗೆಯಲ್ಲಿ ವ್ಯಾಖ್ಯಾನಿಸುವ ಪ್ರಯತ್ನಗಳನ್ನು ಬ್ರಾಹ್ಮಣೇತರ ವರ್ಗಗಳು ಮಾಡಿದವು. ಇವು ಆಂತರಿಕ ಹಾಗೂ ಬಾಹ್ಯ ವಸಾಹತೀಕರಣದ ನೆಲೆಗಳನ್ನು ಸ್ಪಷ್ಟವಾಗಿ ಗುರುತಿಸಿಕೊಂಡು ಅವುಗಳನ್ನು ಸಮಾನವಾಗಿ ವಿರೋಧಿಸಿದವು. ಆದರೆ ಇಲ್ಲೂ ಯೂರೋಪ್ ಕೇಂದ್ರಿತ ಆಧುನಿಕತೆಯ ಪ್ರಭಾವವನ್ನು ಕಾಣಬಹುದಾಗಿದೆ. ರಾಷ್ಟ್ರದೊಳಗಿನ ಹಲವಾರು ರಾಷ್ಟ್ರ ಹಾಗೂ ರಾಷ್ಟ್ರೀಯತೆಯ ಕಲ್ಪನೆಗಳು ಕಾಣಿಸಿಕೊಂಡ ಮೇಲೆ ಭಾರತದಲ್ಲಿ ನಿಜವಾಗಿಯೂ ಬಹುತ್ವದ ನೆಲೆಯಲ್ಲಿ ವಸಾಹತು ವಿರೋಧಿ ಹೋರಾಟಗಳು ಕಾಣಿಸಿಕೊಳ್ಳಲಾರಂಭಿಸಿದವು. ಈ ಬಗೆಯ ಹೋರಾಟಗಳಲ್ಲಿ ಬ್ರಿಟಿಷರಷ್ಟೆ ಗುರಿಯಾಗಿರದೆ ಶ್ರೇಷ್ಠತೆಯ ಹಾಗೂ ಮಡಿವಂತಿಕೆಯ ನೆಲೆಯಲ್ಲಿ ಗುರುತಿಸಿಕೊಂಡ ವರ್ಗಗಳೂ ವಿರೋಧವನ್ನು ಎದುರಿಸ ಬೇಕಾಗಿ ಬಂತು. 'ಹಿಂದೂ ಧರ್ಮ'ದ ಮೂಲಕ ರಾಷ್ಟ್ರೀಯತೆಯನ್ನು ಕಂಡುಕೊಂಡಿದ್ದ ವರ್ಗಗಳು ಸ್ವಾತಂತ್ರ್ಯೋತ್ತರ ಸಂದರ್ಭದಲ್ಲೂ ನವರಾಷ್ಟ್ರೀಯತೆಯನ್ನು 'ಹಿಂದಿ-ಹಿಂದೂ-ಹಿಂದೂಸ್ತಾನ್' ಎನ್ನುವ ಮಂತ್ರವನ್ನು ಪಠಿಸುವುದರ ಮೂಲಕ ಪ್ರಚಾರ ಪಡಿಸುತ್ತಿರುವುದನ್ನು ಕಾಣಬಹುದಾಗಿದೆ.

ವಸಾಹತುಶಾಹಿ ಹಾಗೂ ರಾಷ್ಟ್ರೀಯತೆ ಎನ್ನುವ ಪರಿಕಲ್ಪನೆಗಳು ಹುಟ್ಟುಹಾಕಿದ ಅಧ್ಯಯನ ಮಾದರಿಗಳು ಚರಿತ್ರೆಯ ಏಕಮುಖ ಬೆಳವಣಿಗೆಗೆ ಕಾರಣವಾದವು. ಇವು ತಮ್ಮನ್ನು ವಿರೋಧಿಸುವ ಹಾಗೂ ತಮಗಿಂತ ಭಿನ್ನವಾಗಿ ಹೋರಾಟಗಳನ್ನು ಸಂಘಟಿಸುವ ಪ್ರಯತ್ನಗಳನ್ನು ತಮ್ಮ ಅಧೀನಗೊಳಿಸುತ್ತಲೇ ಸಾಗಿದವು. ಈ ಬಗೆಯ ದೃಷ್ಟಿಕೋನದ ಮಿತಿಗಳನ್ನು ಹಾಗೂ ಬದಲೀ ಅಧ್ಯಯನ ಮಾದರಿಗಳನ್ನು ಗುರುತಿಸಿ ಹುಟ್ಟುಹಾಕಿದವರು ಮಾರ್ಕ್ಸ್‌ವಾದಿಗಳು. ಇದನ್ನು ಭಾರತದ ಚರಿತ್ರೆ ಬರವಣಿಗೆಯ ದೊಡ್ಡ ತಿರುವು ಎಂದೇ ಪರಿಗಣಿಸಲಾಗಿದೆ. ಇದರರ್ಥ ಮಾರ್ಕ್ಸ್‌ವಾದಿಗಳು ಭಾರತದ ಚರಿತ್ರೆ ಬರವಣಿಗೆಯ ತಪ್ಪುಗಳೆಲ್ಲವನ್ನೂ ಸರಿಪಡಿಸಿದರು ಎಂದಲ್ಲ. ಭಾರತದ ಚರಿತ್ರೆಗೆ ಆರ್ಥಿಕ ಚರಿತ್ರೆಯೆನ್ನುವ ಹೊಸ ಆಯಾಮವನ್ನು ನೀಡಿ, ಚರಿತ್ರೆಯನ್ನು ಸಮಾಜಮುಖಿಯನ್ನಾಗಿ ಅರ್ಥೈಸಿ, ವ್ಯಾಖ್ಯಾನಿಸುವ ಪ್ರಯತ್ನವನ್ನು ಮಾಡಲಾಯಿತು. ಮಾರ್ಕ್ಸ್‌ವಾದವು ಚರಿತ್ರೆಯನ್ನು ಬೌದ್ಧಿಕವಾಗಿ ಹಾಗೂ ಭೌತಿಕವಾಗಿ ವಾಸ್ತವ ಜಗತ್ತಿಗೆ ಹತ್ತಿರವನ್ನಾಗಿಸಿತು. ಇದರಿಂದಾಗಿ ಚರಿತ್ರೆಯ ಸಮಾಜಮುಖಿ ಹಾಗೂ ಜನಮುಖಿ ನೆಲೆಗಳು ಅಧ್ಯಯನಕ್ಕೆ ತೆರೆದು ಕೊಳ್ಳುವಂತಾಯಿತು. ಪೌರ್ವಾತ್ಯವಾದಿಗಳ ಗತ ವೈಭವದ ರಮ್ಯವಾದಿ ಕಥನವನ್ನು, ಸಾಮ್ರಾಜ್ಯಶಾಹಿಗಳ ಆಧುನಿಕ ಪರಿಕಲ್ಪನೆಯನ್ನು ಹಾಗೂ ರಾಷ್ಟ್ರೀಯವಾದಿಗಳ ವೈದಿಕ ಸಂಸ್ಕೃತಿಯ ಮೂಲಕ ಭಾರತವನ್ನು ನೋಡುವ ಕ್ರಮವನ್ನು ಸಮಾನವಾಗಿ ವಿರೋಧಿಸಿತು. ಈ ಎಲ್ಲ ಮಿತಿಗಳನ್ನು ಮೀರುವಲ್ಲಿ ಯಶಸ್ವಿಯಾದ ಮಾರ್ಕ್ಸ್‌ವಾದವು ಚರಿತ್ರೆಯನ್ನು ವರ್ತಮಾನದ ಕಥನ ಎಂಬುದಾಗಿ ನಿರೂಪಿಸುತ್ತದೆ. ಆದರೂ ಮಾರ್ಕ್ಸ್‌ವಾದವು ವರ್ತಮಾನದ ವಾಸ್ತವಗಳನ್ನು ಗ್ರಹಿಸಿಕೊಳ್ಳುವಲ್ಲಿ ಸೋತಿದೆ ಹಾಗೂ ತನ್ನ ಸಿದ್ಧಾಂತವನ್ನು ಭಾರತದ ಸಂದರ್ಭಕ್ಕೆ ಅನ್ವಯಿಸುವಲ್ಲಿ ಹಾಗೂ ಸಾಮಾಜಿಕ ಪರಿವರ್ತನೆ ತರುವಲ್ಲಿ ಅಷ್ಟೊಂದು ಯಶಸ್ವಿಯಾಗಿಲ್ಲ ಎನ್ನುವ ಟೀಕೆಯೂ ಇದೆ.

ಚರಿತ್ರೆಯನ್ನು ಜನಮುಖಿ ನೆಲೆಯಲ್ಲಿ ನಿರೂಪಿಸಿದ ಸಬಾಲ್ಟರ್ನ್ ಅಧ್ಯಯನಗಳು ಸಮುದಾಯಗಳನ್ನು ಆಯಾ ಸಂದರ್ಭದ ಅಧಿಕಾರ ಅಥವಾ ಸ್ಟೇಟ್ ಹೇಗೆ ಬಳಸಿಕೊಳ್ಳು ತ್ತಿರುತ್ತದೆ ಎನ್ನುವುದರ ಕುರಿತು ವಿಶ್ಲೇಷಿಸುತ್ತವೆ. ಇದು ರಾಷ್ಟ್ರೀಯ ಚರಿತ್ರೆಯ ಕಥನಗಳನ್ನು ಅಲ್ಲಗಳೆಯುವುದಷ್ಟೆ ಅಲ್ಲದೆ ರಾಷ್ಟ್ರ, ರಾಷ್ಟ್ರೀಯತೆ ಹಾಗೂ ರಾಷ್ಟ್ರೀಯವಾದಗಳೆನ್ನುವ ಅಖಂಡ ನಿರೂಪಣೆಗಳಲ್ಲಿ ಸಮಾಜದ ಕೆಳವರ್ಗಗಳು ಹೇಗೆ ಅಲಕ್ಷಿತವಾದವು ಎನ್ನುವುದನ್ನು ಪರಿಶೀಲಿಸುತ್ತದೆ. ಒಟ್ಟಾರೆಯಾಗಿ ಇದು 'ರಾಷ್ಟ್ರ' ಎನ್ನುವ ಪರಿಕಲ್ಪನೆಯನ್ನೇ ವಿರೋಧಿಸುತ್ತದೆ. ಏಕೆಂದರೆ ರಾಷ್ಟ್ರವೆಂದರೆ ಅದು ಪ್ರಭುತ್ವ, ಅಧಿಕಾರ ಹಾಗೂ ಸವಲತ್ತು ಗಳಿಗೆ ಸಂಬಂಧಿಸಿದ್ದು ಹಾಗೂ ಎಲ್ಲ ಕ್ಷೇತ್ರಗಳಲ್ಲೂ ಏಕಸ್ವಾಮ್ಯ ಹಾಗೂ ಯಜಮಾನಿಕೆಯನ್ನು ಸ್ಥಾಪಿಸಿಕೊಂಡಿರುವಂತಹದ್ದು. ವಸಾಹತೋತ್ತರ ಚಿಂತನೆಗಳು ಯೂರೋಪ್ ಕೇಂದ್ರಿತ ಜಾಗತಿಕ ಚಿಂತನೆಗಳನ್ನು ವಿರೋಧಿಸಿ, ಅದರಾಚೆಗೆ ಬಹುಸತ್ಯಗಳನ್ನು ಪ್ರತಿಪಾದಿಸುವ ಹಾಗೂ ಸಿದ್ಧ-ಮಾದರಿಗಳನ್ನೂ ಪ್ರಶ್ನಿಸುವ ಪ್ರಯತ್ನ ಮಾಡಿವೆ. ಈ ನಿಟ್ಟಿನಲ್ಲಿ ಹೆಸರಿಸ ಬಹುದಾದ ಆಧುನಿಕೋತ್ತರವಾದವು ಯೂರೋಪ್ ತನ್ನ ಸ್ವಾರ್ಥ ರಾಜಕಾರಣದ ನೆಲೆಯಲ್ಲಿ ಹುಟ್ಟುಹಾಕಿದ ಆಧುನಿಕ, ವೈಜ್ಞಾನಿಕ, ನಾಗರಿಕ ಮುಂತಾದ ಹೇರಿಕೆಯ ಸ್ವರೂಪದ ವಿಚಾರಗಳನ್ನು ಪ್ರಶ್ನಿಸುತ್ತದೆ. ಯೂರೋಪ್ 'ಆಧುನಿಕ ಸತ್ಯ'ದ ಮೂಲಕ ಕಟ್ಟಿಕೊಂಡ ಸಾಮ್ರಾಜ್ಯದ ಅಜೆಂಡಾಗಳನ್ನು ಬಯಲಿಗೆಳೆಯುವ ಹಾಗೂ ಅಖಂಡ ನಿರೂಪಣೆಯ ಮೂಲಕ ಜಗತ್ತನ್ನೇ ತಮ್ಮ ರಾಜಕಾರಣಕ್ಕೆ ಬಳಸಿಕೊಂಡ ಹಾಗೂ ಇದರ ಅನುಷ್ಠಾನಕ್ಕೆ ಸೃಷ್ಟಿಸಿಕೊಂಡ ಮಿಥ್‌ಗಳನ್ನು ಪ್ರಶ್ನಿಸುವ ಹಾಗೂ ಬದಲಿ ಅಧ್ಯಯನ ಮಾದರಿಗಳನ್ನು ಹುಟ್ಟುಹಾಕುವ ಕೆಲಸವನ್ನು ಆಧುನಿಕೋತ್ತರವಾದವು ಮಾಡಿದೆ. ಈ ನಿಟ್ಟಿನಲ್ಲಿ ಆಧುನಿಕೋತ್ತರವಾದವು ಸಬಾಲ್ಟರ್ನ್ ಅಧ್ಯಯನಕಾರರನ್ನು ಪ್ರಭಾವಿಸಿದೆ. ಚರಿತ್ರೆಯನ್ನು ಬಿಡಿ ಬಿಡಿಯಾಗಿ ನೋಡುವ, ಬಹುತ್ವದ ನೆಲೆಗಳನ್ನು ಗುರುತಿಸುವ ಹಾಗೂ ಕೆಳವರ್ಗದ ಅಸ್ತಿತ್ವವನ್ನು ಪ್ರತ್ಯೇಕವಾಗಿ ಆಧುನಿಕ ರಾಷ್ಟ್ರದ ಚೌಕಟ್ಟಿನ ಹೊರಗೆ ಕಾಣುವಲ್ಲಿ ಈ ಎರಡೂ ಚಿಂತನೆಗಳು ಒಟ್ಟೊಟ್ಟಿಗೆ ಸಾಗುತ್ತವೆ.

ಸಬಾಲ್ಟರ್ನ್ ಚಿಂತನೆಗಳು ಅಧಿಕಾರದ ನೆಲೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಕೆಳಸಮುದಾಯಗಳು ಎಲೈಟ್ ವರ್ಗಗಳ ಅಥವಾ ರಾಷ್ಟ್ರದ ಪ್ರಭಾವ ವಲಯದೊಳಗೆ ವ್ಯವಹರಿಸಬೇಕಾದ ಒತ್ತಾಯಕ್ಕೆ ಒಳಗಾದ ಚಾರಿತ್ರಿಕ ಸಂದರ್ಭಗಳನ್ನು ವಿಶ್ಲೇಷಿಸುತ್ತವೆ. ಕೆಳಸಮುದಾಯಗಳನ್ನು ತಮ್ಮ ಅಧಿಕಾರ ವ್ಯಾಪ್ತಿಯೊಳಗೆ ತರುವುದು ಮೇಲ್ವರ್ಗಗಳಿಗೆ ಅನಿವಾರ್ಯವಾಗಿತ್ತು. ಗ್ರಾಮ್‌ಶಿಯು 'ಸಾಂಸ್ಕೃತಿಕ ಯಜಮಾನಿಕೆ' ಎಂಬ ಸಿದ್ಧಾಂತದ ಮೂಲಕ ಎಲೈಟ್ ವರ್ಗಗಳು ನಡೆಸುವ ರಾಜಕಾರಣವನ್ನು ವಿಶ್ಲೇಷಿಸಿದ್ದಾನೆ. ಯಜಮಾನಿಕೆ ಎನ್ನುವುದು ಬಲಪ್ರಯೋಗದಿಂದ ಮಾತ್ರ ರೂಪುಗೊಳ್ಳುವುದಿಲ್ಲ, ಕೆಳವರ್ಗಗಳಿಗೆ ನೈತಿಕ ಮುಂದಾಳತ್ವ ನೀಡುವುದರ ಮೂಲಕ ಹಾಗೂ ಅವರನ್ನು ಒಪ್ಪಿಸುವ ಹಾಗೂ ನಂಬಿಸುವ ಮೂಲಕವೂ ಅದು ರೂಪುಗೊಳ್ಳುತ್ತದೆ ಎನ್ನುವುದು ಗ್ರಾಮ್‌ಶಿಯ ವಾದ. ಭಾರತದ ಸಂದರ್ಭದಲ್ಲಿ ಊಳಿಗಮಾನ್ಯ ಹಾಗೂ ಬಂಡವಾಳಶಾಹಿ ವ್ಯವಸ್ಥೆಗಳೆರಡರಲ್ಲೂ ಈ ಪ್ರಕ್ರಿಯೆಯನ್ನು ಗಮನಿಸಬಹುದಾಗಿದೆ. ಸಬಾಲ್ಟರ್ನ್ ಹಾಗೂ ಆಧುನಿಕೋತ್ತರ ಚಿಂತನೆಗಳು ರಾಷ್ಟ್ರದ ಪರಿಕಲ್ಪನೆಯನ್ನು ಒಡೆಯುವುದರ ಮೂಲಕ ರಾಷ್ಟ್ರವನ್ನು ದುರ್ಬಲ ವನ್ನಾಗಿಸುವ ಹಾಗೂ ಆ ಮೂಲಕ ಅರಾಜಕತೆಯ ಹುಟ್ಟಿಗೆ ಕಾರಣವಾಗಿವೆ ಎನ್ನುವ ಕಟುವಿಮರ್ಶೆಯನ್ನು ಎದುರಿಸಬೇಕಾಗಿ ಬಂದಿದೆಯಾದರೂ ಅವು ಹುಟ್ಟುಹಾಕಿದ ವೈಚಾರಿಕತೆ ಚರಿತ್ರೆ ಅಧ್ಯಯನಕ್ಕೆ ಹೊಸ ತಿರುವನ್ನು ನೀಡಿದೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಚರಿತ್ರೆಯು ಇಂದು ನವಚಾರಿತ್ರಿಕವಾದದ ನೆಲೆಯಲ್ಲಿ ವ್ಯಾಖ್ಯಾನಗೊಳ್ಳುತ್ತಿದೆ. ಸಂಪ್ರದಾಯ-ಆಧುನಿಕತೆ, ಗತ-ವರ್ತಮಾನ, ಕಲ್ಪನೆ-ವಾಸ್ತವ ಮುಂತಾದ ವಿಚಾರಗಳು ಪುನರ್ ವಿಮರ್ಶೆಗೆ ಒಳಗಾಗುತ್ತವೆ. ಚರಿತ್ರೆಯ ವ್ಯಾಪ್ತಿ ವಿಸ್ತಾರವಾಗಿ 'ಚರಿತ್ರೆಗಳು' ಎನ್ನುವ ಹೊಸ ಸೈದ್ಧಾಂತಿಕತೆ ರೂಪು ಪಡೆದಿದೆ. ಚರಿತ್ರೆಯನ್ನು ಒಂದು ಪ್ರಕ್ರಿಯೆಯನ್ನಾಗಿ ನೋಡುವ ಹಾಗೂ ಜನಮುಖಿ ನೆಲೆಯಲ್ಲಿ ವ್ಯಾಖ್ಯಾನಿಸುವ ಪ್ರಯತ್ನಗಳು ಸ್ಟೇಟ್‌ನ ಅಜೆಂಡಾಗಳನ್ನು ಹಾಗೂ ಚರಿತ್ರಕಾರರ ಪೂರ್ವಗ್ರಹಗಳನ್ನು ಬಯಲಿಗೆಳೆದಿವೆ. ಅಷ್ಟೇ ಅಲ್ಲದೆ ಅಧ್ಯಯನದ ಹೊಸ ಸಾಧ್ಯತೆಗಳತ್ತ ಮುಖ ಮಾಡಿ ಮಾನವ ಪರಿಸರ ಹಾಗೂ ಭೌಗೋಳಿಕ ಪರಿಸರಗಳ ನಡುವಿನ ಸಂಬಂಧಗಳು ಮರುವ್ಯಾಖ್ಯಾನಗೊಳ್ಳುವಂತೆಯೂ ಮಾಡಿವೆ.

ಚರಿತ್ರೆಯನ್ನು ಅಧ್ಯಯನ ನಡೆಸುವ ಎಲ್ಲ ವಾದ/ಪಂಥಗಳೂ ತಮ್ಮ ಸೈದ್ಧಾಂತಿಕ ಚೌಕಟ್ಟಿನೊಳಗೆ ಚರಿತ್ರೆಯ ವಿವಿಧ ವಿಚಾರಗಳನ್ನು ಆಯ್ಕೆಮಾಡಿಕೊಂಡು ವಿಶ್ಲೇಷಿಸುವ ಪ್ರಯತ್ನ ಮಾಡಿದವು. ಚರಿತ್ರೆಯು ರಾಜಕೀಯ ಚರಿತ್ರೆ, ಆರ್ಥಿಕ ಚರಿತ್ರೆ, ಸಂಸ್ಕೃತಿ ಚರಿತ್ರೆ, ಜನರ ಚರಿತ್ರೆ ಮುಂತಾದ ಪರಿಕಲ್ಪನೆಗಳಾಗಿ ನಿರ್ವಚನೆಗೆ ಒಳಗಾಗುತ್ತಾ ಹೋಯಿತು. ಮೇಲ್ವರ್ಣದ ಅಥವಾ ಮೇಲ್ವರ್ಗದ ಜನರ ಚರಿತ್ರೆ, ಬಿಳಿಯರ ಅಥವಾ ಆಧುನಿಕ ಜನವರ್ಗದ ಚರಿತ್ರೆ, ಕಾರ್ಮಿಕರ ಅಥವಾ ಶೋಷಿತ ವರ್ಗದ ಜನರ ಚರಿತ್ರೆ, ಕೆಳವರ್ಗದ ಅಥವಾ ಅಲಕ್ಷಿತ ಜನರ ಚರಿತ್ರೆ ಮುಂತಾದ ಚರಿತ್ರೆಗಳು ರಚನೆಗೊಳ್ಳುತ್ತಾ ಹೋದವು. ವಸಾಹತೋತ್ತರ ಚಿಂತನೆಗಳು ವಸಾಹತು ಸಂದರ್ಭದ ಚರಿತ್ರೆ ರಚನೆಯನ್ನು ನಿರಚಿಸುವ ಹಾಗೂ ಬದಲಾದ ಸಂದರ್ಭದ ಸಾಮಾಜಿಕ ಹಾಗೂ ಆರ್ಥಿಕ ಸನ್ನಿವೇಶಗಳನ್ನು ಸಂದೇಹದಿಂದ ನೋಡುವ ವಿಧಾನವನ್ನು ರೂಪಿಸಿಕೊಂಡವು. ಹೀಗೆ ಚರಿತ್ರೆ ಬರವಣಿಗೆಯು ಆಯಾ ಸಂದರ್ಭದ ಸಾಮಾಜಿಕ ವ್ಯವಸ್ಥೆ ಹಾಗೂ ಜ್ಞಾನ ವ್ಯವಸ್ಥೆಗಳಿಗೆ ಅನುಗುಣವಾಗಿ ರಚನೆಗೊಳ್ಳುತ್ತಾ, ವ್ಯವಸ್ಥೆಯನ್ನು ಪ್ರಶ್ನಿಸುವ ಹಾಗೂ ಕೆಲವೊಂದು ಸಂದರ್ಭಗಳಲ್ಲಿ ಸಮರ್ಥಿಸುವ ನಿಲುವುಗಳನ್ನು ಪ್ರಕಟಿಸುತ್ತಾ ಮುಂದುವರಿಯಿತು. ಸಮಾಜವನ್ನು ಪ್ರಭಾವಿಸುವಲ್ಲಿ ಮಿಕ್ಕಿದ ಎಲ್ಲ ಶಿಸ್ತುಗಳಿಗಿಂತ ಚರಿತ್ರೆ ಹೆಚ್ಚು ಶಕ್ತಿಯುತವಾಗಿರುವುದ ರಿಂದಾಗಿ ಸಹಜವಾಗಿಯೆ ಚರಿತ್ರಕಾರರ ಮೇಲೆ ಹೆಚ್ಚಿನ ಒತ್ತಡ ಹಾಗೂ ಜವಾಬ್ದಾರಿಗಳಿದ್ದು, ಅದನ್ನು ಅರ್ಥೈಸಿಕೊಂಡು ನಿಭಾಯಿಸುವುದು ವರ್ತಮಾನದ ತುರ್ತುಗಳಲ್ಲಿ ಬಹುಮುಖ್ಯವಾದದ್ದಾಗಿದೆ.

ಡಾ|| ಕೆ. ಮೋಹನ್‌ಕೃಷ್ಣ ರೈ
ಸಹ ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬





'ಆನಂದ ಕೃಷ್ಣ' ಎಂಬ ಕಾವ್ಯನಾಮದ ಶ್ರೀ ಡಿ. ಕೆ. ಚೌಟರು ತುಳುವಿನಲ್ಲಿ ಬರೆದ ಕಾದಂಬರಿ 'ಮಿತ್ತಬೈಲ್ ಯಮುನಕ್ಕೆ' ಎಂಬ ಕೃತಿಯನ್ನು ಕನ್ನಡದಲ್ಲಿ ಮಹಮದ್ ಕುಳಾಯಿ ಅವರ ಅನುವಾದದಲ್ಲಿ ಓದಿದೆ. ತಿಂಗಳ ಹಿಂದೆ ಆ ಪುಸ್ತಕ ನನ್ನ ಕೈಸೇರಿ ಇಂದಿಗೂ ಬಿಡದೆ ನನ್ನನ್ನು ಸುತ್ತಿಕೊಂಡಿದೆ. ಪುನಃ ಪುನಃ ಅಲ್ಲಲ್ಲಿ ಬಿಡಿಸಿ ಓದಬೇಕೆಂಬ ಸೆಳೆತ. ಕರಾವಳಿಯ ಭತ್ತದ ಗದ್ದೆಗಳು, ತೆಂಗು ಬಾಳೆಗಳ ಬೇಸಾಯ ಮಾಡುತ್ತಾ ತಮಗೆ ಸಹಜವಾದ ಪರಾಕ್ರಮ, ಪುಂಡಾಟಿಕೆಗಳನ್ನು ತೋರುವ, ಭೂಮಿ ಬೇಸಾಯಗಳನ್ನು ದೈವದ ಪೂಜೆ ಎಂಬ ಶ್ರದ್ಧೆಯಿಂದ ನಡೆಸುವ ಮುಗ್ಧ ಬಂಟ ಸಮುದಾಯದ ಕಥೆಯ ಹಿನ್ನಲೆಯಲ್ಲಿ ಕಾದಂಬರಿ ರಚಿತವಾಗಿದ್ದು, ಮುನ್ನೂರ ನಾಲ್ಕು ಪುಟಗಳಲ್ಲಿ ನೂರು ವರ್ಷಗಳ ಕನ್ನಡನಾಡಿನ

# ಮಿತ್ತಬೈಲ್ ಯಮುನಕ್ಕೆ

ಇತಿಹಾಸವನ್ನು ಕಟ್ಟಿಕೊಡುತ್ತದೆ. ಮಿತ್ತಬೈಲ್ ಯಮುನಕ್ಕೆ ಬರಿಯ ರಾಜರ, ನಾಯಕರ ಇತಿಹಾಸವಲ್ಲ, ಸಾಮಾನ್ಯರ ಜೀವನ ಕಥನವೂ ಆಗಿದೆ.

ಕಾದಂಬರಿ ಒಂದು ಸುಂದರ ಪಾಡ್ದನದಿಂದ ತೊಡಗುತ್ತದೆ. ಕಾವ್ಯಮಯ ಶೈಲಿಯಲ್ಲಿ ಭೂಮಿಯ ಪೂಜೆ, ಪರಮ ಶ್ರದ್ಧೆಯಿಂದ ಕೂಡಿದ ಕ್ರಮವಾಗಿ ನಡೆಯುವ ನೇಜಿ, ಕಂಬಳದ ಹಬ್ಬ , ಪುದ್ಯಾರದೆಚ್ಚಿಯ ನೇಮ, ಮಲರಾಯನ ಪೂಜೆ, ಭೂತದ ನೇಮ, ಹೊಸಕ್ಕಿಯನ್ನು ಅಟ್ಟು ದೈವಕ್ಕೆ ನಿವೇದಿಸಿ ಆಳುಕಾಳುಗಳು ನೆಂಟರೊಡನೆ ಒಡೆಯರು ಔತಣ ನಡೆಸುವುದರಿಂದ ತೊಡಗುತ್ತದೆ. ಆಳುಮಕ್ಕಳು ತೃಪ್ತಿಯಲ್ಲಿ ಉಂಡು, ಬುಟ್ಟಿ ಪಾತ್ರೆಗಳಲ್ಲಿ ಮನೆಗೂ ಒಯ್ದು ಸುಖವಾಗಿರಬೇಕೆಂಬುದು ಮಿತ್ತಬೈಲಿನ ರಿವಾಜು. ಭಾಗ್ಯವಂತರು ಬಡವರೆನ್ನದೆ ಇರುವ, ಬರುವ, ಹೊರಡುವವರೆಲ್ಲರಿಗೂ ಅವಲಕ್ಕಿ ಕಾಯಿಬೆಲ್ಲ, ಬಾಳೇಹಣ್ಣುಗಳ ಸಮಾರಾಧನೆ ನಡೆಸುವ, ಸ್ಥಿತಿವಂತರಾಗಿಯೂ ಸರಳವಾಗಿ ಬದುಕುವ ಜನರೂ ಇಲ್ಲಿದ್ದಾರೆ. ಮಾತೃಪ್ರಧಾನ ವ್ಯವಸ್ಥೆಯುಳ್ಳ ಬಂಟ ಸಮುದಾಯದ ಗುತ್ತುಗಳಲ್ಲಿ ಐದಾರು ತಲೆಮಾರುಗಳ ಆಡಳಿತವನ್ನು ಬಣ್ಣಿಸುವ ಬಗೆಯಿದು. ಇಲ್ಲಿನ ಆರ್ಥಿಕ ವ್ಯವಸ್ಥೆಯೇ ವಿಶೇಷವಾದುದು. ತಾಯಿ ಗುತ್ತಿನ ಒಡತಿಯಾದರೆ ಅವಳ ಗಂಡನೂ, ಗಂಡುಮಕ್ಕಳೂ, ಆಕೆಯ ಸೋದರರೂ ಆಡಳಿತ ನಡೆಸುವವರು. ಇಲ್ಲಿನ ಗಂಡಾಳು ಮದುವೆಯಾದರೆ ಗುತ್ತಿನ ಯಜಮಾನರು ಅವನಿಗೊಂದು ಗುಡಿಸಲನ್ನು ಕಟ್ಟಿಕೊಡಬೇಕು. ಅವನ ಉಪಯೋಗಕ್ಕೆ ಒಂದು ಹಲಸಿನ ಮರ, ಒಂದು ಮಾವು, ಒಂದು ತೆಂಗು, ಹಾಗೂ ಒಂದು ಹುಣಿಸೆ ಮರವನ್ನು ಬಿಟ್ಟುಕೊಡಬೇಕು. ಅವನ ಹೆಂಡತಿಗೂ ಅಲ್ಲಿ ಬೇಸಾಯದ ಕೆಲಸಕ್ಕೆ ಕರೆ ಇರುತ್ತದೆ. ಅಲ್ಲದೆ ಮನೆಯ ಯಜಮಾನರು ತಮ್ಮ ಸಂಸಾರದಲ್ಲಿರುವ ಅಕ್ಕ ತಂಗಿ, ಅಣ್ಣ ತಮ್ಮಂದಿರು ಮತ್ತು ಅವರನ್ನಾಶ್ರಯಿಸಿ ದುಡಿಯುವ ಇತರ ಬಂಧುಗಳಿಗೆ ವಿಷು ಹಬ್ಬದ ದಿವಸ (ಸುಗ್ಗಿಯ ದಿನ-ಸಂಕ್ರಾಂತಿ) ಹೊಸ ಬಟ್ಟೆಗಳನ್ನು (ಮುಂಡಾಸು-ಸೀರೆ-ಪಂಚೆ ಮುಂತಾಗಿ) ಉಡಿಸಿ ಹೆಂಗಸರಿಗೆ ಹತ್ತು ಪವನು ಚಿನ್ನ, ಗಂಡಸರಿಗೆ ಇನ್ನೂರು ಬೆಳ್ಳಿ ರೂಪಾಯಿಗಳನ್ನು ಉಡುಗೊರೆಯಾಗಿ ಹಂಚುತ್ತಿದ್ದರು. ಇದು ಗುತ್ತಿನ ಮೂಲ ಪುರುಷರಾದ ಮಂಜಣಾಳ್ವರು ಮಾಡಿದ್ದ ನಿಯಮ. ಇದು ತಮ್ಮ ಜೊತೆಯಲ್ಲಿ ದುಡಿದವರಿಗೆ ಹಣ ಹಂಚಿಕೆಯಾಗಿ ಅವರ ಅಭಿಮಾನ ಬೆಳೆಯಲು ಸಹಕಾರಿ. ಆಳುಕಾಳುಗಳಿಗೆ ಬದುಕು ಭಾರವಲ್ಲವೆಂಬ ನೆಮ್ಮದಿಯನ್ನು ತಂದುಕೊಡಲು ನೆರವಾಗುತ್ತಿತ್ತು. ಇಂತಹ ಸಂದರ್ಭಗಳಲ್ಲಿ ಒಡೆಯ ಮತ್ತು ಸೇವಕರ ನಡುವೆ ಸಮಾನತೆಯ ಸಮಾಧಾನವೂ ಇದೆ, ಅಭಿಮಾನವೂ ಇದೆ.

ಹಬ್ಬ ಹುಣ್ಣಿಮೆಗಳಲ್ಲಿ ಹಗಲಿರುಳ ಪೂಜೆಗಳಲ್ಲಿ ದೈವದ ಪಾತ್ರಿ ಬರುತ್ತಾನೆ. ಉಳಿದಂತೆ ಅವರಲ್ಲಿ ಆಳಾಗಿದ್ದರೂ, ದೈವ ಮೈಮೇಲೆ ಬಂದಾಗ ಪ್ರಶ್ನಿಸುವ ಅಧಿಕಾರ ಉಳ್ಳವ. ''ಸತ್ಯದ ದಾರಿತೋರಲು ನೀನಿದ್ದೀಯ. ಸೇವೆಮಾಡಲು ನಾವಿದ್ದೇವೆ'' ಎಂದು ಒಡೆಯರು ವಿನಯ ಸೂಚಿಸುವರು. ''ನಮ್ಮ ಬದುಕು ನಿನ್ನ ದಯೆಯಿಂದ ಹಾಲಿನಂತೆಯೇ ಆಗಬೇಕು. ನೀರೇಕೆ ಆಗಬೇಕು'' ಎಂದು ಬಿಗಿಮಾಡಿ ಒಡೆಯರು ನುಡಿದಾಗ ನಮ್ಮ ಜನಪದ ದೈವ ಬೆಚ್ಚಿ ಎಚ್ಚರಿಕೆ ವಹಿಸಿ ಸ್ನೇಹಮಯಿಯಾಗುತ್ತದೆ. ಒಡೆಯರನ್ನೂ ಆಳುಗಳನ್ನೂ ಕಾನೂನಿಗಿಂತ ಬಲವಾಗಿ, ಅರಸೊತ್ತಿಗೆಗಿಂತ ಚೆನ್ನಾಗಿ ಈ ದೈವಗಳೂ ಭೂತರಾಯಗಳೂ ತುಳುನಾಡಿನಲ್ಲಿ ಆಳುತ್ತಾ ಬಂದಿವೆ. ಪ್ರತಿಯೊಂದು ಗುತ್ತಿಗೂ ಗಡಿ ಹಿಡಿದ ಗುರಿಕಾರನಿರಬೇಕು. ಅವನು ಶುದ್ಧ ಶಾಕಾಹಾರಿಯಾಗಿ, ಕಳ್ಳು, ಕೋಳಿ, ಮೈಲಿಗೆಗಳಿಂದ ದೂರವಾಗಿ, ತಾಯಂದಿರಿಂದಲೂ ಕೈಮುಗಿಸಿಕೊಳ್ಳುವ ಸನ್ಯಾಸಿಯಂತೆ ಬಾಳಬೇಕು. ಅವನ ಅಪ್ಪಣೆಗೆ ಎದುರು ಇಲ್ಲ. ಮೂಲದಲ್ಲಿ ಮಂಜಣಾಳ್ವರೂ, ಕೊನೆಯಲ್ಲಿ ಸುಬ್ಬಯಣರೂ ಈ ಪಟ್ಟವನ್ನು ಏರುತ್ತಾರೆ. ಇವೆಲ್ಲ ಪದ್ಧತಿಗಳು ನಮ್ಮ ಸಮಾಜಗಳಲ್ಲಿ ಉಳಿದುಬಂದ ದ್ರಾವಿಡ ಸಂಸ್ಕೃತಿಯ ಕುರುಹುಗಳೆಂದು ತೋರುತ್ತವೆ.

ಸುಸಂಬದ್ಧವಾದ ಕಲೆಯ ಹೊಳಪಿನ ಕಾದಂಬರಿ ಇದು. ಪಂಖ ಬೀಸಿದಂತೆ ಆ ಕಾಲ ಈ ಕಾಲವೆನ್ನುತ್ತ ಸ್ವಲ್ಪವೂ ಬೇಸರ, ಉದಾಸೀನಗಳಿಗೆ ಎಡೆಗೊಡದೆ ಮಾಗಣೆ, ಪೂಕರೆ, ಕಂಬಳ, ಮುಡಿ, ಕಡ್ತಲೆ, ದೈವದ ಗುಂಡ, ಕಟ್ಟಹುಣಿ, ಭಂಡಸಾಲೆಗಳೆನ್ನುತ್ತ ಓದುಗರನ್ನು ತುಳುನಾಡಿನ ಗದ್ದೆ ಸೀಮೆಗೆ ಒಯ್ಯುತ್ತದೆ. ಅಲ್ಲಿನ ಒಡೆಯರಿಗೆ ಬೇಸಾಯವಿಲ್ಲದೆ ಬರಡಾಗಿ ನಿಂತ ಭೂಮಿ ಕಂಡರೆ ಮನ ಮರುಗಿ, ಅದನ್ನು ಕೊಂಡು ಉಳುಮೆ ಮಾಡಬೇಕೆಂದು ತೋಳು ಮಿಡಿಯುತ್ತದೆ. ತಮ್ಮ ಹೆಣ್ಣುಮಗಳಿಗೆ ಒಂದು ಗುತ್ತನ್ನು ನಿರ್ಮಿಸಬೇಕೆಂದು ಮನ ಉತ್ಸಾಹಗೊಳ್ಳುತ್ತದೆ. ಆಳುಗಳಿಗೆ ದುಡಿಮೆಗೆ

ಸುಸಂಬದ್ಧವಾದ ಕಲೆಯ ಹೊಳಪಿನ ಕಾದಂಬರಿ ಇದು. ಪಂಖ ಬೀಸಿದಂತೆ ಆ ಕಾಲ ಈ ಕಾಲವೆನ್ನುತ್ತ ಸ್ವಲ್ಪವೂ ಬೇಸರ, ಉದಾಸೀನಗಳಿಗೆ ಎಡೆಗೊಡದೆ ಮಾಗಣೆ, ಪೂಕರೆ, ಕಂಬಳ, ಮುಡಿ, ಕಡ್ತಲೆ, ದೈವದ ಗುಂಡ, ಕಟ್ಟಹುಣಿ, ಭಂಡಸಾಲೆಗಳೆನ್ನುತ್ತ ಓದುಗರನ್ನು ತುಳುನಾಡಿನ ಗದ್ದೆ ಸೀಮೆಗೆ ಒಯ್ಯುತ್ತದೆ. ಅಲ್ಲಿನ ಒಡೆಯರಿಗೆ ಬೇಸಾಯವಿಲ್ಲದೆ ಬರಡಾಗಿ ನಿಂತ ಭೂಮಿ ಕಂಡರೆ ಮನ ಮರುಗಿ, ಅದನ್ನು ಕೊಂಡು ಉಳುಮೆ ಮಾಡಬೇಕೆಂದು ತೋಳು ಮಿಡಿಯುತ್ತದೆ. ತಮ್ಮ ಹೆಣ್ಣುಮಗಳಿಗೆ ಒಂದು ಗುತ್ತನ್ನು ನಿರ್ಮಿಸಬೇಕೆಂದು ಮನ ಉತ್ಸಾಹಗೊಳ್ಳುತ್ತದೆ. ಆಳುಗಳಿಗೆ ದುಡಿಮೆಗೆ ಅವಕಾಶವಾಯಿತು, ಕೆಲಸ, ಸಂಭ್ರಮ, ಸಮೃದ್ಧಿಗಳಿಗೆ ದಾರಿಯಾಯಿತು ಎಂಬ ಹಿಗ್ಗು, ಉಮೇದು ಬೆಳೆದು ಅವರು ಉತ್ಸಾಹಿತರಾಗುವರು. ಭೂಮಿತಾಯಿಯನ್ನೂ ಭೂತರಾಯನನ್ನೂ ಪೂಜಿಸಿ ಹಾಡುತ್ತಾ, ಉಳುಮೆ ಮಾಡುತ್ತಾ ಬಾಳುವ ಮಣ್ಣಿನ ಮಕ್ಕಳ ಸೆಲೆ ಇಲ್ಲಿದೆ.

ಬಿ. ಎಸ್. ರುಕ್ಕಮ್ಮ

ಅವಕಾಶವಾಯಿತು, ಕೆಲಸ, ಸಂಭ್ರಮ, ಸಮೃದ್ಧಿಗಳಿಗೆ ದಾರಿಯಾಯಿತು ಎಂಬ ಹಿಗ್ಗು, ಉಮೇದು ಬೆಳೆದು ಅವರು ಉತ್ಸಾಹಿತರಾಗುವರು. ಭೂಮಿತಾಯಿಯನ್ನೂ ಭೂತರಾಯನನ್ನೂ ಪೂಜಿಸಿ ಹಾಡುತ್ತಾ, ಉಳುಮೆ ಮಾಡುತ್ತಾ ಬಾಳುವ ಮಣ್ಣಿನ ಮಕ್ಕಳ ಸೆಲೆ ಇಲ್ಲಿದೆ. ಯಜಮಾನರಾದ ಬಂಟರು ಶೂರರು, ಲೆಕ್ಕಾಚಾರ ಬಲ್ಲವರು. ಅವರ ಕೈಕೆಳಗೆ ಮೂಲದವರು, ಒಕ್ಕಲುಮಕ್ಕಳು, ಮುಗೇರರು, ಹಸಲೋರು, ಬೇಡರು, ಬಾಕುಡರು ಮುಂತಾಗಿ, ಹಲವು ಸಂಸ್ಕೃತಿಯ ಹಿನ್ನೆಲೆಯುಳ್ಳ, ಬೇಸಾಯಕ್ಕೆ ಹೊಂದಿಕೊಂಡ, ಇತರ ಕಸುಬುಗಳನ್ನೂ ಬಲ್ಲ, ದುಡಿಮೆಗಾರರ ಪಡೆಯೇ ಇದೆ. ಅವರು ಹಾಡುತ್ತಾ ಕುಣಿಯುತ್ತಾ ನಲಿದು ದುಡಿಯಬಲ್ಲ ಒಡೆಯರ ಕಾಪಿನಲ್ಲಿ ಬಾಳುವ ಮಕ್ಕಳು.

ಹೈದರಾಲಿ, ಟಿಪ್ಪೂ ಸುಲ್ತಾನ, ಬ್ರಿಟಿಷರು, ರಾಮರಸರು, ರಾಣಿ ಅಬ್ಬಕ್ಕದೇವಿ, ಕೆಳದಿಯ ನಾಯಕರು, ಮುಂತಾದವರ ಪೌರುಷದ ಹಿನ್ನೆಲೆಯಲ್ಲಿ ಕಲ್ಯಾಣಸ್ವಾಮಿಯ ಕಾಟುಕಾಯಿ, ಸುಬ್ರಾಯ ಹೆಗ್ಗಡೆಯ ದಂಗೆ, ನಡುವೆ ಬೀರಣ್ಣನ ಅನ್ಯಾಯದ ಕಥೆಗಳು – ಕಾದಂಬರಿಯ ಮುಖ್ಯ ಎಳೆಗಳಾಗಿ ಮೂಡಿಬಂದಿವೆ. ಪೌರಾಣಿಕ ವ್ಯಕ್ತಿಗಳ ಪೌರುಷ, ನಿಶ್ಚಲತೆ, ಋಜುಸ್ವಭಾವಗಳನ್ನು ಸುಂದರ ಆಳ್ತನವನ್ನುಳ್ಳ ಮಂಜಣಾಳ್ವನ ವೃತ್ತಾಂತ, ತನ್ನ ಶೃಂಗಾರ, ವೀರ, ಶೌರ್ಯ ಸಾಹಸಗಳೊಡನೆ ಇಲ್ಲಿ ಪ್ರಧಾನವಾಗಿದೆ. ಆತನು ಮಿತ್ತಬೈಲಿನ ಮೂಲಪುರುಷ. ಯಮುನಕ್ಕ ಆ ವಂಶದ ಧೀರೆ. ಅವಳ ಪರಾಕ್ರಮ, ಗತ್ತು, ಕರುಣೆ, ವಿವೇಕಗಳ ಕಥೆ ಇಲ್ಲಿ ಪ್ರಧಾನವಾಗಿದೆ. ಕಾದಂಬರಿಯ ಶುರುವಿನಲ್ಲಿ, ಮಿತ್ತಬೈಲಿನ ಗುತ್ತಿನ ಮನೆಗೆ ಬೆಂಕಿ ಹಾಕುವೆನೆಂದು ಹಲುಬಿ ಅಧಿಕಪ್ರಸಂಗ ಮಾಡಿದ ತ್ಯಾಂಪಣ್ಣ ಕೊನೆಯಲ್ಲಿ ತನ್ನ ಮನೆಯೇ ಬೂದಿಯಾಗಿ ಅಳಿಯುತ್ತಾನೆ. ಯಮುನಕ್ಕೆಯನ್ನು ಕೊಲ್ಲಲು ಕತ್ತಿ ಹಿಡಿದು ನುಗ್ಗಿದ ತ್ಯಾಂಪಣ್ಣನ ತಲೆಯನ್ನು, ಕೊಂಕುಳಲ್ಲಿ ಅಮುಕಿ ಹಿಡಿಯುತ್ತಾಳೆ ಚಾಮುಂಡಿ ಯಮುನೆ. ಅವಳ ಬಲಗೈ ಬಂಟ ದೆಯ್ಯುವಿನ ಕೈಯಲ್ಲಿ ಅವನ ಸಮಾಪ್ತಿಯಾಗುತ್ತದೆ.

ಯಮುನಕ್ಕೆ ಆರ್ದ್ರ ಹೃದಯದ ನಾರಿಯಾದರೂ, ಕ್ರೂರಿಯಾಗಿ ಅಟ್ಟಹಾಸ ಮಾಡಬಲ್ಲಳು. ''ನಿಮ್ಮ ಗೇಣಿಒಪ್ಪನಲ್ಲ ನಾನು'' ಎಂದು ಹೇಳಿದ ತ್ಯಾಂಪಣ್ಣನ ಜಮೀನನ್ನೇ ಕೊಂಡು, ಅವನ ಗೇಣಿ ಪತ್ರಗಳನ್ನು ನವೀಕರಿಸಿ, ಅವನು ತನ್ನ ಆಳೆಂದು ಪರಾಕ್ರಮ,




ಉಪಾಯಗಳಿಂದ ತಿಳಿಸಿದರೂ, ಅವನ ತಾಯಿ ಆಚಕ್ಕಳಿಗೆ ಅವಳು ಮರುಗುತ್ತಾಳೆ. ಜಟಕ, ಪಲ್ಲಕ್ಕಿಗಳಲ್ಲಿ ಸಂಚಾರ ಮಾಡುತ್ತಿದ್ದವಳು ಮೋಟಾರು ಬಸ್‌ಗಳನ್ನು ಕಂಡು ಅದರಲ್ಲಿ ಓಡಾಡಬೇಕೆನ್ನುತ್ತಾಳೆ. ಆದರೆ ಅದನ್ನು ಸುತ್ತಿದ ಕಾನೂನನ್ನು ಉಪೇಕ್ಷಿಸಿ, ದಾರಿಗಡ್ಡಲಾಗಿ ಮರಗಳನ್ನು ಕೆಡವಿಸಿ ಡ್ರೈವರನನ್ನು ದಂಗುಬಡಿಸುತ್ತಾಳೆ. ತಮ್ಮ ಸುಬ್ಬಯಣನ ಪ್ರಭಾವದಿಂದ ಗಾಂಧೀವಾದವನ್ನೊಪ್ಪಿ ತನ್ನ ಗಂಡುಮಕ್ಕಳು, ಹೆಣ್ಣುಮಕ್ಕಳು ಶಾಲೆ ಕಲಿಯ ಬೇಕೆನ್ನುವಳು. ತಲೆಹರಟೆ ಮಾಡಿ ತನಗೆ ಲಾಯರ್ ನೋಟೀಸು ಕೊಟ್ಟ ತ್ಯಾಂಪಣ್ಣನ ಮನೆ ಮಠಗಳನ್ನು ಒಂದೇ ಇರುಳಿನಲ್ಲಿ ಇಲ್ಲವಾಗಿಸಿ, ಸೆರೆಮನೆ ಹೊಕ್ಕು, ಜಾಮೀನು ಸಿಗದೆ ಜೈಲಿನಲ್ಲಿ ಉಳಿದು, ಗರ್ವವಿಳಿದರೂ, ಸಾಕ್ಷಿಯಿಲ್ಲದೆ ಖುಲಾಸೆಯಾಗಿ ಮನೆಗೆ ಬರುತ್ತಾಳೆ. ಕೇಸು ಗೆದ್ದರೂ ಸೋತವಳಂತೆ ಪಶ್ಚಾತ್ತಾಪ ಪಡುತ್ತಾ ಹಣ್ಣಾಗಿ ಬಾಗಿದ ಯಮುನಕ್ಕ, ಶತ್ರುವಿನ ಕುಡಿಯಾಗಿ ಉಳಿದ ಹೆಣ್ಣುಮಗಳನ್ನು ಕರೆಸಿ ತನ್ನ ಸೊಸೆಯಾಗಿ ಕರೆದುಕೊಳ್ಳುವ ಏರ್ಪಾಡು ಹೇಳುತ್ತಾಳೆ. ತಮ್ಮನ ಜೊತೆಯಲ್ಲಿ ಹಣ್ಣು ಬೆಳದಿಂಗಳ ಹೊತ್ತಿನಲ್ಲಿ ಬಾರಬೈಲಿನ ಗದ್ದೆ, ತೋಟ ಗಳನ್ನು ಸುತ್ತಾಡಿ ಮರುಗುತ್ತಾ ''ತ್ಯಾಂಪಣ್ಣ ಎಷ್ಟು ಚೆನ್ನಾಗಿ ಬೇಸಾಯ ಮಾಡಿದ್ದನು'' ಎಂದು ನಿಡುಸುಯ್ಯುತ್ತಾಳೆ. ಅವನಿಲ್ಲದೆ ಪಡಪೋಷಿಯಾಗಿದ್ದ ಗದ್ದೆ ತೋಟಗಳು ಅವಳ ಕರುಳನ್ನು ಹಿಂಡುತ್ತವೆ. ಬಾರಬೈಲಿಗೂ, ಮಿತ್ತಬೈಲಿಗೂ ಮಾರಿಯಾಗಿ ಹೊಕ್ಕೆನೇ ಎಂದು ಕೊರಗಿ ಕಣ್ಣೀರಿಟ್ಟು ಮಲಗಿದವಳು ಮತ್ತೆ ಏಳುವುದಿಲ್ಲ.

ಶ್ರಮಿಕರ ಪಾಡ್ದನದಂತೆ, ಅಭಿವೃದ್ಧಿ ಸಹಜವಾಗಿ ಬರಬೇಕು. ಸಮುದ್ರದ ತೆರೆಯಂತೆ ಉರುಳಿ, ತಾಯಿಯನ್ನು ಹಿಂಬಾಲಿಸಿದ ಮರಿಗಳಂತೆ ಬಂದು ಕನ್ಯೆಯ ತಲೆಗೂದಲಿನಂತೆ ಬೆಳೆದು, ಹಕ್ಕಿಯ ಹಾಡಿನಂತೆ, ಸುಮಧುರವಾಗಿ ಹಾಲುಕ್ಕಿದಂತೆ ಉಕ್ಕಬೇಕು. ಮಿತ್ತಬೈಲು ಹಾಗೆ ನೂರು ವರ್ಷಗಳ ಕಾಲ ಸಾಹಸ, ಸಮೃದ್ಧಿಗಳಲ್ಲಿ ಬಾಳಿ, ಯಮಗಂಡಕಾಲವನ್ನು ಕಂಡು ಈಗ ವಿದ್ಯೆ, ಅಹಿಂಸೆ, ಕಾನೂನಿನ ಹೊಸ ಅಧ್ಯಾಯಕ್ಕೆ ತಿರುಗಿರಬಹುದು. ಕರಾವಳಿಯ ಜನರ ಮುಡಿಕಟ್ಟುವ, ಕಣಜ ನಿರ್ಮಿಸುವ ಜಾಣ್ಮೆ, ಮರಗೆಲಸ, ಮನೆ, ಗುಡಿಗಳನ್ನು ನಿರ್ಮಿಸುವ ಜಾಣ್ಮೆ ಇಂದಿನ ವಾಸ್ತುಶಿಲ್ಪಕ್ಕೆ ಸವಾಲಿನಂತಿವೆ. ಕಾದಂಬರಿಯಲ್ಲಿ ಅಲ್ಲಲ್ಲಿ ಕಾಣುವ ರೇಖಾಚಿತ್ರಗಳು ಅಂದಿನ ಜನರ ಸರಳ ಸುಂದರ ಬದುಕಿನ ಚಿತ್ತಾರಗಳೇ ಸರಿ. ಗೋಪಾಡ್ಕರ್ ಅವರ ರೇಖಾಚಿತ್ರಗಳು ಭಾವಪೂರ್ಣವಾಗಿ ಅಂದಿನ ಜನರ ಬಗೆಯನ್ನು ಕಣ್ಣಿಗೆ ಕಟ್ಟುತ್ತವೆ; ಪುನಃ ಪುನಃ ನೋಡಿ ಭಾವಿಸುವಂತಿವೆ. ಚನ್ನೆ ಮಣೆ ಆಡುವ ಹೆಂಗೆಳೆಯರು, ಭತ್ತ ಕುಟ್ಟುವ ಹೆಂಗಸರು, ಉಳುಮೆಯಲ್ಲಿ ತೊಡಗಿದ ರೈತರು, ಕಟ್ಟಿದ ಹುಲ್ಲಿನ ಮುಡಿ, ಕಣಜದ ಸಿರಿರೂಪು, ಬರಿಯ ರೇಖೆಗಳಲ್ಲಿ ಮೂಡಿರುವ ಭೂತದ ವೇಷ, ಉರುಳಿಯ ಪಾತ್ರೆ ಮತ್ತು ಅರೆಯುವ ಕಲ್ಲು, ನೀರು ಹಾಯಿಸುವ ಏತ, ಚಂಡೆ, ದುಡಿಗಳ ಚಿತ್ರಗಳು, ಶಬ್ದಗಳನ್ನು ಮೀರಿ ಏನೇನೋ ಸಂಗತಿಗಳನ್ನು ತಿಳಿಸುತ್ತವೆ. ಅರಿಯದವರ ಕಲ್ಪನೆಗೆ ಇವು ಸಹಾಯಕವಾಗಿವೆ.

ಆದರೂ ಮಂಜಣಾಳ್ವರ ಸಾಹಸ ಶೌರ್ಯಗಳು, ಸುಬ್ಬಯಣನವರ ಗಾಂಧೀವಾದ, ಯಮುನಕ್ಕೆಯ ಗತ್ತು, ಪೌರುಷ, ಚುರುಕುತನ, ಬುದ್ಧಿವಂತಿಕೆಗಳು ಮನಸ್ಸಿನಲ್ಲಿ ಲಾಳಿ ಹಾಕುತ್ತಾ ಹೊಸಕಾಲದ ಕನಸನ್ನು ನೇಯುತ್ತವೆ.

ಆನಂದ ಕೃಷ್ಣರ ಮನಸಿನಲ್ಲಿ ಇನ್ನೊಂದು ಕೃತಿ ಇದ್ದೀತೆ ?

ಬಿ. ಎಸ್. ರುಕ್ಕಮ್ಮ
ನಿವೃತ್ತ ಪ್ರಾಧ್ಯಾಪಕರು, ೨೭೩೧/೧, ೩ನೇ ಮುಖ್ಯರಸ್ತೆ
ವಿ. ವಿ. ಮೊಹಲ್ಲ, ಮೈಸೂರು - ೫೭೦ ೦೦೨

# ಬೀಗದಿರು ಸಾವೇ

ಬೀಗದಿರು ಸಾವೇ
ಭೀಮ ಭೀಕರನೆಂದು ಊದದಿರು
ಅವರಿವರ ತುತ್ತೂರಿ ನೀನೇ
ನಿನ್ನ ಹೊಡೆತಕೆ ಬುಡ ಕಡಿದು ಬಿದ್ದವರು ಸತ್ತಿಲ್ಲ
ಇನ್ನೂ, ಪೆದ್ದ ಸಾವೇ. ಕೊಲಲಾರೆ ನನ್ನನ್ನೂ

ಆರಾಮ, ನಿದ್ರೆಗಳೂ ನಿನ್ನ ಕನ್ನಡಿ ರೂಪ
ಬಂದಾಗ ಸುಖ ಸೋರಿ ಆರಿಹೋಗುವ ಘಳಿಗೆ
ನಮ್ಮೊಳಗೆ ಉತ್ತಮರು ಸಾಗುವರು ನಿನ್ನೆಡೆಗೆ
ಸೆರೆ ಹರಿದು... ಹಾತೊರೆದು... ಆಚೆಗಿನ ಆಸರೆಗೆ

ವಿಧಿಯ ತೊತ್ತಿನ ಮಗನೆ, ನಸೀಬು ಬದನಸೀಬರ ದಾಸ
ವಿಷ, ರೋಗ, ಯುದ್ಧಗಳ ಸನ್ನಿ-ವಾಸ
ನಿನ್ನ ತಂತ್ರಕ್ಕಿಂತ ಅಮಲು ಹಿಡಿಸುವ ಭಂಗಿ-ಮಂತ್ರವೇ ಲೇಸು
ಲಾಲಿಗರೆವವು ನಿದ್ರೆ
ಸೊಕ್ಕದಿರು ಸಾವೇ
ಸಾವಿರದ ತಾವಿನಲಿ ಕಣ್‌ತೆರೆವೆ ಈ ಬಾರಿ
ಕೋರಿಕೋ ಸಾವೇ – ನಿನಗೊಂದು ಗೋರಿ

ಮೂಲ : **ಜಾನ್ ಡನ್** - (ಡೆತ್ ಬಿ ನಾಟ್ ಪ್ರೌಡ್)
ಅನು : **ವಿಜಯ ವಾಮನ**
ಪ್ರಾಚಾರ್ಯರು, ಶ್ರೀ ಆದಿಚುಂಚನಗಿರಿ ಪಿ. ಯು. ಕಾಲೇಜ್
ಶರಾವತಿನಗರ, ಶಿವಮೊಗ್ಗ - ೫೭೭ ೨೦೧

# ಜನಪದ ಕ್ರೀಡೆಗಳು ಮತ್ತು ಪ್ರವಾಸೋದ್ಯಮ

ಡಾ॥ ಗುರುಲಿಂಗಪ್ಪ ಧಬಾಲೆ

*ಮಂದಿ ಮಕ್ಕಳೊಂದಿಗೆ। ಚಂದಾಗೊಂದಿರಬೇಕ*
*ನಂದೀಯ ಶಿವನ ದಯದಿಂದ। ಹೋಗಾಗ*
*ಮಂದೀ ಬಾಯಾಗ ಇರಬೇಕ ॥*

ಈ ನೆಲದ ಮೇಲೆ ಯಾರೊಬ್ಬರೂ ಶಾಶ್ವತವಲ್ಲ. ಪ್ರತಿಯೊಬ್ಬರೂ ಒಂದು ದಿವಸ ಇದರ ಸಂಬಂಧವನ್ನು ಖಂಡಿತವಾಗಿಯೂ ಕಳೆದುಕೊಳ್ಳಲೇಬೇಕು. ಅಂದ ಮೇಲೆ ಏಕೆ ಕೋಪ-ತಾಪ, ದ್ವೇಷ-ಮತ್ಸರ, ಬದುಕಿದ್ದಷ್ಟು ದಿವಸ ಎಲ್ಲರೂ ಒಂದಾಗಿ ಚಂದಾಗಿ ಬಾಳ್ವೆ ಮಾಡಬೇಕೆಂಬುದೇ ಜನಪದರ ಪ್ರಮುಖ ವಿಚಾರ.

ನಾವು ತಿಳಿದಂತೆ ಬದುಕು ಅಷ್ಟೊಂದು ಸರಳವಾಗಿಲ್ಲ. ಸುಖದಿಂದ ಕೂಡಿಲ್ಲ. ಅಲ್ಲಮಪ್ರಭುಗಳು ಹೇಳಿದಂತೆ ಅಲ್ಲಿ ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ತುಂಬಿದೆ. ಬದುಕಿನ ತುಂಬೆಲ್ಲ ಭೀಕರ ಬಡತನ. ಹೆಜ್ಜೆಹೆಜ್ಜೆಗೂ ನೂರಾರು ಕಷ್ಟ-ನಷ್ಟಗಳು. ಸಾವಿರಾರು ಸಾವು-ನೋವುಗಳು. ಆಶ್ಚರ್ಯವೆಂದರೆ, ಇಂಥ ಸಂಕೀರ್ಣವೂ ನಾಜೂಕಿನದೂ ಆದ ಬದುಕಿನಲ್ಲೂ ಜನಪದರು ಚೆಲುವನ್ನು ದರ್ಶಿಸುತ್ತಾರೆ. ಸುಖ-ಸಂತೋಷಗಳನ್ನು ಅನುಭವಿಸುತ್ತಾರೆ.

*ಹುಸಿನಗುತ ಬಂದೇವ ನಸುನಗುತ ಬಾಳೋಣ*
*ತುಸುನಗುತ ತೆರಳೋಣ*
*ಬಡನೂರ ವರುಷಾನ ಹರುಷಾದಿ ಕಳೆಯೋಣ*
*ಯಾಕಾರೆ ಕೆರಳೋಣ*

ಎಂಬ ಬೇಂದ್ರೆಯವರ ನಿಲುವು ಜನಪದರದು. ಅಂತೆಯೇ ಅವರು ತಮ್ಮ ಸಂಸಾರ ದೋಣಿಯನ್ನು ನಗುನಗುತ್ತ, ಹಾಡುಹೇಳುತ್ತ, ಆಟ ಆಡುತ್ತ ಸಾಗಿಸುತ್ತಾರೆ. ಬದುಕಿನ ಪ್ರತಿ ಘಟ್ಟಗಳಲ್ಲೂ ಜನಪದರು ಹಾಡುತ್ತಾರೆ, ಆಡುತ್ತಾರೆ. ಹುಟ್ಟಿದರೂ ಆಟ, ಹಾಡು. ಸತ್ತರೂ ಆಟ, ಹಾಡು. ಜೀವನದಲ್ಲಿ ಎದುರಾಗುವ ದುಃಖ-ದುಮ್ಮಾನ, ಕಷ್ಟ-ಕಾರ್ಪಣ್ಯಗಳನ್ನೆಲ್ಲಾ ಅವರು ಈ ಹಾಡು-ಆಟಗಳ ಮೂಲಕವೇ ಮರೆಯಲು ಪ್ರಯತ್ನಿಸುತ್ತಾರೆ. ಹೀಗಾಗಿ ಹಾಡುಗಳು ಮತ್ತು ಆಟಗಳು ಜನಪದರ ಜೀವನದಲ್ಲಿ ತುಂಬ ಮಹತ್ವದ ಪಾತ್ರವನ್ನು ವಹಿಸುತ್ತವೆ.

**ಜನಪದ ಕ್ರೀಡೆಗಳು**

ಕ್ರೀಡೆಗೆ ಇರುವ ಇನ್ನೊಂದು ಹೆಸರು ಆಟ. ಆಟ ಎಂದರೆ ಆಡುವುದು, ವಿಹಾರ, ವಿನೋದ ಎಂದರ್ಥ. ಇಲ್ಲಿ ಅತ್ಯಂತ ಪ್ರಧಾನವೂ, ಪ್ರಸ್ತುತವೂ ಆದ ಅರ್ಥವೆಂದರೆ, 'ಆಡುವುದು' ಎಂಬುದು. ವಿಹಾರ, ವಿನೋದಗಳೆಲ್ಲ ಆಡುವ ಕ್ರಿಯೆಯ ವ್ಯಾಪ್ತಿಯೊಳಗೇ ಸೇರಿಕೊಳ್ಳುತ್ತವೆ. ಈ ಆಡುವ ಕ್ರಿಯೆ ವ್ಯಕ್ತಿಗೆ ಅವನ ಹುಟ್ಟಿನೊಂದಿಗೆ ಅಂಟಿಕೊಂಡು ಬಂದ ವಿಶೇಷವಾಗಿದೆ. ಅಂತೆಯೇ ಆಟ ಅವನ ಹುಟ್ಟಿನಿಂದಲೇ ಸಹಜವಾಗಿ ಪ್ರಾರಂಭವಾಗುವುದನ್ನು ಕಾಣುತ್ತೇವೆ. ತೊಟ್ಟಿಲಲ್ಲಿ ಕಾಲ್‌ಕೈ ಬಡಿದು ಕೇಕೆ ಹಾಕುವುದರ ಮೂಲಕ ಆಟಕ್ಕೆ ಅಡಿಗಲ್ಲನ್ನಿಟ್ಟ ಮಗು ಆಟಗಳನ್ನಾಡುತ್ತಲೇ ಬೆಳೆಯುತ್ತದೆ. ಬೆಳೆದು ದೊಡ್ಡವನಾದ ಮೇಲೂ ಅವನಾಡುವ ಕ್ರಿಯೆ ನಿಲ್ಲುವುದಿಲ್ಲ. ಅವನ ದೇಹ, ಬುದ್ಧಿ, ಊಹೆ, ಕಲ್ಪನೆಗಳು ಬೆಳೆದಂತೆಲ್ಲ ಅವನ ಜೀವನದಲ್ಲಿ ಹೊಸಹೊಸ ಆಟಗಳು ಪ್ರವೇಶ ಪಡೆಯುತ್ತ ಹೋಗುತ್ತವೆ. ಅವನ ಕ್ರೀಡಾಲೋಕ ವಿಸ್ತಾರವಾಗಿ ಬೆಳೆಯುತ್ತದೆ.

ವ್ಯಕ್ತಿಯ ಕ್ರೀಡಾಲೋಕ ವಿಸ್ತೃತವಾಗಿ ವಿಕಾಸ ಹೊಂದುವುದಕ್ಕೆ ಅವನು ಬಯಸುವ ಮನೋಲ್ಲಾಸ, ದೈಹಿಕ ವ್ಯಾಯಾಮ, ಹಾಗೂ ಅವನ ವಿನೋದ, ವಿಹಾರ ಪ್ರವೃತ್ತಿ, ಸ್ಪರ್ಧಾಮನೋಭಾವ ಇವೇ ಮೊದಲಾದುವುಗಳು ಮೂಲಕಾರಣಗಳಾಗಿರುತ್ತವೆ. ಅವನ ಕೌಟುಂಬಿಕ, ಧಾರ್ಮಿಕ, ಸಾಮಾಜಿಕ, ರಾಜಕೀಯ, ಪ್ರಾಕೃತಿಕ, ಪರಿಸರವೂ ಈ ಕಾರಣದಲ್ಲಿ ಪಾಲು ಪಡೆಯುವುದರ ಜತೆಗೆ, ಅದಕ್ಕೆ ಪ್ರೇರಕ ಶಕ್ತಿಯಾಗಿ, ಸ್ಫೂರ್ತಿಯ ಸೆಲೆಯಾಗಿ ನಿಂತುಕೊಳ್ಳುತ್ತದೆ. ಆಟಗಳಿಗೆ ಬೇಕಾಗುವ ವಸ್ತು-ಸಾಮಗ್ರಿ-ಸಲಕರಣೆಗಳನ್ನು ಕೂಡ ಈ ಪರಿಸರವೇ ಒದಗಿಸುತ್ತದೆ. ಈ ಮಾತು ಪಟ್ಟಣ ಕ್ರೀಡೆಗಳಿಗಿಂತ ಜನಪದ ಕ್ರೀಡೆಗಳಿಗೆ ಹೆಚ್ಚು ಅನ್ವಯಿಸುತ್ತದೆ.

ಮೇಲೆ ಸೂಚ್ಯವಾಗಿ ತಿಳಿಸಿದಂತೆ ಕ್ರೀಡೆಗಳಲ್ಲಿ ಮುಖ್ಯವಾಗಿ ಎರಡು ಪ್ರಕಾರಗಳು. ಒಂದು ಪಟ್ಟಣ ಕ್ರೀಡೆಗಳು, ಇನ್ನೊಂದು ಗ್ರಾಮೀಣ ಕ್ರೀಡೆಗಳು. ಈ

ಜನಪದ ಸಂಸ್ಕೃತಿ ನಮ್ಮ ಸಮಗ್ರ ಐತಿಹಾಸಿಕ-ಸಾಂಸ್ಕೃತಿಕ ಪರಂಪರೆಯ ಒಂದು ಅವಿಭಾಜ್ಯವಾದ ಅಂಗವಾಗಿದೆ. ಜನಪದ ಸಂಗೀತ, ನೃತ್ಯ, ಸಾಹಿತ್ಯ, ವೈದ್ಯ, ಕರಕುಶಲಕಲೆ ಮೊದಲಾದವುಗಳು ಇಲ್ಲಿ ಶತಮಾನಗಳಿಂದಲೂ ಶ್ರೀಮಂತವಾಗಿವೆ. ಅದರಲ್ಲೂ ಜನಪದ ಕ್ರೀಡೆಗಳು ಪ್ರಾಚೀನ ಕಾಲದಿಂದಲೂ ನಮ್ಮಲ್ಲಿ ಸಮೃದ್ಧವಾಗಿವೆ. ಉತ್ತಮ ಮನೋರಂಜನೆ ಹಾಗೂ ಅಂಗಸಾಧನೆಯ ಕಲೆಗಳಾಗಿರುವ ಈ ಆಟಗಳು ಇಂದು ಕಣ್ಮರೆಯಾಗುತ್ತಿವೆ. ಅವುಗಳನ್ನು ಉಳಿಸುವ ನಿಟ್ಟಿನಲ್ಲಿ ಪ್ರವಾಸೋದ್ಯಮ ಗಮನಹರಿಸಬೇಕಾಗಿದೆ. ಪ್ರವಾಸೋದ್ಯಮ ಜನಪದ ಆಟಗಳಿಗೆ ಯೋಗ್ಯ ಪ್ರೋತ್ಸಾಹ ನೀಡಿ, ಬೇಕಾದರೆ ಅವುಗಳನ್ನು ಶಾಸ್ತ್ರೀಯವಾಗಿ ಪರಿಷ್ಕರಿಸಿ ಪ್ರದರ್ಶನಕ್ಕೆ ಅಳವಡಿಸಿದರೆ, ಇಲ್ಲಿ ಇನ್ನೊಂದು ಲಾಭದಾಯಕ ಉದ್ದಿಮೆ ಬೆಳೆಸಲು ಸಾಧ್ಯವಿದೆ.



ಗೋಲಿ ಆಟ



ಗ್ರಾಮೀಣ ಕ್ರೀಡೆಗಳನ್ನೇ ಜನಪದ ಕ್ರೀಡೆಗಳೆಂದು ಕರೆಯಲಾಗುತ್ತದೆ. ಮರಕೋತಿ ಆಟ, ಚಿಣ್ಣಿದಾಂಡು, ಹಳೀರ್ ಗುಡುಗುಡು, ಚೆಂಡಾಟ, ಬುಗುರಿ, ಲಗೋರಿ, ಕೋಲಾಟ, ಹುಲಿ-ಕುರಿ, ಬುಲಾಯಿ, ಕುಸ್ತಿ, ಕುಂಟಬಿಲ್ಲೆ, ಗಜ್ಜುಗದಾಟ, ಚೌಕಾಬಾರ, ಮದುವೆ ಆಟ, ಪಗಡೆ, ಹರಳಾಟ, ಬೆಳೆಚೂರು, ದೋಸೆ ಆಟ, ಟೋಪಿ ಆಟ, ಉಪ್ಪಿನಾಟ ಇಂಥವು ಜನಪದ ಆಟಗಳು. ಯಕ್ಷಗಾನ, ಬಯಲಾಟ, ಸಣ್ಣಾಟ, ತೊಗಲುಗೊಂಬೆ ಆಟಗಳೂ ಕೂಡ ಜನಪದ ಆಟಗಳ ಪಟ್ಟಿಯೊಳಗೇ ಸೇರಿಕೊಳ್ಳುತ್ತವೆ.

**ಇತಿಹಾಸ**

ಜನಪದ ಆಟಗಳು ವಿಶ್ವದಾದ್ಯಂತ ತುಂಬ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿವೆ. ಆದರೆ ಭಾರತ ದೇಶದಲ್ಲಿರುವಷ್ಟು ಜನಪದ ಆಟಗಳು ಪ್ರಪಂಚದ ಬೇರೆ ಯಾವ ದೇಶದಲ್ಲೂ ಕಂಡುಬರುವುದಿಲ್ಲ. ಅಂತೆಯೇ ಭಾರತವನ್ನು ಜನಪದ ಕ್ರೀಡೆಗಳ ತವರು ಎಂದು ಹೇಳಲಾಗುತ್ತದೆ. ಭಾರತದಲ್ಲಿ ಜನಪದ ಕ್ರೀಡೆಗಳು ಶಿಲಾಯುಗದಷ್ಟು ಪ್ರಾಚೀನವಾಗಿವೆ ಎಂಬುದಕ್ಕೆ ಅನೇಕ ಆಧಾರಗಳು ದೊರೆಯುತ್ತವೆ. 'ಆ ಕಾಲದಲ್ಲಿ ಮಾನವರ ಎರಡು ಗುಂಪುಗಳ ನಡುವೆ ಪರಸ್ಪರ ಘರ್ಷಣೆ ನಡೆದಾಗ ಯುಕ್ತಿಯ ಆಟಗಳು ಹುಟ್ಟಿಕೊಂಡವು' ಎಂಬ ಅಭಿಪ್ರಾಯವಿದೆ.

ಸಿಂಧೂ ನಾಗರಿಕತೆಯ ಕಾಲದಲ್ಲಿ ಜನಪದ ಆಟಗಳ ಪ್ರಮಾಣ ಅಧಿಕಗೊಂಡಿರುವುದು ಕಂಡುಬರುತ್ತದೆ. 'ಲೋಥಾಲ ಹಾಗೂ ಮೊಹೆಂಜೋದಾರೋ ಪಟ್ಟಣಗಳ ಅವಶೇಷಗಳಲ್ಲಿ ಸುಟ್ಟಮಣ್ಣಿನ ಘನಾಕೃತಿಯ ದಾಳಗಳು, ಕೆಲವು ಪ್ರಾಣಿ ತಲೆಗಳುಳ್ಳ ಮತ್ತು ಗೋಪುರಾಕೃತಿಯ ಸುಟ್ಟಮಣ್ಣು, ಶಂಖ, ದಂತ, ಮೂಳೆ ಹಾಗೂ ಕಲ್ಲುಗಳಿಂದ ಮಾಡಿದ ಆಟದ ಕಾಯಿಗಳು, ಮಕ್ಕಳ ಆಟಗಳ ಗೊಂಬೆಗಳು, ಗಾಡಿಗಳು, ನಾಯಿಯ ಚಿತ್ರ ಇರುವ ಬೇರೆ ಬೇರೆ ಆಟಿಕೆಯ ಸಾಮಾನುಗಳು ದೊರೆತಿವೆ.' ಹೀಗಾಗಿ ಆ ಕಾಲದಲ್ಲಿ ಮಕ್ಕಳು, ಹಿರಿಯರು ಎಲ್ಲರೂ ಆಟಗಳನ್ನಾಡುತ್ತಿದ್ದರು. ಪಗಡೆ, ಚದುರಂಗ, ಮೊದಲಾದ ಆಟಗಳು ಅವರ ಜೀವನದಲ್ಲಿ ಹಾಸುಹೊಕ್ಕಾಗಿದ್ದವು ಎಂಬುದು ಗಮನಕ್ಕೆ ಬರುತ್ತದೆ. ಕೋಳಿ ಅಂಕವೂ ಆ ಸಂದರ್ಭದಲ್ಲಿ ಪ್ರಚಲಿತದಲ್ಲಿತ್ತು ಎಂಬುದಾಗಿ ತಿಳಿದುಬರುತ್ತದೆ.

ವೈದಿಕಯುಗದ ಜನರಿಗೆ ಜೂಜು, ಬೇಟೆ, ಸಮರನೃತ್ಯ, ಕುದುರೆಸವಾರಿ, ಓಟ, ಈಜು, ಪಗಡೆ ಆಟಗಳು ಬಹುಪ್ರಿಯವಾಗಿದ್ದವು. ರಥಗಳ ಓಟದ ಪಂದ್ಯ ಅಂದು ಹೆಚ್ಚು ಜನಪ್ರಿಯವಾಗಿತ್ತು.

ರಾಮಾಯಣ, ಮಹಾಭಾರತ ಕಾವ್ಯಗಳಲ್ಲಿ ಜಲಕ್ರೀಡೆ, ವೈಯಾಳಿ, ಮಲ್ಲಯುದ್ಧ, ಮುಷ್ಟಿಯುದ್ಧ, ಧನುರ್ವಿದ್ಯೆ, ಬೇಟೆ, ಪಗಡೆ, ಹೀಗೆ ಹಲವು ಕ್ರೀಡೆಗಳ ಉಲ್ಲೇಖಗಳು ದೊರೆಯುತ್ತವೆ. ಮೌರ್ಯರ ಕಾಲದಲ್ಲಿ ರಥಗಳಿಗೆ ಎತ್ತು ಮತ್ತು ಕುದುರೆಗಳನ್ನು ಕಟ್ಟಿ ಓಡಿಸುವ ರಥಸ್ಪರ್ಧೆ ನಡೆಯುತ್ತಿತ್ತು. ಪಗಡೆ, ಚೌಕಾಬಾರ ಮುಂತಾದ ಆಟಗಳೂ ಅಂದು ಆಡಲ್ಪಡುತ್ತಿದ್ದವು.

ಪ್ರಾಚೀನ ಕಾಲದಲ್ಲಿ ಜನಪದ ಆಟಗಳಿಗೆ ವಿಶ್ವವಿದ್ಯಾಲಯ ಮಟ್ಟದಲ್ಲೂ ಪ್ರಾಧಾನ್ಯತೆ ಇತ್ತು. 'ನಾಲಂದಾ ವಿಶ್ವವಿದ್ಯಾಲಯದಲ್ಲಿ ಬೆಳಗ್ಗೆ ಈಜು, ಬಳಿಕ ನೆಲದಲ್ಲಿ ಗುರುತಿಸಿದ ನಕಾಶೆಯ ಮೇಲೆ ಜಿಗಿಯುವುದು, ಚೆಂಡು ಹಿಡಿಯುವುದು ಇತ್ಯಾದಿ ಆಟಗಳನ್ನು ಆಡಿಸಲಾಗುತ್ತಿತ್ತು.'

ಪ್ರಾಚೀನ ಕಾಲದ ತಮಿಳು ಕಾವ್ಯ 'ಶಿಲಪ್ಪದಿಕಾರಂ'ನಲ್ಲಿ ಗೂಳಿಕಾಳಗದ ವರ್ಣನೆ ಇದೆ. ಸಂಸ್ಕೃತ 'ಮೃಚ್ಛಕಟಿಕ'ದ ಮಣ್ಣಿನ ಗಾಡಿ, 'ಶಾಕುಂತಲ ನಾಟಕ'ದ ಮಣ್ಣಿನ ನವಿಲು, ಗೊಂಬೆ ಇತ್ಯಾದಿಗಳನ್ನು ಇಲ್ಲಿ ನೆನೆಯಬಹುದು.

ಪ್ರಾಚೀನ ಕನ್ನಡ ಕಾವ್ಯಗಳಲ್ಲೂ ಅನೇಕ ಜನಪದ ಆಟಗಳು ಉಲ್ಲೇಖಗೊಂಡಿವೆ. ಕನ್ನಡದ ನಲವತ್ತು-ಐವತ್ತು ಕೃತಿಗಳಲ್ಲಿ ಅರವತ್ತು ಜನಪದ ಆಟಗಳ ವಿವರಣೆ ದೊರೆಯುತ್ತದೆ. ಶಿವಕೋಟ್ಯಾಚಾರ್ಯ, ಪಂಪ, ನೇಮಿಚಂದ್ರ, ರತ್ನಾಕರ ವರ್ಣಿ, ಕುಮಾರವ್ಯಾಸ, ಕನಕದಾಸ, ಪುರಂದರದಾಸ, ವಿಜಯದಾಸ, ನಂಜುಂಡ ಕವಿ ಮೊದಲಾದ ಕವಿಗಳ ಕೃತಿಗಳಲ್ಲಿ ಬರುವ ಈ ಆಟಗಳ ಚಿತ್ರಣ ತುಂಬ ಮನೋಜ್ಞವಾಗಿದೆ.

**ಸ್ವರೂಪ-ಲಕ್ಷಣ**

ಜನಪದ ಕ್ರೀಡಾಲೋಕ ಅತ್ಯಂತ ವಿಶಾಲವೂ, ವಿಶಿಷ್ಟವೂ ಆಗಿರುತ್ತದೆ. ಜನಪದರು ಆಡುವಷ್ಟು ಆಟಗಳನ್ನು ಮತ್ತಾರೂ ಆಡುವುದಿಲ್ಲ. ಅವರಲ್ಲಿ ಸಣ್ಣಮಕ್ಕಳು ಮೊದಲು ಮಾಡಿ ಹೆಣ್ಣುಮಕ್ಕಳು, ಗಂಡುಮಕ್ಕಳು ಎಲ್ಲರೂ ಆಟಗಳನ್ನು ಆಡುತ್ತಾರೆ. ಅವರವರ ಪ್ರದೇಶ, ವಯಸ್ಸು, ಲಿಂಗ, ಸ್ವಭಾವ, ಶಕ್ತಿ, ಸಾಮರ್ಥ್ಯಗಳನ್ನು ಆಧರಿಸಿ ಅಲ್ಲಿ ಆಟಗಳು ರಚನೆಯಾಗುತ್ತವೆ. ಸಾದುಗೋದು ಆಟ, ದೋಸೆ, ರಾಜರಾಣಿ, ಮದುವೆ, ಅಡಿಗೆ, ಗುಬ್ಬಿಮನಿ, ಲೋಲೋ ಟಿಮ್ಮಯ್ಯ, ಕಳ್ಳ-ಪೊಲೀಸ್, ಅಜ್ಜಿ ಮುಟ್ಟಾಟ ಈ ಮೊದಲಾದವುಗಳು ಸಣ್ಣಮಕ್ಕಳ ಆಟಗಳಾದರೆ, ಮರಕೋತಿ, ಚಿಣ್ಣಿದಾಂಡು, ಲಗೋರಿ, ಚೆಂಡು, ಬುಗುರಿ, ಹುಲಿಕುರಿ, ಕುಸ್ತಿ, ಹಳಿರ್ ಗುಡುಗುಡು ಮುಂತಾದವುಗಳು ಗಂಡುಮಕ್ಕಳ ಆಟಗಳಾಗಿವೆ. ಕುಂಟಾಟ, ಕಣ್ಣು ಮುಚ್ಚಾಲೆ, ಚಕಾರವಚ್ಚಿ, ಬಳೆಚೂರು, ಹರಳಾಟ, ಬುಲಾಯಿ, ಗೌರಿಕುಳ್ಳಿ, ಕುಂಟಬಿಲ್ಲೆ ಇತ್ಯಾದಿ ಆಟಗಳು ಹೆಣ್ಣುಮಕ್ಕಳು ಆಡುವಂಥವು. ಜನಪದ ಲೋಕದಲ್ಲಿ ಹೆಣ್ಣುಮಕ್ಕಳು, ಗಂಡುಮಕ್ಕಳಿಗೆಂದೇ ಈ ರೀತಿಯ ಪ್ರತ್ಯೇಕ ಆಟಗಳಿದ್ದರೂ, ಅನೇಕ ಆಟಗಳನ್ನು ಅವರು ಹೆಣ್ಣು-ಗಂಡು ಎಂಬ ಭೇದವಿಲ್ಲದೆ ಆಡುವುದನ್ನೂ ಕಾಣುತ್ತೇವೆ. ಅಂಥ ಆಟಗಳಿಗೆ ಉಭಯ ಸಾಮಾನ್ಯ ಆಟಗಳೆಂದು ಕರೆಯಲಾಗುತ್ತದೆ. ಖೋಖೋ, ಕಟ್ಟೆಮನೆ, ಒಂದ್‌ಚುಕ್ಕಿ ದಮ್‌ಚುಕ್ಕಿ, ಪಗಡೆ, ಬಾಳೆಹಣ್ಣಿನ ಆಟ ಇಂಥವು ಈ ವರ್ಗಕ್ಕೆ ಬದ್ಧವಾಗಿರುತ್ತವೆ. ಇನ್ನು ಆಯಾ ಪ್ರದೇಶಕ್ಕನುಗುಣವಾಗಿ ರಚನೆಯಾದ ಕೆಲವು ಆಟಗಳನ್ನು ಉದಾಹರಿಸುವುದಾದರೆ, ಗಜ್ಜುಗದಾಟ, ಕಂಬಳ, ಕೋಳಿ ಅಂಕ, ದೋಸೆ ಆಟ, ಕಾಯಿಜೂಜು ಇಂಥವು ಹೆಚ್ಚಾಗಿ ದಕ್ಷಿಣ ಕರ್ನಾಟಕದಲ್ಲಿ ಕಂಡುಬಂದರೆ, ಬುಲಾಯಿ, ಟಗರಿನ ಕಾಳಗ, ಗಿಲ್ಲಿದಾಂಡು, ಉಪ್ಪಿನಾಟ ಇಂಥವು ಉತ್ತರ ಕರ್ನಾಟಕದಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಊರಿಂದೂರಿಗೂ, ಜಿಲ್ಲೆಯಿಂದ ಜಿಲ್ಲೆಗೂ ಆಟಗಳಲ್ಲಿ ವ್ಯತ್ಯಾಸ ಇರುವುದನ್ನು ಕಾಣುತ್ತೇವೆ. ಬುಲಾಯಿ ಆಟ ಬೀದರ ಜಿಲ್ಲೆ ಬಿಟ್ಟರೆ ಕರ್ನಾಟಕದ ಬೇರೆ ಯಾವ ಜಿಲ್ಲೆಯಲ್ಲೂ ಕಂಡುಬರುವುದಿಲ್ಲ. ಹಾಗೆಯೇ ಕಂಬಳದ ಆಟ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಚ್ಚು ಪ್ರಚಲಿತದಲ್ಲಿದ್ದರೆ, ಕಲ್ಲಂಗೌರಿ ಆಟ ತುಮಕೂರು ಜಿಲ್ಲೆಯಲ್ಲಿ ಹೆಚ್ಚು ಪ್ರಚಲಿತದಲ್ಲಿದೆ. ಆದರೆ ಈ ರೀತಿ ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವ ಆಟಗಳ ಸಂಖ್ಯೆ ತುಂಬ ಕಡಿಮೆ. ಹೆಚ್ಚಿನ ಪ್ರಮಾಣದ ಆಟಗಳು ಆಡುವ ವಿಧಾನ ಹಾಗೂ ಹೊಂದಿರುವ ಹೆಸರುಗಳಲ್ಲಿ ಅಲ್ಪ-ಸ್ವಲ್ಪ ವ್ಯತ್ಯಾಸಗಳೊಂದಿಗೆ ಎಲ್ಲಾ ಕಡೆಗೂ ಸಾಮಾನ್ಯವಾಗಿರುತ್ತವೆ. ಈ ವ್ಯತ್ಯಾಸಗಳೇನೇ ಇದ್ದರೂ ಎಲ್ಲಾ ಜನಪದ ಆಟಗಳ ಉದ್ದೇಶ ಮತ್ತು ಪ್ರಯೋಜನ ಮಾತ್ರ ಒಂದೇ ಆಗಿರುತ್ತದೆ.

ಜನಪದರದು ಸದಾ ಪ್ರಾಣಿ-ಪಕ್ಷಿಗಳೊಂದಿಗಿನ ಒಡನಾಟದ ಜೀವನ. ಈ ಪ್ರಾಣಿ-ಪಕ್ಷಿಗಳೊಂದಿಗೆ ಅವರು ನಡೆಸಿದ ಸನ್ನಾಹ, ಸಂಧಾನ, ಸಂವಹನ ಇಂಥವೆಲ್ಲವುಗಳಿಂದ ಪಡೆದ ಅನುಭವಗಳು ಮತ್ತೊಂದು ಬಗೆಯ ಆಟಗಳ ನಿರ್ಮಾಣಕ್ಕೆ ಕಾರಣವಾಗಿವೆ. ಈ ಪ್ರಾಣಿ-ಪಕ್ಷಿಗಳ ವೇಷ-ಭಾಷೆಯಲ್ಲಿ ಆಟ ಆಡುವುದರೊಂದಿಗೆ, ಅವರು ಅವುಗಳ ಮಧ್ಯೆಯೂ ಆಟಗಳನ್ನೇರ್ಪಡಿಸಿ ಸಂಭ್ರಮಿಸುತ್ತಾರೆ. ಆನೆ ಆಟ, ಕುದುರೆ ಆಟ, ಕೋತಿ



ಆಟ, ಕಪ್ಪೆ ಆಟ, ಕರಡಿ ಆಟ, ಹುಲಿ-ತೋಳ ಆಟ, ನವಿಲು ಕುಣಿತ ಇವು ಪ್ರಾಣಿ-ಪಕ್ಷಿಗಳ ವೇಷ-ಭಾಷೆಯಲ್ಲಿ ಆಡುವಂಥ ಆಟಗಳಾದರೆ, ಟಗರಿನ ಕಾಳಗ, ಕೋಳಿ ಅಂಕ, ಕೋಣ ಕಾಳಗ, ಗೂಳಿಕಾಳಗ, ಕಂಬಳ ಇವು ನೇರವಾಗಿ ಪ್ರಾಣಿ-ಪಕ್ಷಿಗಳ ನಡುವೆಯೇ ನಡೆಯುವಂಥ ಆಟಗಳಾಗಿವೆ.

ಜನಪದರಿಗೆ ಪಟ್ಟಣಿಗರಂತೆ ಆಟಕ್ಕೆ ಸ್ಥಳ ಅಲ್ಲಿ-ಇಲ್ಲಿ, ಹಾಗೆ-ಹೀಗೆ ಇರಬೇಕು ಎಂಬ ಯಾವುದೇ ನಿಯಮವಿಲ್ಲ. ಸಿಕ್ಕ ಜಾಗಕ್ಕೆ ತಕ್ಕ ಆಟಗಳನ್ನು ರಚಿಸುವ ಪ್ರತಿಭೆಯೂ ಅವರಲ್ಲಿದೆ. ಗೇಣು ಜಾಗ ಸಿಕ್ಕರೂ ಸಾಕು ಅವರು ಆಟವನ್ನು ಪ್ರಾರಂಭಿಸುತ್ತಾರೆ. ವಿಶಾಲವಾದ ಬಯಲು ಸಿಕ್ಕರೆ, ಆ ಇಡೀ ಬಯಲನ್ನೇ ಬಳಸಿಕೊಂಡು ಆಡುವ ಆಟಗಳೂ ಅವರಲ್ಲಿವೆ. ಸಂದಿ-ಗೊಂದಿ ಕಂಡಲ್ಲಿ ಇಸ್ಪಾಪ್, ಕಣ್ಣುಮುಚ್ಚಾಲೆ, ಮುಟ್ಟಾಟಗಳು, ಆ ಸಂದಿಗಳಲ್ಲಿಯೇ ಸ್ವಲ್ಪ ವಿಸ್ತಾರವಾದ ಜಾಗ ಸಿಕ್ಕರೆ, ಗೋಲಿ, ಕುಂಟಬಿಲ್ಲೆ ಇತ್ಯಾದಿ ಆಟಗಳು ಆರಂಭವಾಗುತ್ತವೆ. ಮರ ಕಂಡಲ್ಲಿ ಉಯ್ಯಾಲೆ, ಮರಕೋತಿ, ಉಸುಕು ಕಂಡಲ್ಲಿ ಉಸುಕಿನಾಟ, ಕೆಸರು ಕಂಡಲ್ಲಿ ಕೆಸರಿನಾಟ, ನೀರು ಕಂಡಲ್ಲಿ ನೀರಿನಾಟ, ಮಣ್ಣು ಕಂಡಲ್ಲಿ ಮಣ್ಣಿನಾಟ, ಬೆಂಕಿ ಕಂಡಲ್ಲಿ ಬೆಂಕಿ ಆಟಗಳು ನಡೆಯುತ್ತವೆ. ಊರ ಮಧ್ಯದ ಬಯಲಿನಲ್ಲಿ ಬುಗುರಿ, ಕೋಲಾಟ, ಬುಲಾಯಿಗಳಂಥ ಆಟಗಳು ಆಡಲ್ಪಟ್ಟರೆ, ಊರ ಹೊರಗಿನ ಹಿರಿದಾದ ಬಯಲಿನಲ್ಲಿ ಚೆಂಡಾಟ, ಗಿಲಿದಾಂಡು, ಉಪ್ಪಿನಾಟದಂಥ ಆಟಗಳು ಆಡಲ್ಪಡುತ್ತವೆ. ಹೊರಗೆ ಮಳೆ ಬಿಸಿಲು ಭಯಂಕರವಾಗಿದ್ದರೆ, ಜನಪದರು ಆಟಕ್ಕಾಗಿ ಮನೆ, ಚಾವಡಿ, ಗುಡಿಗಳನ್ನು ಆಶ್ರಯಿಸುತ್ತಾರೆ. ಅಲ್ಲಿ ಅವರು ಬಳೆಚೂರು, ಹುಲಿಕುರಿ, ಚೌಕಾಬಾರ, ಕವಡಿ, ಹರಳು ಮೊದಲಾದ ಆಟಗಳಲ್ಲಿ ಮೈಮರೆಯುತ್ತಾರೆ.

ಜನಪದ ಕ್ರೀಡಾಪಟುಗಳು ಸ್ಥಳದಂತೆ ಆಟಕ್ಕೆ ಬೇಕಾಗುವ ವಸ್ತುಗಳ ಬಗ್ಗೆಯೂ ತಲೆಕೆಡಿಸಿಕೊಳ್ಳುವುದಿಲ್ಲ. ಅವುಗಳಿಗಾಗಿ ಅವರು ಯಾವುದೇ ಮಾರ್ಕೆಟ್ಟಿಗೂ ಹೋಗಬೇಕಾಗಿಲ್ಲ. ಅವರ ಜೀವನದಂತೆ ಆಟ, ಆಟದಂತೆ ಸ್ಥಳ, ವಸ್ತು ಎಲ್ಲವೂ ಸರಳವಾಗಿರುತ್ತವೆ. ಆ ವಸ್ತುಗಳು ಅವರ ಪರಿಸರದಲ್ಲಿಯೇ ಸಹಜವಾಗಿ ಎಟಕುವಂಥವು. ನಿಸರ್ಗದತ್ತವಾದ ಗಾಳಿ-ಬೆಳಕು-ನೆರಳು, ಚುಕ್ಕಿ-ಚಂದ್ರ, ಹುಣಸೆಬೀಜ, ಬುಗುರಿ, ಮಡಿಕೆಚೂರು, ಮರದ ತುಂಡು, ಮರದಕೋಲು, ಗಜ್ಜುಗ, ಗುಲಗಂಜಿ, ಬಳೆಚೂರು, ತೆಂಗಿನಚಿಪ್ಪು, ಕಲ್ಲುಚಿಪ್ಪು, ನೆಲಗಡಲೆ ಸಿಪ್ಪೆ, ಮಾವಿನ ಓಟೆ, ಹರಳು, ಮರದ ಮಣೆ, ಸಿಗರೇಟಿನ ಖಾಲಿಡಬ್ಬಿ, ಖಾಲಿ ಕಡ್ಡಿಪೆಟ್ಟಿಗೆ, ಟೋಪಿ, ಟಾವೆಲ್ಲು, ಚಿಂದಿಬಟ್ಟೆ ಹೀಗೆ ಕೈಗೆ ಸಿಕ್ಕ ಕಣ್ಣಿಗೆ ಕಾಣಿಸಿದ ವಸ್ತುಗಳೆಲ್ಲ ಅವರಿಗೆ ಆಟಿಕೆಯ ಸಾಮಾನುಗಳಾಗುತ್ತವೆ. ಇವುಗಳಲ್ಲಿ ಬಹುತೇಕ ವಸ್ತುಗಳು ಜೀವನಕ್ಕೆ ನಿರುಪಯೋಗಿ ಎಂದು ಒಗೆಯಲ್ಪಟ್ಟವು. ಅಂಥವುಗಳನ್ನೇ ಅವರು ತಮ್ಮ ಆಟಗಳಿಗೆ ಉಪಕರಣಗಳನ್ನಾಗಿ ಬಳಸಿಕೊಳ್ಳುವುದನ್ನು ನೋಡಿದರೆ, ಒಂದು ರೀತಿಯಿಂದ ಅವರದು ಕಸವನ್ನು ರಸವನ್ನಾಗಿ, ಶೂನ್ಯವನ್ನು ಸ್ವರ್ಗವನ್ನಾಗಿ ಪರಿವರ್ತಿಸುವ ಅದ್ಭುತ ಹಾಗೂ ಅಪೂರ್ವ ಪ್ರತಿಭೆ ಎಂದು ಹೇಳಬಹುದು.

## ಪ್ರಯೋಜನ

ಜನಪದರು ಬೆಳಗ್ಗೆಯಿಂದ ಬೈಗಿನವರೆಗೂ ಒಂದಿಲ್ಲ ಒಂದು ಆಟದಲ್ಲಿ ತೊಡಗಿರುತ್ತಾರೆ. ಇಡೀ ರಾತ್ರಿ ಆಡುವಂಥ ಆಟಗಳೂ ಅವರಲ್ಲಿವೆ. ಈ ಆಟಗಳು ಮೂಲತಃ ಮನೋರಂಜನೆಯ ಸಾಧನಗಳಾಗಿವೆಯಾದರೂ, ಅವುಗಳಿಂದಾಗುವ ಪ್ರಯೋಜನ ಮಾತ್ರ ಅಷ್ಟಿಷ್ಟಲ್ಲ. 'ಕಡಿಮೆ ಖರ್ಚು ಅಧಿಕ ಲಾಭ' - ಇದು ಜನಪದ ಆಟಗಳ ಪ್ರಮುಖ ತತ್ವ. ನೀರಸವಾದ ಬದುಕಿನಲ್ಲಿ ಸ್ವಾರಸ್ಯವನ್ನು ತುಂಬುವಂಥ ಜನಪದ ಆಟಗಳು ವ್ಯಕ್ತಿಯ ಮಾನಸಿಕ, ಶಾರೀರಿಕ, ಬೌದ್ಧಿಕ ಬೆಳವಣಿಗೆಯಲ್ಲಿ ಪ್ರಧಾನವಾದ ಪಾತ್ರ ವಹಿಸುತ್ತವೆ. ಅವನ ಸಾಮಾಜಿಕ, ಸಾಂಸ್ಕೃತಿಕ, ಕೌಟುಂಬಿಕ ಬದುಕಿಗೆ ಅವು ಉತ್ತಮವಾದ ತರಬೇತಿ ನೀಡುತ್ತವೆ. ಮದುವೆಯಾಟ, ಅಡುಗೆಯಾಟಗಳಂಥ ಆಟಗಳು ಮಕ್ಕಳಿಗೆ 'ಭಾವೀ ಬದುಕಿನ ಸಾಮಾಜಿಕ ಪ್ರಜ್ಞೆಯನ್ನು, ಗೃಹಕೃತ್ಯದ ಜವಾಬ್ದಾರಿಯನ್ನು ಮನವರಿಕೆ ಮಾಡಿಕೊಡುತ್ತವೆ'. ಮುಂದಿನ ಸಾಂಸಾರಿಕ ಜೀವನದ ಶಿಕ್ಷಣ ಅವರ ಎಳವೆಯಲ್ಲಿಯೇ ಇಲ್ಲಿ ನಡೆಯುತ್ತದೆ.



ಇನ್ನು ಇಸ್ಪಾಪ್, ಕುಂಟಪಿಲಿ, ಸಿಳ್ಳಾಟ, ದುಡ್ಡು ಹುಡುಕುವ ಆಟಗಳು ಜನಪದರಿಗೆ ಸ್ಮರಣೆ ಹಾಗೂ ಊಹಾಶಕ್ತಿ ಹೆಚ್ಚಿಸಿಕೊಳ್ಳಲು ಸಹಾಯಕವಾದರೆ, ಗೋಲಿಯಾಟ ಕೈಗುರಿ ಸಾಧಿಸಿಕೊಳ್ಳಲು, ಬುಗುರಿಯಾಟ ಕೈಚಳಕ ರೂಢಿಸಿಕೊಳ್ಳಲು ಸಹಾಯಕವಾಗುತ್ತವೆ. ಕಬಡ್ಡಿ, ಖೋಖೋ, ಉಪ್ಪಿನಾಟ, ಮರಕೋತಿ, ಇಂಥವು ಜಡತ್ವವನ್ನು ಹೋಗಲಾಡಿಸಿ ಅವರಿಗೆ ಜಾಣತನ, ಶೀಘ್ರಗಾಮಿತನ ದೊರಕಿಸಿ ಕೊಡುತ್ತವೆ. ಚಂಡಿನಾಟ, ಗಿಲ್ಲಿದಾಂಡು, ಡಬಲ್ ಒಂದು ಸಿಂಗಲ್ ಎರಡು, ಕುಸ್ತಿ, ಕೋಲಾಟ ಮಾಂಸಖಂಡಗಳಿಗೆ ಉತ್ತಮ ವ್ಯಾಯಾಮ ಒದಗಿಸಿ, ದೇಹದ ಬಲ ಸಂವರ್ಧನೆಗೆ, ಮನಸ್ಸಿನ ಸಮಚಿತ್ತತೆಗೆ ನೆರವಾಗುತ್ತವೆ. ಚೌಕಾಬಾರ, ಹುಲಿಕುರಿ ಆಟಗಳು ಸಂಕೀರ್ಣವೂ, ಜಟಿಲವೂ ಆದ ಬದುಕನ್ನು ಹೇಗೆ ಗೆಲ್ಲಬೇಕೆಂಬುದರ ಬಗ್ಗೆ ಮಾರ್ಗ ತೋರಿಸುತ್ತವೆ. ಪಗಡೆಯಾಟ ರಾಜಕೀಯ ತಂತ್ರಗಾರಿಕೆಯನ್ನು ಕಲಿಸಿಕೊಡುತ್ತದೆ. ಹೆಣ್ಣುಮಕ್ಕಳ ಬುಲಾಯಿ ಆಟ ಒಗ್ಗಟ್ಟಿನ ಬದುಕಿನತ್ತ ಬೆರಳುಮಾಡಿ ತೋರಿಸುತ್ತದೆ.

ಜನಪದ ಆಟಗಳು ಆರೋಗ್ಯವನ್ನು ಸುಸ್ಥಿತಿಯಲ್ಲಿ ಇಡುತ್ತವೆ. ಮಾನವ ಜನಾಂಗಕ್ಕೆ ಇಂದು ಸವಾಲಾಗಿ ಕಾಡುತ್ತಿರುವ ಹೃದಯಾಘಾತ, ಡಯಾಬಿಟಿಸ್, ರಕ್ತದೊತ್ತಡದಂಥ ಭಯಾನಕ ರೋಗಗಳನ್ನು ಸಹ ತಡೆಗಟ್ಟುವ ಶಕ್ತಿ ಜಾನಪದಾಟಗಳಿಗಿದೆ. ಈ ರೋಗಗಳ ನಿವಾರಣೆಗೆ ಇಂದು ಅನೇಕರು ನಮ್ಮ ಪ್ರಾಚೀನ ಕಾಲದ ಯೋಗಮಾರ್ಗವನ್ನು ಸೂಚಿಸುತ್ತಿದ್ದಾರೆ. ಆದರೆ ಯೋಗದ ಕಾರ್ಯವನ್ನೂ ಮಾಡುವ ಜನಪದ ಆಟಗಳಿಗೆ ಯಾರೊಬ್ಬರ ಸೂಚನೆಯಾಗಲಿ, ತರಬೇತಿ, ಮಾರ್ಗದರ್ಶನಗಳಾಗಲಿ ಬೇಕಾಗಿಲ್ಲ. ಜನಪದ ಜೀವನದ ಹೆಜ್ಜೆಹೆಜ್ಜೆಗಳಲ್ಲೂ ಪಲ್ಲವಿಸುವ ಈ ಆಟಗಳು ಊಹಿಸಲಿಕ್ಕೂ ಸಾಧ್ಯವಾಗದ ರೀತಿಯಲ್ಲಿ ಸ್ವಾಭಾವಿಕವಾಗಿಯೇ ದೈಹಿಕ-ಮಾನಸಿಕ ಆರೋಗ್ಯವನ್ನು ಕಾಪಾಡಿ ಬದುಕನ್ನು ಉಜ್ವಲಗೊಳಿಸುತ್ತವೆ.

## ಪ್ರವಾಸೋದ್ಯಮ ಮತ್ತು ಜನಪದ ಕ್ರೀಡೆಗಳು

ಪ್ರವಾಸಕ್ಕೂ ಕ್ರೀಡೆಗೂ ಇರುವ ಸಂಬಂಧ ಅತ್ಯಂತ ನಿಕಟವಾದದ್ದಾಗಿದೆ. ಹಾಗೆ ನೋಡಿದರೆ ಕ್ರೀಡೆ ಮತ್ತು ಪ್ರವಾಸದ ಮೂಲ ಉದ್ದೇಶವಾಗಲಿ, ಅರ್ಥವಾಗಲಿ ಒಂದೇ ಆಗಿದೆ. ಅದು ವಿಹಾರ ಮತ್ತು ವಿನೋದ. ವಿಹಾರ ವಿನೋದಗಳನ್ನು ನೀಡುವಂಥ ಮಾಧ್ಯಮ ಕ್ರೀಡೆಯಾದರೆ, ಅವನ್ನು ಪಡೆಯುವ ವ್ಯಕ್ತಿ ಪ್ರವಾಸಿಗನಾಗಿದ್ದಾನೆ. ಕೆಲಸ-ಕಾರ್ಯಗಳೆಲ್ಲ ಮುಗಿದ ಬೇಸಿಗೆಯಂಥ ಕಾಲದಲ್ಲಿ, ಹಬ್ಬ-ಹರಿದಿನ, ಜಾತ್ರೆ-ಉತ್ಸವಗಳಂಥ ವಿಶೇಷ ಸಂದರ್ಭಗಳಲ್ಲಿ ಹಳ್ಳಿ-ಪಟ್ಟಣಗಳಲ್ಲೆಲ್ಲ ಹಿಂದೆ ಜನಪದ ಕ್ರೀಡೆಗಳ ಪ್ರದರ್ಶನ ನಡೆಯುತ್ತಿತ್ತು.

ಜನಪದ ಆಟಗಳಿಗೆ ಆಗಿನ ಕಾಲದಲ್ಲಿ ರಾಜ ಮನ್ನಣೆ ಇತ್ತು. ಅವುಗಳ ಪ್ರದರ್ಶನ ರಾಜ-ಮಹಾರಾಜರ ಸಾನ್ನಿಧ್ಯದಲ್ಲಿಯೇ ಏರ್ಪಡುತ್ತಿತ್ತು. ಮಾತ್ರವಲ್ಲ ಇಂಥ ಪ್ರದರ್ಶನಗಳನ್ನು ಸ್ವತಃ ರಾಜರೇ ಏರ್ಪಡಿಸಿ, ಅವುಗಳಲ್ಲಿ ತಾವೂ ಭಾಗವಹಿಸುತ್ತಿದ್ದರು. ಹಬ್ಬ-ಜಾತ್ರೆ-ಉತ್ಸವಗಳಿದ್ದಾಗ, ರಾಜರಿಗೆ ತುಂಬ ಬೇಸರ ಉಂಟಾದಾಗ ಅಥವಾ ಅರಮನೆಗೆ ಯಾರಾದರೂ ಗಣ್ಯವ್ಯಕ್ತಿಗಳನ್ನು ಆಹ್ವಾನಿಸಿದಾಗ ಜನಪದ ಆಟಗಳ ಮನೋರಂಜನೆ ಕಾರ್ಯಕ್ರಮಗಳು ನಡೆಯುತ್ತಿದ್ದವು. ತನ್ನ ಆಸ್ಥಾನಕ್ಕೆ ಆಗಮಿಸಿದ ನಂಬಿಯಣ್ಣನನ್ನು ಸಂತೋಷಪಡಿಸಲು ಚೇರಮ ರಾಜ ಏರ್ಪಡಿಸಿದ ಮನೋರಂಜನೆ ಕಾರ್ಯಕ್ರಮದ ಬಗ್ಗೆ 'ಚೇರಮಕಾವ್ಯ' ವರ್ಣಿಸಿದರೆ, ಇಂಥ ಕಾರ್ಯಕ್ರಮಗಳೊಂದಿಗೆ ಕುಮಾರರಾಮ ಹೊತ್ತು ಕಳೆಯುತ್ತಿದ್ದ ರೀತಿ ಕುರಿತು 'ಕುಮಾರರಾಮ ಸಾಂಗತ್ಯ' ಕಾವ್ಯ ವರ್ಣಿಸುತ್ತದೆ. ಈ ಕಾರ್ಯಕ್ರಮಗಳನ್ನು ನೋಡುವುದಕ್ಕಾಗಿ ಅಂದು ಜನರು ದೂರದೂರದ ಊರು-ನಾಡು-ದೇಶಗಳಿಂದ ಆಗಮಿಸುತ್ತಿದ್ದರು ಎಂಬುದರ ಬಗ್ಗೆಯೂ ನಮ್ಮ ಕಾವ್ಯಗಳು ತಿಳಿಸುತ್ತವೆ. ತನ್ನ ಸಂಗಡಿಗರೊಂದಿಗೆ

ಆಡುತ್ತಿದ್ದ ಕುಮಾರರಾಮನ ಚೆಂಡಾಟವನ್ನು ನೋಡುವುದಕ್ಕಾಗಿ ಬಂದ ಕ್ರೀಡಾ ವಿನೋದಿಗಳಿಗೆ ಕ್ರೀಡಾಂಗಣ ಮಾತ್ರವಲ್ಲ, ಅದರ ಸುತ್ತ-ಮುತ್ತ ಇರುವ ಮಾಳಿಗೆ, ಚಪ್ಪರ, ಮನೆಮಾಡಗಳು ಕೂಡ ಸಾಕಾಗುತ್ತಿರಲಿಲ್ಲ ಎಂಬುದು ನಂಜುಂಡ ಕವಿಯಿಂದ ತಿಳಿದು ಬರುತ್ತದೆ. ಅದೇರೀತಿ ಶಾಹುಮಹಾರಾಜನ ಕಾಲದಲ್ಲಿ ಮಹಾರಾಷ್ಟ್ರದ ಕೊಲ್ಲಾಪುರ ದಕ್ಷಿಣ ಭಾರತದ ಕುಸ್ತಿಗಳ ತವರೂರು ಎಂದೆನಿಸಿದ್ದು, ಇಲ್ಲಿನ ಕುಸ್ತಿ ಪಂದ್ಯ ನೋಡುವುದಕ್ಕಾಗಿ ಜನರು ದೇಶ-ವಿದೇಶಗಳಿಂದ ಆಗಮಿಸುತ್ತಿದ್ದರು ಎಂದು ಹೇಳಲಾಗುತ್ತದೆ.



ಹಿಂದಿನಿಂದಲೂ ಪ್ರಸಿದ್ಧವಾಗಿರುವ ಕರಾವಳಿಯ ಕಂಬಳಕ್ರೀಡೆ ಈಗಲೂ ಪ್ರವಾಸಿಗರ ಗಮನ ಸೆಳೆದಿದೆ. ಕರ್ನಾಟಕಕ್ಕೆ ಹೊಂದಿಕೊಂಡಿರುವ ಮಹಾರಾಷ್ಟ್ರದ ಅಕ್ಕಲಕೋಟ ತಾಲ್ಲೂಕಿನ ಸಲಗರ ಗ್ರಾಮದಲ್ಲಿ ಕಾರ್‌ಹುಣ್ಣಿಮೆ ಸಂದರ್ಭದಲ್ಲಿ ಅಕ್ಕಲಕೋಟ ಫತೇಸಿಂಹ ಮಹಾರಾಜನ ಕಾಲದಿಂದಲೂ ನಡೆಯುವ ಗಾಡಿಗೆ ಎತ್ತುಗಳನ್ನು ಕಟ್ಟಿ ಓಡಿಸುವ ಪಂದ್ಯ ಇಂದಿಗೂ ಪ್ರಸಿದ್ಧವಾಗಿದೆ. ಹಾವೇರಿ ಜಿಲ್ಲೆಯಲ್ಲಿ ನಡೆಯುವ ಟಗರಿನ ಕಾಳಗ ಹಿಂದಿನಿಂದಲೂ ಗಮನ ಸೆಳೆದಿದೆ. ಫಾಯೆಸ್, ನ್ಯೂನಿಜ್, ಅಬ್ದುರ್ ರಜಾಕ್, ಲಿನ್ ಷಾಟನ್ ಮೊದಲಾದ ವಿದೇಶೀ ಪ್ರವಾಸಿಗರು ವಿಜಯನಗರ ಅರಸರ ಕಾಲದಲ್ಲಿ ನಡೆಯುತ್ತಿದ್ದ ಈಜು, ಬೇಟೆ, ಮಲ್ಲ, ಕತ್ತಿವರಸೆ ಇತ್ಯಾದಿ ಆಟಗಳನ್ನು ಕುರಿತು ವರ್ಣಿಸಿರುವುದು ಇಲ್ಲಿ ಗಮನಿಸಬೇಕಾದ ಸಂಗತಿಯಾಗಿದೆ. ಹೀಗೆ ಜನಪದ ಆಟಗಳಿಗೆ ಪ್ರಾಚೀನ ಕಾಲದಲ್ಲಿ ಪ್ರವಾಸ ಸಂಸ್ಕೃತಿ ಅಂತರರಾಷ್ಟ್ರೀಯ ಖ್ಯಾತಿ ತಂದುಕೊಟ್ಟಿತ್ತು.

ಪ್ರಾಚೀನ ಕಾಲದಲ್ಲಿ ಮಠ, ಮಂದಿರ, ಅಗ್ರಹಾರಗಳು ಪ್ರಮುಖ ಪ್ರವಾಸಿ ಕೇಂದ್ರಗಳಾಗಿದ್ದವು. ಜನಪದ ಆಟಗಳ ಪ್ರದರ್ಶನಕ್ಕೆ ಬಂದ ಪ್ರವಾಸಿಗರಿಗೆ ಇಲ್ಲಿಯೇ ವ್ಯವಸ್ಥೆ ಮಾಡಲಾಗುತ್ತಿತ್ತು. ಆದರೆ ಅದಕ್ಕಾಗಿ ಅವರಿಂದ ಯಾವುದೇ ರೀತಿಯ ಬಾಡಿಗೆ ಪಡೆಯುತ್ತಿದ್ದಿರಲಿಲ್ಲ.

ಜನಪದ ಸಂಸ್ಕೃತಿ ನಮ್ಮ ಸಮಗ್ರ ಐತಿಹಾಸಿಕ- ಸಾಂಸ್ಕೃತಿಕ-ಪರಂಪರೆಯ ಒಂದು ಅವಿಭಾಜ್ಯವಾದ ಅಂಗವಾಗಿದೆ. ಜನಪದ ಸಂಗೀತ, ನೃತ್ಯ, ಸಾಹಿತ್ಯ, ವೈದ್ಯ, ಕರಕುಶಲಕಲೆ ಮೊದಲಾದವುಗಳು ಇಲ್ಲಿ ಶತಮಾನಗಳಿಂದಲೂ ಶ್ರೀಮಂತವಾಗಿವೆ. ಅದರಲ್ಲೂ ಜನಪದ ಕ್ರೀಡೆಗಳು ಪ್ರಾಚೀನ ಕಾಲದಿಂದಲೂ ನಮ್ಮಲ್ಲಿ ಸಮೃದ್ಧವಾಗಿವೆ ಎಂಬುದನ್ನು ಹಿಂದೆಯೇ ನೋಡಲಾಗಿದೆ. ಉತ್ತಮ ಮನೋರಂಜನೆ ಹಾಗೂ ಅಂಗಸಾಧನೆಯ ಕಲೆಗಳಾಗಿರುವ ಈ ಆಟಗಳು ಇಂದು ಕಣ್ಮರೆಯಾಗುತ್ತಿವೆ. ಅವುಗಳನ್ನು ಉಳಿಸುವ ನಿಟ್ಟಿನಲ್ಲಿ ಪ್ರವಾಸೋದ್ಯಮ ಗಮನಹರಿಸಬೇಕಾಗಿದೆ.

ಪ್ರವಾಸೋದ್ಯಮ ಜನಪದ ಆಟಗಳಿಗೆ ಯೋಗ್ಯ ಪ್ರೋತ್ಸಾಹ ನೀಡಿ, ಬೇಕಾದರೆ ಅವುಗಳನ್ನು ಶಾಸ್ತ್ರೀಯವಾಗಿ ಪರಿಷ್ಕರಿಸಿ ಪ್ರದರ್ಶನಕ್ಕೆ ಅಳವಡಿಸಿದರೆ, ಇಲ್ಲಿ ಇನ್ನೊಂದು ಲಾಭದಾಯಕ ಉದ್ದಿಮೆ ಬೆಳೆಸಲು ಸಾಧ್ಯವಿದೆ.

ನಮ್ಮಲ್ಲಿ ಜನಪದ ಕ್ರೀಡೆಗಳನ್ನು ಪ್ರೇಕ್ಷಣೀಯ ಸ್ಥಳಗಳಲ್ಲಿ ಕಲ್ಪಿಸುವ ಎಲ್ಲಾ ಸಾಧ್ಯತೆಗಳಿವೆ. ಮಳೆಗಾಲದ ಮೂರು ತಿಂಗಳು ಮಾನ್‌ಸೂನ್ ಗಾಳಿಯ ಹೊಡೆತ ಬಿಟ್ಟರೆ, ಉಳಿದ ಒಂಬತ್ತು ತಿಂಗಳು ತೆಪ್ಪಗೆ ತೆವಳುವ ಕರ್ನಾಟಕದ ಕರಾವಳಿಯಲ್ಲಿ ಸ್ನಾನಕ್ಕೆ ಯೋಗ್ಯವಾದ ಬೀಚುಗಳು ಹೇರಳವಾಗಿವೆ. ಕಡಿಮೆ ಎಂದರೆ ೧೦೦ ಮೈಲಾದರೂ ಸ್ವಚ್ಛ ಬಿಳಿಯರಳಿನ ವಿಶಾಲಕೆರೆಯ, ಆಳವಿಲ್ಲದ ನೀಲ ಜಲರಾಶಿ ಯಾವ ಜಲಕ್ರೀಡೆಗೂ ಅನುಕೂಲವಾಗಿದೆ. ಕಡಲಿನ ಮೇಲಿನ ವಿಹಾರಕ್ಕೆ ವಿದೇಶೀಯರು ಬೇಕಾದಷ್ಟು




ಅನುಕೂಲ ಕಲ್ಪಿಸಿಕೊಡುವರು. ಅಟ್ಲಾಂಟಿಕ್ ತೀರದ ಡೇಟನಾ ಬೀಚ್‌ನ ಸೂರ್ಯೋದಯದ ಸೊಬಗಿನ ಬಣ್ಣ ಪ್ರಪಂಚ ಪ್ರಸಿದ್ಧವಾದುದು. ಹಾಗೆಯೇ ನಮ್ಮಲ್ಲೂ ಅನೇಕ ಬೀಚುಗಳು ಪ್ರಸಿದ್ಧವಾಗಿವೆ. ಮಲ್ಪೆ ಬೀಚು ಉಡುಪಿಯಿಂದ ಕೇವಲ ೮ ಕಿ.ಮೀ. ದೂರದಲ್ಲಿದೆ. ಚಿನ್ನದ ಬಣ್ಣದ ಈ ಬೀಚಿನ ಸೌಂದರ್ಯ ಯಾರಿಗೆ ಬೇಡ ? ಮಲ್ಪೆಯ ಸಮುದ್ರ ತೀರಕ್ಕೆ ಐದು ಕಿ.ಮೀ. ಹತ್ತಿರವಿರುವ ಸೈಂಟ್ ಮೇರಿಸ್ ದ್ವೀಪದಲ್ಲಿ ಕರಿಶಿಲೆಗಳ ಸುಂದರ ಸಮೂಹವಿದೆ. ತೆಂಗಿನ ಸೊಬಗು ಪ್ರವಾಸಿಗರಿಗೆ ಸ್ವರ್ಗ ಸದೃಶವಾಗಿದೆ. ಅಲ್ಲಿ ನೀರಿನ ಕ್ರೀಡೆಗಳನ್ನು ಆರಂಭಿಸಬಹುದಾಗಿದೆ. ಕಾರವಾರದ ಸಮೀಪ ಇರುವ ಸಮುದ್ರ ಹಾಗೂ ನದಿಗಳೆರಡರ ನಡುವಿನ ನಿಸರ್ಗ ತಾಣ ದೇವ್‌ಬಾಗವೂ ಈ ಕ್ರೀಡೆಗೆ ಹೇಳಿಸಿ ಮಾಡಿಸಿದಂತಿದೆ.

ಹಂಪಿ, ಬಿಜಾಪುರ, ಐಹೊಳೆ, ಪಟ್ಟದಕಲ್ಲು ಮೊದಲಾದ ನಗರಗಳು ವಿಶ್ವಪ್ರಸಿದ್ಧ ಪ್ರವಾಸಿ ಕೇಂದ್ರಗಳಾಗಿವೆ. ಅಲ್ಲಿನ ಪ್ರಾಚೀನ ಕಾಲದ ದೇವಾಲಯ, ಗುಂಬಜಗಳ ವಿಶಾಲವಾದ ಆವರಣಗಳು ಜನಪದ ಆಟಗಳ ಅಳವಡಿಕೆಗೆ ತುಂಬ ಅನುಕೂಲಕರವಾಗಿವೆ. ಅಲ್ಲಿ ಜಾನಪದ ಆಟಿಕೆಗಳ ಪ್ರದರ್ಶನ ಏರ್ಪಡಿಸಬಹುದಾಗಿದೆ.

ಬೀದರ ಜಿಲ್ಲೆ, ನಮ್ಮ ದೇಶವೇಕೆ, ವಿಶ್ವದಲ್ಲಿಯೇ ಐತಿಹಾಸಿಕ ಹಾಗೂ ಸಾಂಸ್ಕೃತಿಕವಾಗಿ ತುಂಬ ಪ್ರಸಿದ್ಧಿ ಪಡೆದ ಜಿಲ್ಲೆಯಾಗಿದೆ. ಜಿಲ್ಲೆಯ ಬೀದರ ಹಾಗೂ ಬಸವಕಲ್ಯಾಣದಲ್ಲಿರುವ ಪ್ರಾಚೀನ ಕಾಲದ ಕೋಟೆ ಮೊದಲಾದ ಪ್ರೇಕ್ಷಣೀಯ ಸ್ಥಳಗಳು ಪ್ರವಾಸಿಗರನ್ನು ಆಕರ್ಷಿಸುವಂಥವಾಗಿವೆ. ಅಲ್ಲೆಲ್ಲ ಪ್ರವಾಸೋದ್ಯಮ ಈ ಜಿಲ್ಲೆಗೇ ಮಾತ್ರ ಸೀಮಿತವಾಗಿ ಉಳಿದಿರುವ ಸ್ತ್ರೀಯರ 'ಬುಲಾಯಿ' ಕ್ರೀಡೆಯನ್ನು ಕಲ್ಪಿಸಿ, ಅದಕ್ಕೆ ಅಂತರರಾಷ್ಟ್ರೀಯ ಖ್ಯಾತಿ ತಂದುಕೊಡಬಹುದಾಗಿದೆ.

ಕರಾವಳಿಯ ಹಲವೆಡೆ ಸುಗ್ಗಿ ಕಾಲದಲ್ಲಿ ಕಂಬಳಗಳು ನಡೆಯುತ್ತವೆ. ಆಧುನಿಕ ರೀತಿಯಲ್ಲಿ ಜಾನಪದ ಕಂಬಳವನ್ನು ಅದ್ದೂರಿಯಾಗಿ ಕಾಸರಗೋಡು ಸೇರಿದಂತೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ನಡೆಸಲಾಗುತ್ತದೆ. ಹಗಲು ರಾತ್ರಿ ಸಂಭ್ರಮದಿಂದ ಎಡೆಬಿಡದೆ ನಡೆಯುವ ಈ ಕ್ರೀಡೆ ಎಂಥ ಪ್ರವಾಸಿಗನ ಮನಸ್ಸನ್ನೂ ಸೆಳೆಯುವಂಥದ್ದಾಗಿದೆ. ಹೈದ್ರಾಬಾದ ಕರ್ನಾಟಕದಲ್ಲಿ ಸತ್ತವರ ಮುಂದೆ ಹಲಗೆ ಬಾರಿಸುವವರ ಮಧ್ಯೆ 'ದುಡ್ಡು ಹುಡುಕುವ' ಮೊದಲಾದ ಆಟಗಳು ನಡೆಯುತ್ತವೆ. ಕಡುದುಃಖದಲ್ಲೂ ಸಂತೋಷವನ್ನು ಉಕ್ಕಿಸುವಂಥ ಇಂಥ ಅನೇಕ ಆಟಗಳು ಜನಪದ ಸಂಸ್ಕೃತಿಯ ಖಜಾನೆಯಲ್ಲಿವೆ.

ಈ ಎಲ್ಲಾ ಆಟಗಳನ್ನು ಅಭಿವೃದ್ಧಿಪಡಿಸುವಲ್ಲಿ ಪ್ರವಾಸೋದ್ಯಮ ಇಲಾಖೆ ಆಸ್ಥೆ ತಳೆಯಬೇಕಾಗಿದೆ. ಕರ್ನಾಟಕ ಸರಕಾರದ ೨೦೦೧-೨೦೦೭ರ ಪ್ರವಾಸೋದ್ಯಮ ನೀತಿಯಲ್ಲಿ ಸಾಹಸ ಕ್ರೀಡೆಗಳಿಗೆ ಯೋಜನೆ ರೂಪಿಸಲಾಗಿದೆ. ಆದರೆ ಜಾನಪದ ಕ್ರೀಡೆಗಳತ್ತ ಗಮನ ಹರಿಸಿದಂತೆ ಕಾಣುವುದಿಲ್ಲ. ಆ ನಿಟ್ಟಿನಲ್ಲಿ ಪ್ರವಾಸೋದ್ಯಮ ಕಾರ್ಯಪ್ರವೃತ್ತವಾದರೆ, ನಮ್ಮ ಜಾನಪದ ಸಂಸ್ಕೃತಿಯ ಅಮೂಲ್ಯ ನಿಧಿಯಾಗಿರುವ ಜನಪದ ಕ್ರೀಡೆಗಳು ಜೀವಂತವಾಗಿ ಉಳಿಯಲು ಸಾಧ್ಯವಿದೆ.

ಡಾ|| ಗುರುಲಿಂಗಪ್ಪ ಧಬಾಲೆ
ಆಯ್ಕೆಶ್ರೇಣಿ ಕನ್ನಡ ಉಪನ್ಯಾಸಕ, ಸಿ. ಬಿ. ಖೇಡಗಿ ಬಸವೇಶ್ವರ ಮಹಾವಿದ್ಯಾಲಯ ಹಾಗೂ ಕನ್ನಡ ಸ್ನಾತಕೋತ್ತರ ಕೇಂದ್ರ ಅಕ್ಕಲಕೋಟ-೪೧೩೨೧೬ ಸೊಲ್ಲಾಪುರ ಜಿಲ್ಲೆ(ಮಹಾರಾಷ್ಟ್ರ)

# ಸಹಕಾರಿ ತತ್ವ ಒಂದು ಚಿಂತನೆ



**ಕ**ನ್ನಡ ನಾಡಿನಲ್ಲಷ್ಟೇ ಅಲ್ಲದೆ ಇಡೀ ಏಷ್ಯಾ ಖಂಡದಲ್ಲಿಯೇ ಮೊಟ್ಟಮೊದಲ ಬಾರಿಗೆ ಸಹಕಾರಿ ಸಂಘವನ್ನು ಹುಟ್ಟುಹಾಕಿದ್ದು ಕರ್ನಾಟಕ ರಾಜ್ಯದ ಗದಗ ಜಿಲ್ಲೆಯ ಕಣಗಿನಹಾಳ ಎಂಬ ಪುಟ್ಟ ಗ್ರಾಮದ ಶಿದ್ದನಗೌಡ ಸಣ್ಣರಾಮನಗೌಡ ಪಾಟೀಲ ಎಂಬುವರು. ಪಾಟೀಲರು ನೀಡಿದ್ದ ಸಹಕಾರದಿಂದ ಇವತ್ತು ಏನೆಲ್ಲಾ ಕ್ರಾಂತಿ ನಡೆದಿದೆ ಅಲ್ಲದೆ ರಾಜ್ಯ ಸಚಿವ ಸಂಪುಟದಲ್ಲಿ ಓರ್ವ ಕ್ಯಾಬಿನೆಟ್ ದರ್ಜೆ ಸಚಿವರನ್ನೂ ಹುಟ್ಟುಹಾಕಿದೆ.

ಆದರೆ, ಇಂತಹ ಮಹತ್ವದ ಸಹಕಾರಿ ತತ್ವ ನೀಡಿದ ಪಿತಾಮಹ ಶಿದ್ದನಗೌಡರಿಗೆ ಸರ್ಕಾರ ಮಾತ್ರ ಅಸಹಕಾರವನ್ನೇ ತೋರಿದೆ, ಈಗಲೂ ತೋರುತ್ತಿದೆ. ೧೯೦೫ರ ಮೇ ೮ರಂದು ಬ್ರಿಟಿಷ್ ಅಧಿಕಾರಿಗಳಿಗೆ ಷರತ್ತು ಹಾಕುವ ಮೂಲಕ ಆ ಕಾಲಕ್ಕೆ ಎರಡು ಸಾವಿರ ರೂಪಾಯಿ ಹಣ ತುಂಬಿ ಸಹಕಾರಿ ಸಂಘವನ್ನು ನೋಂದಣಿ ಮಾಡಿಸಿದ್ದರು. ಅದೇ ರಾಷ್ಟ್ರದ ಮೊದಲ ಸಹಕಾರಿ ಸಂಘ.

ಈ ಸಹಕಾರಿ ತತ್ವದ ಯೋಜನೆ ಹಾಗೂ ಇದನ್ನು ಜಾರಿಗೆ ತರುವಲ್ಲಿ ಇದ್ದ ಉದ್ದೇಶ ಅತ್ಯಂತ ಮಹತ್ವದ್ದು. ಕಳೆದ ಶತಮಾನದ ಕೊನೆಯಲ್ಲಿ ದೇಶ ಭೀಕರ ಬರಗಾಲಕ್ಕೆ ತುತ್ತಾಗಿತ್ತು. ಜನ ತತ್ತರಿಸಿದ್ದೇ ಅಲ್ಲದೇ ಅನ್ನ-ನೀರು ಇಲ್ಲದೆ ಜನ, ಜಾನುವಾರುಗಳು ಸಾವನ್ನಪ್ಪಿದ್ದವು. ಈ ಸಂದರ್ಭದಲ್ಲಿ ವ್ಯವಸಾಯವನ್ನೇ ನಂಬಿದ ರೈತರ ಸ್ಥಿತಿ ಅತ್ಯಂತ ಗಂಭೀರವಾಗಿತ್ತು. ಇವೆಲ್ಲವನ್ನು ಗಮನಿಸಿದ ಬ್ರಿಟಿಷ್ ಸರ್ಕಾರ ಅಧ್ಯಯನ ಆಯೋಗವೊಂದನ್ನು ರಚಿಸಿತು.

ಈ ಆಯೋಗವು ದೇಶದಲ್ಲಿನ ಬರಗಾಲದ ಪರಿಣಾಮ ಕುರಿತು ಅಧ್ಯಯನ ನಡೆಸಿತು. ಈ ಅಧ್ಯಯನದಲ್ಲಿ ಕಂಡುಬಂದ ಮಹತ್ವದ ಸಂಗತಿ ಎಂದರೆ ರೈತ ಸಮುದಾಯದ ಶೇ. ೩೫ರಷ್ಟು ರೈತರು ಸಾಲದಿಂದ ಬಿಡಿಸಿಕೊಳ್ಳಲಾರದ ಸ್ಥಿತಿಯಲ್ಲಿ ಇದ್ದದ್ದು. ಇದಕ್ಕಾಗಿ ರೈತರ ಆರ್ಥಿಕ ಸುಧಾರಣೆ ತರುವುದರ ಜೊತೆಗೆ ಪರಸ್ಪರ ಸಹಾಯ ಸಹಕಾರದಿಂದ ಉತ್ತಮ ಜೀವನ ನಡೆಸಲು ಸಾಧ್ಯವಿದೆ, ಅದಕ್ಕಾಗಿ 'ಸಹಕಾರ' ಬೇಕು ಎಂದು ಆಯೋಗ ವರದಿ ನೀಡಿತು.

ಈ ವರದಿಯ ಆಧಾರದ ಮೇಲೆ ಬ್ರಿಟಿಷ್ ಸರ್ಕಾರ ಆರ್ಥಿಕ ಸ್ವಾವಲಂಬನೆಗೆ ಪ್ರೇರೇಪಿಸಲು ೧೯೦೪ರಲ್ಲಿ 'ಇಂಡಿಯನ್ ಕೋ-ಆಪರೇಟಿವ್ ಸೊಸೈಟಿಸ್ ಆ್ಯಕ್ಟ್'ನ್ನು ಜಾರಿಗೆ ತಂದಿತು. ಈ ಕಾಯ್ದೆ ಅಂದಿನ ಮುಂಬೈ ರೆಸಿಡೆನ್ಸಿ ಶಾಸನಸಭೆಯಲ್ಲಿ ೨೫-೩-೧೯೦೪ರಂದು ಅನುಮೋದನೆ ಪಡೆದು ಇದರ ಜಾರಿಗಾಗಿ ಸರ್ ಜೆ. ಮೆಕ್ಯಾನಿಯಲ್ ಅವರನ್ನು ರಿಜಿಸ್ಟ್ರಾರ್ ಆಗಿ ನೇಮಿಸಿತು.

ರಿಜಿಸ್ಟ್ರಾರ್ ಸರ್ ಜೆ. ಮೆಕ್ಯಾನಿಯಲ್ ಅವರು ಈ ಸಹಕಾರಿ ಕಾಯ್ದೆಯ ಜಾರಿಗಾಗಿ ಸಾಕಷ್ಟು ಪ್ರವಾಸ, ಪ್ರಚಾರ ಕೈಗೊಂಡು ಮನವಿಮಾಡಿದರೂ ಜನರ ಸಹಕಾರ ಸಿಗದೆ ಈ ಕಾಯ್ದೆ ಜಾರಿಯಾಗದೆ ಹಾಗೇ ಉಳಿಯಿತು. ಸರ್ ಜೆ. ಮೆಕ್ಯಾನಿಯಲ್ ತಮ್ಮ ಪ್ರಯತ್ನ ಬಿಡದೆ ಆಗಿನ ಮೈಸೂರು ರಾಜ್ಯದ, ಅದರಲ್ಲಿಯೂ ಉತ್ತರ ಮುಂಬೈ ಪ್ರಾಂತ್ಯದ ಕಡೆ ಬಂದರು. ಆಗ ಸರ್ಕಾರ ಅವರಿಗೆ ಧಾರವಾಡ ಜಿಲ್ಲೆಯ ಆ್ಯಕ್ಟಿಂಗ್ ಕಲೆಕ್ಟರ್ ಹುದ್ದೆಯ ಪ್ರಭಾರ ವಹಿಸಿತ್ತು. ಈ ಸಂದರ್ಭದಲ್ಲಿ ಕಣಗಿನಹಾಳದ ಶಿದ್ದನಗೌಡರು ತಮ್ಮ ಗ್ರಾಮದ ಕೆಲಸಗಳಿಗಾಗಿ ಮೆಕ್ಯಾನಿಯಲ್ ಅವರನ್ನು ಭೇಟಿಮಾಡಿದಾಗ ಸಹಕಾರಿ ಸಂಘದ ಪ್ರಸ್ತಾಪದ ಜೊತೆಗೆ ಸುದೀರ್ಘ ಚರ್ಚೆಮಾಡಿ ಮೊದಲ ಸಹಕಾರಿ ಸಂಘದ ನೋಂದಣಿ ಮಾಡಿಕೊಟ್ಟದ್ದು, ಆಗ ಕಣಗಿನಹಾಳಕ್ಕೆ ರೇಲ್ವೆ ನಿಲ್ದಾಣವಾಗಿದ್ದು ಈಗ ಇತಿಹಾಸ.

ಈ ಸಹಕಾರಿ ಸಂಘದ ಸ್ಥಾಪನೆಗೆ ಶತಮಾನವಾದಾಗ ಕಣಗಿನಹಾಳ ಗ್ರಾಮದಲ್ಲಿ ಜೆಡಿಎಸ್ ಹಾಗೂ ಕಾಂಗ್ರೆಸ್ ಮೈತ್ರಿ ಸರ್ಕಾರದಲ್ಲಿ ಆಡಳಿತೆಯ ಸಂದರ್ಭದಲ್ಲಿ ಶತಮಾನೋತ್ಸವವನ್ನು ಆಚರಿಸ ಲಾಯಿತು. ಆ ಸಮಾರಂಭದಲ್ಲಿ ಅಂದಿನ ಮುಖ್ಯಮಂತ್ರಿ ಧರ್ಮಸಿಂಗ್, ಉಪ ಮುಖ್ಯಮಂತ್ರಿ ಸಿದ್ದರಾಮಯ್ಯ, ಜಿಲ್ಲಾ ಉಸ್ತುವಾರಿ ಸಚಿವ ಎಚ್. ಕೆ. ಪಾಟೀಲ, ಸಹಕಾರಿ ಸಚಿವ ಆರ್. ವಿ. ದೇಶಪಾಂಡೆ, ರಾಜ್ಯಪಾಲ ಚತುರ್ವೇದಿ ಸೇರಿದಂತೆ ಎಲ್ಲ ಗಣ್ಯರೂ ಸೇರಿದ್ದರು.

ಈ ಸಂದರ್ಭದಲ್ಲಿ ಸಹಕಾರಿ ಪಿತಾಮಹನ ಮೂರ್ತಿಯನ್ನು ಗದಗ ನಗರ ಮತ್ತು ವಿಧಾನಸೌಧದ ಎದುರು ನಿಲ್ಲಿಸುವುದರೊಂದಿಗೆ ಕಣಗಿನಹಾಳ ಗ್ರಾಮವನ್ನು ಮಾದರಿ ಗ್ರಾಮವನ್ನಾಗಿಸುವ ಮತ್ತು ಸಹಕಾರಿ ರಂಗದಲ್ಲಿ ಹತ್ತು ಲಕ್ಷ ಜನರನ್ನು ಸದಸ್ಯರನ್ನಾಗಿಸುವಂತಹ ಹಲವಾರು ಘೋಷಣೆಗಳನ್ನು ಮಾಡಿದ್ದರು. ಆದರೆ ಈ ಯಾವ ಘೋಷಣೆಗಳೂ ಈವರೆಗೂ ಕಾರ್ಯಾಚರಣೆಗೆ ಬಂದಿಲ್ಲ. ಗ್ರಾಮದಲ್ಲಿ ಈಗಿನ ಸಚಿವ ಬಸವರಾಜ ಬೊಮ್ಮಾಯಿ ಮಾಡಿಸಿಕೊಟ್ಟ ಶಿದ್ದನಗೌಡರ ಮೂರ್ತಿ ಇದೆ. ಇದನ್ನು ಬಿಟ್ಟರೆ ಇನ್ನೇನೂ ಸಿಗುವುದಿಲ್ಲ.

ಗ್ರಾಮೀಣ ಪ್ರದೇಶದಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳು ಬಂದು ಸೇವೆ ನೀಡಲು ಅಷ್ಟಾಗಿ ಉತ್ಸಹ ತೋರುವುದಿಲ್ಲವಾದ್ದರಿಂದ ಅಲ್ಲಲ್ಲಿ ಸಹಕಾರಿ ಸಂಘಗಳು ತಲೆ ಎತ್ತಿದವು. ಇಂತಹ ಸಹಕಾರಿ ಸಂಘಗಳು ರೈತರು, ನೇಕಾರರು ಸೇರಿದಂತೆ ಗುಡಿಕೈಗಾರಿಕೆಗಳಲ್ಲಿ ನಿರತರಾಗಿರುವವರಿಗೆ ಸಹಕಾರಿಯಾದವು. ಬ್ರಿಟಿಷ್ ಸರ್ಕಾರದ ಅಧ್ಯಯನದಿಂದ ಬಂದ ಮಹತ್ವದ ಈ ಸಹಕಾರಿ ಕಾಯ್ದೆ ಕಾಲ ಕಾಲಕ್ಕೆ ಕೆಲ ಬದಲಾವಣೆಯೊಂದಿಗೆ ಬಲವಾಗುತ್ತ 'ನಾನು ಎಲ್ಲರಿಗಾಗಿ, ಎಲ್ಲರೂ ನನಗಾಗಿ' ಎನ್ನುವ ಮಾತು ಅರ್ಥಪೂರ್ಣವಾಗಿ ಬಳಕೆಯಾಗುತ್ತ ರಾಜ್ಯದಲ್ಲಿ ಸಹಕಾರ ಕ್ಷೇತ್ರ ಬೆಳೆಯುತ್ತ ಬಂತು.

### ರಾಜಕೀಯ ಪ್ರವೇಶದ ದುರ್ದೈವ

ಇದರಿಂದ ಆರ್ಥಿಕ ಸ್ವಾವಲಂಬನೆಯ ಸ್ಪಷ್ಟ ಕಲ್ಪನೆ ಕೂಡ ಗ್ರಾಮೀಣ ಜನರಲ್ಲಿ ಮೂಡಿತು. ಈ ಕ್ಷೇತ್ರದ ಬೆಳವಣಿಗೆಯನ್ನು ಗಮನಿಸಿದ ರಾಜ್ಯದ ಸಚಿವ ಸಂಪುಟದಲ್ಲಿ ಓರ್ವ ಸಂಪುಟ ದರ್ಜೆ ಸಚಿವರನ್ನು ಸಹಕಾರಿ ಕ್ಷೇತ್ರಕ್ಕೆ ನೇಮಕ ಮಾಡುವ ಮಟ್ಟಿಗೆ ಈ ಸಹಕಾರಿ ಚಿಂತನೆ ಬೆಳೆಯಿತು. ಆದರೆ, ದುರ್ದೈವದ ಸಂಗತಿ ಎಂದರೆ ಇದಕ್ಕೆ ಸಂಪುಟ ದರ್ಜೆ ಸಚಿವರನ್ನು ನೇಮಿಸಿದಾಗಿನಿಂದಲೊ ಅಥವಾ ಪರೋಕ್ಷವಾಗಿ ಸಹಕಾರಿ ಕ್ಷೇತ್ರಕ್ಕೆ ರಾಜಕೀಯ ಕಾಲಿಟ್ಟಾಗಿನಿಂದಲೊ ಏನೋ ಸಹಕಾರಿ ಕ್ಷೇತ್ರ ತನ್ನ ಮೂಲ ಅರ್ಥವನ್ನು ಕಳೆದುಕೊಳ್ಳಲು ಆರಂಭಿಸಿತು.

ಇದೆಲ್ಲದಕ್ಕೂ ಹೆಚ್ಚಾಗಿ ಇವುಗಳನ್ನು ಹೆಚ್ಚು ಸಮರ್ಥಗೊಳಿಸಬೇಕಾದ ಸರ್ಕಾರಗಳು ತಮ್ಮ ಸರ್ಕಾರದ ವರ್ಚಸ್ಸನ್ನು ಬೆಳೆಸಿಕೊಳ್ಳಲು ಜನಪ್ರಿಯ ಯೋಜನೆಗಳನ್ನು ಜಾರಿಗೆ ತರುವ ಮೂಲಕ ಅವುಗಳ ಅನುಷ್ಠಾನವನ್ನು ಈ ಸಹಕಾರಿ ಸಂಘಗಳ ಮೂಲಕ ಮಾಡಲು ಆರಂಭಿಸಿದವು. ಇದಕ್ಕೆ ಉದಾಹರಣೆಯೆಂದರೆ ರೈತರ, ಇನ್ನಿತರರ ಸಾಲ ಮನ್ನಾದಿಂದ ಆರಂಭವಾಗಿ, ಜೆಡಿಎಸ್ ಹಾಗೂ ಕಾಂಗ್ರೆಸ್ ಮೈತ್ರಿ ಸರ್ಕಾರದಲ್ಲಿ ಶೇಕಡ ೬ರ ಬಡ್ಡಿ ದರದಲ್ಲಿ ಸಾಲ ನೀಡುವ, ತದನಂತರ ಜೆಡಿಎಸ್ ಹಾಗೂ ಬಿಜೆಪಿ ಮೈತ್ರಿ ಸರ್ಕಾರದಲ್ಲಿ ಶೇಕಡ ೪ರ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಗಳನ್ನು ಜಾರಿಗೆ ತರುವ ಮೂಲಕ ಸಹಕಾರಿ ಸಂಘಗಳು ನೆಲ ಕಚ್ಚಲು ಕಾರಣವಾಯಿತು.

ಏಕೆಂದರೆ ಸರ್ಕಾರಗಳು ತಮ್ಮ ಆಡಳಿತದ ವರ್ಚಸ್ಸನ್ನು ಹೆಚ್ಚಿಸಿಕೊಳ್ಳಲು ಹಲವಾರು ಜನಪ್ರಿಯ ಯೋಜನೆಗಳನ್ನು ಜಾರಿ ಮಾಡಿ ಅವುಗಳನ್ನು ಸಹಕಾರಿ ಸಂಘಗಳ ಮೇಲೆ ಹೊರಿಸಿದುದರ ಪರಿಣಾಮವಾಗಿ ಸಾಲ ಮನ್ನಾ ಆಗಿದ್ದರಿಂದ ಸಾಲ ಮರುಪಾವತಿ ಆಗದೇ ಸಹಕಾರಿ ಸಂಘ (ಬ್ಯಾಂಕ್)ಗಳಲ್ಲಿನ ಠೇವಣಿ ಕುಸಿಯುತ್ತಾ ಹೋಯಿತು. ತದನಂತರ ಅತ್ಯಂತ ಕಡಿಮೆ ದರದಲ್ಲಿ ಸಾಲ ನೀಡುವ ಯೋಜನೆಗಳು ಜಾರಿಯಾದ್ದರಿಂದ ಇರುವಷ್ಟು ಹಣ ಕೂಡ ಕಡಿತವಾಯಿತು. ಆನಂತರ ಮತ್ತೆ ಸಾಲ ಮನ್ನಾ ಜಾರಿಯಾದಾಗ ಗಾಯದ ಮೇಲೆ ಬರೆ ಎಳೆದಂತಾಯಿತು.

**ಎಂ. ಮಂಜುನಾಥ ಬಮ್ಮನಕಟ್ಟಿ**

ಆದರೆ, ಈ ಜನಪ್ರಿಯ ಯೋಜನೆಗಳನ್ನು ಜಾರಿಗೆ ತಂದ ಸರ್ಕಾರಗಳು ಈ ಸಂಘಗಳಿಗೆ ಸರ್ಕಾರದಿಂದ ಕೊಡಬೇಕಾದ ಹಣಕಾಸಿನ ಸಹಾಯ ನೀಡುವಲ್ಲಿ ಮಾತ್ರ ಪರಿಣಾಮಕಾರಿಯಾಗಿ ಸ್ಪಂದಿಸಲಿಲ್ಲ. ಮುಂದೆ ಬಂದ ಸರ್ಕಾರಗಳು ಕೂಡ ಸಹಕಾರಿ ಸಂಘಗಳ ಆರ್ಥಿಕ ಪರಿಸ್ಥಿತಿಯೇನು ಎಂದು ತಿಳಿದುಕೊಳ್ಳದೆ ಜನಪ್ರಿಯ ಯೋಜನೆಗಳನ್ನು ಜಾರಿಗೆ ತಂದುದರ ಪರಿಣಾಮವಾಗಿ, ಸಹಕಾರಿ ಕ್ಷೇತ್ರ ಆರ್ಥಿಕ ಮುಗ್ಗಟ್ಟಿಗೆ ಒಳಗಾಯಿತು. ಸರ್ಕಾರದ ಯಾವುದೇ ಯೋಜನೆಗಳು ರೈತನಿಗೆ ತಲುಪದೆ ಅವು ಹೆಸರಿಗೆ ಮಾತ್ರ ಜನಪ್ರಿಯ ಯೋಜನೆಗಳಾಗಿ ಉಳಿದವು.

ಆದರೆ, ದಿನ ಕಳೆದಂತೆ ಸಹಕಾರಿ ಕ್ಷೇತ್ರ ಕುಸಿದಿದ್ದಲ್ಲದೆ ಸಾಕಷ್ಟು ಕಡೆಗಳಲ್ಲಿ ಅನೇಕ ಸಂಘಗಳು ಮುಚ್ಚಿಹೋದವು, ಇನ್ನು ಕೆಲ ಕಡೆಗಳಲ್ಲಿ ಮುಚ್ಚಿಹೋಗುವ ಸ್ಥಿತಿಗೆ ಬಂದು ತಲುಪಿವೆ. ಅಲ್ಲದೆ ರೈತರೂ ಸೇರಿದಂತೆ ಈ ಸಹಕಾರಿ ಸಂಘದ ಹಣಕಾಸಿನ ಮೇಲೆ ಅವಲಂಬಿತರಾಗಿದ್ದ ನೇಕಾರರಂತಹ ಇತರ ವರ್ಗದವರು ತಾವೇ ಕಟ್ಟಿಕೊಂಡ ಸಂಘದಲ್ಲಿ ಸಾಲ ಸಿಗದಿದ್ದರಿಂದ ರಾಷ್ಟ್ರೀಕೃತ ಬ್ಯಾಂಕುಗಳ ಬಾಗಿಲು ತಟ್ಟಿ ಅವರು ವಿಧಿಸುವ ಎಲ್ಲ ಷರತ್ತುಗಳನ್ನು ಒಪ್ಪಿ ತಮ್ಮ ಭೂಮಿ, ಆಸ್ತಿಯನ್ನೇ ಬರೆದುಕೊಟ್ಟು ಹೆಚ್ಚು ಹೆಚ್ಚು ಸಾಲಗಾರರಾದರು. ಪರಿಣಾಮವಾಗಿ ರೈತರ ಆತ್ಮಹತ್ಯೆಯ ಸರಣಿ ನಡೆಯುವುದು ಸಾಮಾನ್ಯ ವಿಷಯ ಅನ್ನುವಂತಹ ವಾತಾವರಣ ಸೃಷ್ಟಿಯಾಯಿತು.

ಮತ್ತೊಂದು ಆಶ್ಚರ್ಯಕರ ಸಂಗತಿ ಎಂದರೆ, ಸಹಕಾರಿ ತತ್ವವನ್ನು ನೀಡಿದ ನೆಲದಲ್ಲಿಯೇ ಈಗ ಸಹಕಾರ ಉಳಿಯದ ಪರಿಸ್ಥಿತಿ ನಿರ್ಮಾಣವಾಗಿದೆ. ಅಲ್ಲದೆ ಸರ್ಕಾರ ನೀಡಿದ ಶೇಕಡ ೪ರ ಬಡ್ಡಿ ದರದ ಸಾಲ ಕೂಡ ರೈತರಿಗೆ ಸಿಗದಂತಾಗಿದೆ. ಅಖಂಡ ಧಾರವಾಡ ಜಿಲ್ಲೆಯ ರೈತರ ಜೀವನಾಡಿಯಾಗಿದ್ದ ಕೆಸಿಸಿ ಬ್ಯಾಂಕ್ ದಿವಾಳಿಯಾಗಿದ್ದು ಇದಕ್ಕೆ ಕಾರಣ. ಈ ಸಹಕಾರಿ ತತ್ವಕ್ಕೆ ಹೆಚ್ಚು ಮಹತ್ವ ನೀಡುವ ಮೂಲಕ, ಅದನ್ನು ಗಟ್ಟಿಗೊಳಿಸುವ ಮೂಲಕ ರೈತರು ಮತ್ತು ಸಣ್ಣ ಕುಟುಂಬಗಳಿಗೆ ಆರ್ಥಿಕ ಸ್ವಾತಂತ್ರ್ಯ ಸಿಗಲು ಸಾಧ್ಯ ಎಂಬುದನ್ನು ಮನದಟ್ಟು ಮಾಡಿಕೊಡುವುದು ರೈತಪರ ಕಾಳಜಿಯುಳ್ಳ ಯಾವುದೇ ಸರ್ಕಾರದ ಕರ್ತವ್ಯವಾಗಿದೆ.

ಸಹಕಾರಿ ಸಂಘದ ಅವನತಿಗೆ ಸರ್ಕಾರದ ಜನಪ್ರಿಯ ಯೋಜನೆಗಳೇ ಅಲ್ಲದೆ ರಾಜಕೀಯದ ಪ್ರವೇಶ ಕೂಡ ಅಷ್ಟೇ ಕಾರಣ. ಏಕೆಂದರೆ ರಾಜಕೀಯ ಪ್ರವೇಶವಾದಾಗ ಸಹಕಾರಿ ಸಂಘಗಳಲ್ಲಿ ಗುಂಪುಗಾರಿಕೆ ಮತ್ತು ತಮ್ಮ ತಮ್ಮವರಿಗಾಗಿ, ತಮ್ಮ ಸ್ವಹಿತಾಸಕ್ತಿಗಳಿಗಾಗಿ ಕಾನೂನನ್ನು ಗಾಳಿಗೆ ತೂರಿ ಅಲ್ಲಿನ ಪಾವಿತ್ರ್ಯತೆ ಮತ್ತು ಸಹಕಾರಿ ಸಂಘದ ತತ್ವ ಅಳಿದು ಬೇಕಾಬಿಟ್ಟಿಯಾಗಿ ಕೃಷಿಯಲ್ಲದ, ಕೃಷಿಗೆ ಪೂರಕವೂ ಅಲ್ಲದ, ಹೆಸರಿಗೆ ಮಾತ್ರ ಕೃಷಿಗೆ ಭಾರಿ ಅನುಕೂಲ ಎಂಬಂತಹ ಅನೇಕ ಕಾರ್ಯಗಳಿಗೆ ಸಾಲ ನೀಡುವಂತಹ ಪ್ರಕ್ರಿಯೆ ಮುಂದುವರಿದಿದ್ದರ ಪರಿಣಾಮವಾಗಿ ಸಾಲ ಮರುಪಾವತಿಯಾಗದೇ ಹೋಯಿತು.

ಅಲ್ಲದೆ ವರ್ಷದಿಂದ ವರ್ಷಕ್ಕೆ ಸಾಲದ ಮೇಲಿನ ಬಡ್ಡಿ ಬೆಳೆಯುತ್ತಾ ಅಸಲಿಗಿಂತ ಬಡ್ಡಿಯ ಮೊತ್ತವೇ ಹೆಚ್ಚಾಯಿತು. ಇದು ಹಾಗಿರಲಿ, ಈ ಹಿನ್ನೆಲೆಯಲ್ಲಿ ಬಡ್ಡಿ ಕೂಡ ಪಾವತಿಯಾಗಲಿಲ್ಲ. ಎಲ್ಲವೂ ಬ್ಯಾಂಕುಗಳ ಕಾಗದ ಪತ್ರಗಳಲ್ಲಿ ಮಾತ್ರ ಉಳಿದವು. ಏಕೆಂದರೆ ಪಡೆದ ಸಾಲವು ಸದ್ಬಳಕೆಯಾಗದೆ ಪೋಲಾಗಿದ್ದರಿಂದ ಅದನ್ನು ಮರುಪಾವತಿ ಮಾಡುವವರು ಯಾರು ? ಅಲ್ಲದೆ, ಈ ಸಾಲ ವಸೂಲು ಮಾಡುವವರೆ ಮುಖ್ಯವಾಗಿ ಅದರ ದುರ್ಬಳಕೆಯ ವಾರಸುದಾರರಾದಾಗ ಸಾಲದ ವಸೂಲಿಗೆ ಯಾರನ್ನೂ ಕೇಳುವ ಪ್ರಶ್ನೆಯೇ ಇಲ್ಲದಂತಾಯಿತು. ಸಹಕಾರಿ ವಲಯದ ಬಗ್ಗೆ ದೊಡ್ಡ ದೊಡ್ಡ ತತ್ವಗಳನ್ನು ಹೇಳುವವರು ಕೂಡ ಈ ಬಗ್ಗೆ ಚಕಾರ ಎತ್ತಲಿಲ್ಲ.

ಒಟ್ಟಾರೆ, ಈ ಎಲ್ಲ ಕಾರಣಗಳಿಂದಾಗಿ ಸಹಕಾರಿ ಬ್ಯಾಂಕುಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಅಲ್ಲಿ ದುಡಿಯುವವರು ಸಂಬಳವೂ ಸಿಗದೆ ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿ ಉದ್ಭವವಾಯಿತು. ಇದಕ್ಕೆ ತಾಜಾ ಉದಾಹರಣೆಯೆಂದರೆ ಸಹಕಾರಿ ಕ್ಷೇತ್ರ ಹುಟ್ಟಿದ ತವರು ಜಿಲ್ಲೆಯಲ್ಲಿರುವ ಧಾರವಾಡದ ಕೆಸಿಸಿ (ಈಗಲೂ ಈ ಬ್ಯಾಂಕು ಅಖಂಡ ಧಾರವಾಡ ಜಿಲ್ಲೆಗೆ ಅಂದರೆ ಗದಗ, ಹಾವೇರಿ ಮತ್ತು ಧಾರವಾಡ ಜಿಲ್ಲೆಗಳಿಗೆ ಸೇರಿರುವಂತಹದ್ದು) ಬ್ಯಾಂಕು. ಇದು ಈ ಜಿಲ್ಲೆಗಳ ರೈತರ ಜೀವನಾಡಿ ಆಗಿತ್ತು. ಆದರೆ, ಇಲ್ಲಿಗೆ ಬಂದ ಆಡಳಿತ ಮಂಡಳಿಯ ರಾಜಕೀಯ ಡೊಂಬರಾಟ, ಸ್ವಹಿತಾಸಕ್ತಿಗಳ ಸಂಘರ್ಷಗಳ ಫಲವಾಗಿ ಬೇಕಾಬಿಟ್ಟಿ ಸಾಲಗಳನ್ನು ನೀಡಿದುದರ ಪರಿಣಾಮವಾಗಿ ಮತ್ತು ಸರ್ಕಾರದ ಅಗ್ಗದ ಜನಪ್ರಿಯ ಯೋಜನೆಗಳಿಂದಾಗಿ ಬ್ಯಾಂಕು ಕೋಟಿ ಕೋಟಿಗಟ್ಟಲೆ ಹಣ ಕಳೆದುಕೊಳ್ಳುವ ಮೂಲಕ ತನ್ನ ಗಟ್ಟಿತನ ಕಳೆದುಕೊಂಡಿತು.

ಇದರ ಕೆಟ್ಟ ಪರಿಣಾಮವು ಸಣ್ಣ ಸಣ್ಣ ಕೋ-ಆಪರೇಟಿವ್ ಬ್ಯಾಂಕು (ಸಂಘ)ಗಳ ಮೇಲೂ ಬಿತ್ತು. ಏಕೆಂದರೆ, ಆ ಬ್ಯಾಂಕುಗಳು ತಮ್ಮಲ್ಲಿ ಸಂಗ್ರಹಿಸಿದ ಹಣವನ್ನು ಕೆಸಿಸಿ ಬ್ಯಾಂಕ್‌ನಲ್ಲಿ ಠೇವಣಿ ಇಟ್ಟಿದ್ದವು. ಬ್ಯಾಂಕಿನಲ್ಲಿಟ್ಟ ಠೇವಣಿಗೆ ಲಾಭ ಸಿಗುವ ಮಾತಿರಲಿ, ಅಸಲು ಕೂಡ ಕೈ ಸೇರದೆ ಹೋಗಿದ್ದರಿಂದ ಸಣ್ಣಪುಟ್ಟ ಬ್ಯಾಂಕುಗಳು ದಿವಾಳಿಯಾದವು. ಇದೆಲ್ಲದಕ್ಕೂ ಹೆಚ್ಚಾಗಿ ಕೆಸಿಸಿ ಬ್ಯಾಂಕಿನ ಕೆಲವು ಸಿಬ್ಬಂದಿ ವರ್ಗದವರು ಆತ್ಮಹತ್ಯೆ ಮಾಡಿಕೊಂಡರು. ಇನ್ನು ಕೆಲವರು ಈಗಲೂ ನರಕಯಾತನೆ ಅನುಭವಿಸುತ್ತಿದ್ದಾರೆ.

**ರಾಷ್ಟ್ರಪತಿಗಳ ಮಾತು ಗಮನಿಸುವ ಅಗತ್ಯವಿದೆ**

ನಮ್ಮ ದೇಶದ ಪ್ರಥಮ ಮಹಿಳಾ ರಾಷ್ಟ್ರಪತಿ ಶ್ರೀಮತಿ ಪ್ರತಿಭಾ ಪಾಟೀಲರು ೧೬ನೆಯ ಭಾರತೀಯ ಸಹಕಾರಿ ಕಾಂಗ್ರೆಸ್ ಅಧಿವೇಶನದಲ್ಲಿ ಸಹಕಾರಿ ರಂಗದ ಬಗ್ಗೆ ಮಾತನಾಡಿದ ಈ ಕೆಳಕಾಣಿಸಿದ ಅಂಶಗಳ ಬಗ್ಗೆ ಇಂದಿನ ಸರ್ಕಾರಗಳು, ಸಹಕಾರಿ ಕ್ಷೇತ್ರದಲ್ಲಿರುವವರು ಗಮನಹರಿಸುವ ಅಗತ್ಯವಿದೆ.

* ವಿಶ್ವ ವ್ಯವಸ್ಥೆ ತೀವ್ರವಾಗಿ ವ್ಯಾಪಾರೀಕರಣಗೊಳ್ಳುತ್ತಿರುವಲ್ಲಿ ಹೊಸ ಬೇಡಿಕೆಗಳ ಎದುರು ಸಹಕಾರಿ ಸಂಘಗಳು ಸ್ವತಃ ತಮ್ಮನ್ನು ತೊಡಗಿಸಿಕೊಳ್ಳಲು ಮಹತ್ವಪೂರ್ಣವಾದ ನಿಯಮವನ್ನು ರೂಪಿಸಿಕೊಳ್ಳುವ ಸವಾಲು ಬಂದೊದಗಿದೆ.

* ಬಹುರಾಷ್ಟ್ರೀಯ ಕಂಪನಿಗಳು ಹಾಗೂ ವ್ಯಾಪಾರೀ ಮನೆತನಗಳಲ್ಲಿ ಉಂಟಾಗಿರುವ ವ್ಯಾಪಾರಿ ಸ್ಪರ್ಧೆಗಳನ್ನು ಎದುರಿಸಲು ಸಹಕಾರಿ ಸಂಸ್ಥೆಗಳು ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಳ್ಳಬೇಕು. ಹಲವಾರು ಸುಧಾರಣೆಗಳನ್ನು ತರುವುದರೊಂದಿಗೆ ನಿರಂತರ ಕೆಲಸ ಮಾಡಬೇಕಿದೆ.

* ಏಕೆಂದರೆ, ನಮ್ಮ ದೇಶದಲ್ಲಿ ಆರ್ಥಿಕ ಪ್ರಗತಿ ಕಂಡುಬರುತ್ತಿದ್ದರೂ ದೇಶದ ಜನಸಂಖ್ಯೆಯ ಒಂದು ಬೃಹತ್ ಭಾಗ ಪ್ರಗತಿಯ ಲಾಭದ ವೃತ್ತದಿಂದ ಹೊರಗೆ ಉಳಿದಿದೆ. ಹೀಗಾಗಬಾರದು, ಏಕೆಂದರೆ ಸಹಕಾರಿ ಸಂಸ್ಥೆಗಳ ಗುರಿ ಒಗ್ಗಟ್ಟಿನಿಂದ ಪ್ರಗತಿ ಸಾಧಿಸುವುದಾಗಿದೆ. ಈ ಸಂಸ್ಥೆಗಳು ತಮ್ಮ ಸಹಾಯವನ್ನು ಅಪೇಕ್ಷಿಸುವ ಗ್ರಾಹಕರಾದ ರೈತರು, ಕುಲಕಸಬುದಾರರು, ಕೃಷಿಕರು, ಕೈಮಗ್ಗ ನೇಕಾರರು ಹಾಗೂ ಮಹಿಳೆಯರೂ ಸೇರಿದಂತೆ ಬಹುಸಂಖ್ಯಾತ ಜನರಿಗೆ ಎಲ್ಲ ರೀತಿಯ ಅಗತ್ಯತೆಗಳನ್ನು ಪೂರೈಸುವ ಮೂಲಕ ಅಂಚಿನಲ್ಲಿರುವ, ಹಿಂದುಳಿದ ಲಕ್ಷಾಂತರ ಜನರನ್ನು ತಮ್ಮೊಳಗೆ ಸೇರಿಸಿಕೊಳ್ಳುವ ವ್ಯವಸ್ಥೆಯ ತಂತ್ರ ಈ ಸಹಕಾರಿ ಸಂಸ್ಥೆಗಳಲ್ಲಿದೆ.

* ಪ್ರಗತಿಯನ್ನು ಸಾಧಿಸುವಲ್ಲಿ ಸಹಕಾರಿ ಸಂಸ್ಥೆಗಳು ಮಹತ್ವಪೂರ್ಣ ಪಾತ್ರ ವಹಿಸುವುದರಿಂದ ಇವುಗಳಿಗೆ ಒಳ್ಳೆಯ ಆಡಳಿತ ಮತ್ತು ಮಾರಾಟಕ್ಕೆ ಸಂಬಂಧಿಸಿದಂತೆ ವ್ಯವಸ್ಥಿತ ಸಂಸ್ಥೆಗಳ ರೂಪದಲ್ಲಿ ಸಬಲೀಕರಣಗೊಳಿಸಲು ಚಟುವಟಿಕೆಯ ನೇತೃತ್ವವನ್ನು ನಿಷ್ಠಾವಂತ ನಾಯಕತ್ವ ವಹಿಸುವ ಮತ್ತು ತರಬೇತಿ ಹೊಂದಿದ ಕೆಲಸಗಾರರ ಅಗತ್ಯದೊಂದಿಗೆ ಈ ಸಂಸ್ಥೆಗಳ ಬಗ್ಗೆ ವಿಶ್ವಾಸ ಮೂಡಿಸುವ ನಿಟ್ಟಿನಲ್ಲಿ ಸರ್ಕಾರಗಳು ಹೆಚ್ಚು ಗಮನ ಹರಿಸುವ ಅಗತ್ಯವಿದೆ.

**ವೈದ್ಯನಾಥನ್ ಸಮಿತಿಯ ಶಿಫಾರಸ್ಸುಗಳಿಗೆ ಆದ್ಯತೆ ನೀಡಬೇಕು**

ಕೇಂದ್ರ ಸರ್ಕಾರವು ಸಹಕಾರಿ ಸಂಸ್ಥೆಗಳನ್ನು ಬಲಪಡಿಸಲು ಹಲವಾರು ಸಮಿತಿಗಳನ್ನು ಹಾಗೂ ತಜ್ಞ ತಂಡಗಳನ್ನು ನೇಮಕ ಮಾಡಿದೆ. ಈ ಸಂಬಂಧ ಈಚೆಗೆ ಸಮಿತಿ ಎಂದರೆ ಪ್ರೊ|| ಎ. ವೈದ್ಯನಾಥನ್ ನೇತೃತ್ವದ ಆಯೋಗವನ್ನು ನೇಮಿಸಲಾಗಿದೆ. ಈ ಆಯೋಗವು ಸಹಕಾರಿ ಸಂಸ್ಥೆಗಳ ಹಣಕಾಸಿನ ಪರಿಸ್ಥಿತಿಯೂ ಸೇರಿದಂತೆ ಅವುಗಳ ಬಲವರ್ಧನೆಗೆ ಕ್ರಮಗಳು ಮತ್ತು ಸಲಹೆಗಳನ್ನು ಮುಂದಿಟ್ಟಿದೆ.

ಈ ಆಯೋಗವು ಎರಡು ಭಾಗಗಳಲ್ಲಿ ಎರಡು ಶಿಫಾರಸ್ಸುಗಳನ್ನು ಮಾಡಿದೆ : (೧) ಅಲ್ಪಾವಧಿ ಸಾಲ ವಲಯ ಹಾಗೂ (೨) ದೀರ್ಘಾವಧಿ ಸಾಲ ವಲಯ. ಇವುಗಳಲ್ಲಿ ಅಲ್ಪಾವಧಿ ಸಾಲ ವಲಯದ ವರದಿಯನ್ನು ಕೇಂದ್ರ ಸರ್ಕಾರ ಅಂಗೀಕರಿಸಿದೆ. ಅಲ್ಲದೇ ಇದಕ್ಕಾಗಿ ೧೩,೫೯೬ ಕೋಟಿ ರೂ.ಗಳ ಹಣವನ್ನು ಘೋಷಿಸಿ, ಈ ಉದ್ದೇಶದ ಅನುಷ್ಠಾನಕ್ಕೆ ನಬಾರ್ಡನ್ನು ನೇಮಕ ಮಾಡಿದೆ. ಈ ಬಗ್ಗೆ ರಾಜ್ಯ ಸರ್ಕಾರಗಳು ಗಮನಹರಿಸುವ ಮೂಲಕ ಕೇಂದ್ರ ಸರ್ಕಾರ ವೈದ್ಯನಾಥನ್ ಆಯೋಗದ ದೀರ್ಘಾವಧಿಯ ಸಾಲ ವಲಯವನ್ನು ಕೂಡಲೆ ಅಂಗೀಕರಿಸುವ ಮೂಲಕ ಪ್ರಗತಿಯತ್ತ ಹೆಜ್ಜೆ ಹಾಕುವ ಅಗತ್ಯವಿದೆ.

ಎಂ. ಮಂಜುನಾಥ ಬಮ್ಮನಕಟ್ಟಿ
ಪತ್ರಕರ್ತ, ಫಕ್ಕೀರಗೌಡ ಬಿಲ್ಡಿಂಗ್, ಕೆ. ಸಿ. ರಾಣಿ ರಸ್ತೆ, ಗದಗ - ೫೮೨ ೧೦೧

# ನ್ಯಾಯಸಮ್ಮತ ನಡವಳಿಕೆ






ಮಹಾಭಾರತದ ಒಂದು ಸನ್ನಿವೇಶ ಹೀಗಿದೆ. ಶ್ರೀಕೃಷ್ಣ ಶಾಂತಿದೂತನಾಗಿ ಹಸ್ತಿನಾಪುರಕ್ಕೆ ಹೋದ ಸಂದರ್ಭ. ಅನೇಕ ಹಿರಿಯರು ದುರ್ಯೋಧನನಿಗೆ ಯುದ್ಧ ಮಾರ್ಗವನ್ನು ಕೈಬಿಟ್ಟು ಶಾಂತಿಯನ್ನು ಕಾಯ್ದುಕೊಳ್ಳುವಂತೆ ಬಗೆಬಗೆಯಾಗಿ ಬುದ್ಧಿ ಹೇಳುತ್ತಾರೆ. ಮಹಾಭಾರತದ ಮಹಾನ್ ದಾರ್ಶನಿಕ ವಿದುರ ''ನ್ಯಾಯ'' ಮಾರ್ಗದಲ್ಲಿ ನಡೆಯುವಂತೆ ದುರ್ಯೋಧನನಿಗೆ ಉಪದೇಶ ಮಾಡುತ್ತಾನೆ. ಅದಕ್ಕೆ ದುರ್ಯೋಧನ, ''ನ್ಯಾಯ ಯಾವುದು, ಎಲ್ಲ ಕಾಲಕ್ಕೂ ನ್ಯಾಯವೆಂದು ಪರಿಗಣಿಸಬಹುದಾದ ಯಾವುದೇ ಸೂಕ್ತಿ ಇದೆಯೇ'' ಎಂಬುದಾಗಿ ವಿದುರನಿಗೆ ಸವಾಲು ಹಾಕುತ್ತಾನೆ. ಅದಕ್ಕೆ ವಿದುರ ಹೇಳುತ್ತಾನೆ: ''ಹೌದು, ಇತರರು ನಿನಗೆ ಏನನ್ನು ಮಾಡಬಾರದಾಗಿ ನೀನು ಇಚ್ಛಿಸುತ್ತೀಯೋ, ಅದನ್ನು ನೀನು ಇತರರಿಗೆ ಮಾಡಬಾರದು'', ಎಂದು.

ಮಹಾಭಾರತದ ಮಹಾನ್ ದಾರ್ಶನಿಕ ವಿದುರ ''ನ್ಯಾಯ'' ಮಾರ್ಗದಲ್ಲಿ ನಡೆಯುವಂತೆ ದುರ್ಯೋಧನನಿಗೆ ಉಪದೇಶ ಮಾಡುತ್ತಾನೆ. ಅದಕ್ಕೆ ದುರ್ಯೋಧನ, ''ನ್ಯಾಯ ಯಾವುದು, ಎಲ್ಲ ಕಾಲಕ್ಕೂ ನ್ಯಾಯವೆಂದು ಪರಿಗಣಿಸಬಹುದಾದ ಯಾವುದೇ ಸೂಕ್ತಿ ಇದೆಯೇ'' ಎಂಬುದಾಗಿ ವಿದುರನಿಗೆ ಸವಾಲು ಹಾಕುತ್ತಾನೆ. ಅದಕ್ಕೆ ವಿದುರ ಹೇಳುತ್ತಾನೆ: ''ಹೌದು, ಇತರರು ನಿನಗೆ ಏನನ್ನು ಮಾಡಬಾರದಾಗಿ ನೀನು ಇಚ್ಛಿಸುತ್ತೀಯೋ, ಅದನ್ನು ನೀನು ಇತರರಿಗೆ ಮಾಡಬಾರದು'', ಎಂದು.

ಎಷ್ಟೊಂದು ಅರ್ಥಪೂರ್ಣ ಹೇಳಿಕೆ! ಹೊರನೋಟಕ್ಕೆ ವಿದುರನ ಸೂತ್ರ ತುಂಬ ಸರಳವಾಗಿ ತೋರಿಬರುತ್ತದೆ. ಆದರೆ ಈ ಸೂತ್ರ ಎಷ್ಟು ಸರಳವೋ, ಆಚರಣೆಯಲ್ಲಿ ಅಷ್ಟೇ ಅಸಾಧ್ಯ. ಇತರರಿಂದ ನಾವು ನಿರೀಕ್ಷಿಸುವ ರೀತಿನೀತಿಗಳು ಇತರರ ಬಗ್ಗೆ ನಾವು ನಡೆದುಕೊಳ್ಳುವ ರೀತಿನೀತಿಗಳಿಗಿಂತ ತುಂಬ ವಿಭಿನ್ನವಾಗಿರುತ್ತವೆ. ಎರಡರ ನಡುವೆ ಬೃಹತ್ ಕಂದರವನ್ನು ಯಾರೂ ಗುರುತಿಸಬಹುದು.

ಇತರರಿಂದ ನಾವು ಏನೆಲ್ಲ ನಿರೀಕ್ಷೆ ಮಾಡುತ್ತೇವೆ? ಅವರು ನಮ್ಮೊಡನೆ ಆತ್ಮೀಯವಾಗಿ ನಡೆದುಕೊಳ್ಳಬೇಕೆಂದು ಬಯಸುತ್ತೇವೆ. ಅವರು ನಮಗೆ ಸಹಾಯ ಮಾಡಬೇಕು, ಸುಳ್ಳು ಹೇಳಬಾರದು, ಮೋಸ ಮಾಡಬಾರದು, ಕೃತಜ್ಞರಾಗಿರಬೇಕು, ಗೌರವ ಕೊಡಬೇಕು, ಸಹಾನುಭೂತಿಯುಳ್ಳವರಾಗಿರಬೇಕು – ಇಂಥವೇ ಹತ್ತು ಹಲವಾರು ನಿರೀಕ್ಷೆಗಳು ನಮ್ಮದಾಗಿರುತ್ತವೆ. ನಮಗೆ ಸಂತೋಷ ಕೊಡುವ, ಲಾಭ ತರುವ ಎಲ್ಲ ನಡವಳಿಕೆಗಳನ್ನು ಇತರರಿಂದ ನಿರೀಕ್ಷಿಸುತ್ತೇವೆ. ನಮ್ಮ ಅಸಂತೋಷಕ್ಕೆ ಕಾರಣವಾಗುವ, ನಷ್ಟವುಂಟುಮಾಡಬಹುದಾದ ಬೇರೆಲ್ಲ ನಡವಳಿಕೆಗಳನ್ನು ನಾವು ತಿರಸ್ಕರಿಸುತ್ತೇವೆ. ಇದೇ ಬಗೆಯ ನಡವಳಿಕೆಗಳನ್ನು ಬೇರೆಯವರೂ ಸಹ ನಮ್ಮಿಂದ ನಿರೀಕ್ಷಿಸುವುದು ಸಹಜ. ನಮ್ಮ ನಡವಳಿಕೆಗಳು ಇದಕ್ಕೆ ಅನುಗುಣವಾಗಿರಬೇಕು ಎನ್ನುವುದು ವಿದುರನ ಸೂತ್ರದ ತಾತ್ಪರ್ಯ.

ಒಬ್ಬ ವ್ಯಕ್ತಿಯ ನಡೆ ಹಾಗೂ ನುಡಿಗಳ ನಡುವಿನ ಅಂತರ ಇರುವಂತೆಯೇ, ನಿರೀಕ್ಷೆ ಮತ್ತು ನಡವಳಿಕೆಗಳ ನಡುವೆಯೂ ಇರುವ ಅಂತರ ಸರ್ವಸಾಮಾನ್ಯ. ಇತರರು ನಮ್ಮ ಮನಸನ್ನು ನೋಯಿಸಬಾರದೆಂದು ಹಾರೈಸುವ ನಾವು, ಇತರರ ಮನಸ್ಸಿಗೆ ಸಾಕಷ್ಟು ಸಂದರ್ಭಗಳಲ್ಲಿ ಆಘಾತ ಉಂಟುಮಾಡುತ್ತಲೇ ಇರುತ್ತೇವೆ. ಪ್ರತಿ ಸಂದರ್ಭದಲ್ಲೂ ಇತರರಿಂದ ಸಹಾಯ ಅಪೇಕ್ಷಿಸುವ ನಾವು ಎಷ್ಟು ಬಾರಿ ಇತರರಿಗೆ ಸಹಾಯಹಸ್ತ ಚಾಚುತ್ತೇವೆ? ಹಾಗೊಮ್ಮೆ ಸಹಾಯ ಮಾಡಿದರೂ ಸಹ, ಸಹಾಯ ಪಡೆದವರು ಸದಾ ನಮಗೆ ಕೃತಜ್ಞರಾಗಿರಬೇಕೆಂದು ಬಯಸುತ್ತೇವೆ. ಆದರೆ ಬೇರೆಯವರಿಂದ ಪಡೆದುಕೊಂಡ ಸಹಾಯಕ್ಕೆ ಕೃತಜ್ಞತೆ ತೋರುವಲ್ಲಿ ನಾವು ಹಿಂದೆ ಬೀಳುತ್ತೇವೆ. ಬೇರೆಯವರು ನಮಗೆ ಸಹಾಯ ಮಾಡುವುದು ಅವರ ಕರ್ತವ್ಯ ಎಂದು ಭಾವಿಸುತ್ತೇವೆ. ಇತರರಿಗೆ ಕರ್ತವ್ಯದ ಪಾಠ ಹೇಳುವ ನಾವು, ನಮ್ಮ ಕರ್ತವ್ಯಗಳನ್ನು ನೆರವೇರಿಸುವಲ್ಲಿ ಹಿಂದೆ ಬೀಳುತ್ತೇವೆ.

ಬೇರೆಯವರಿಂದ ಒಳಿತನ್ನು ನಿರೀಕ್ಷಿಸುವ ನಾವು ಬೇರೆಯವರ ಒಳಿತನ್ನೂ ಹಾರೈಸಬೇಕು. ಹಾಗಿಲ್ಲದಿದ್ದರೆ, ಅದು 'ಸ್ವಾರ್ಥ' ಎನ್ನಿಸಿಕೊಳ್ಳುತ್ತದೆ. ಸ್ವಾರ್ಥವನ್ನು ಮೀರಿ ಬದುಕುವುದು ನಮ್ಮಂಥ ಸಾಮಾನ್ಯರಿಗೆ ಸಾಧ್ಯವಾಗದ ಮಾತು. ಸ್ವಾರ್ಥತ್ಯಾಗ ಮಾಡಬೇಕೆಂಬುದು ಇಲ್ಲಿನ ಉಪದೇಶವಲ್ಲ. ನಾವು ಸ್ವಾರ್ಥಿಗಳಾಗಿರುವಂತೆ ಬೇರೆಯವರಿಗೂ ಅವರದೇ ಸ್ವಾರ್ಥ ಇರುತ್ತದೆ. ಅದನ್ನು ನಾವು ಅರ್ಥ ಮಾಡಿಕೊಳ್ಳಬೇಕು. ಇತರರಿಂದ ಒಳಿತನ್ನು ನಿರೀಕ್ಷಿಸುವ ನಾವು ಇತರರಿಗೆ ಒಳ್ಳೆಯದನ್ನು ಮಾಡುವ ಮನೋಭಾವ ಹೊಂದಿದವರಾಗಿರಬೇಕು. ಬೇರೆಯವರಿಂದ ಕೆಡುಕನ್ನು ಇಚ್ಛಿಸದ ನಾವು ಬೇರೆಯವರಿಗೆ ಕೆಡುಕಾಗದಂತೆ ಎಚ್ಚರ ವಹಿಸಬೇಕು. ಈ ಬಗೆಯ ಕೊಡುಕೊಳ್ಳುವ ಸದಾಶಯಗಳ ವಿನಿಮಯ ನ್ಯಾಯಸಮ್ಮತ ನಡವಳಿಕೆಯ ಮೂಲಾಧಾರ.

**ಡಾ|| ಹೆಚ್. ಎಸ್. ಈಶ್ವರ**
ಹೆಚ್.ಐ.ಜಿ. ೧೧, ಕೆ.ಹೆಚ್.ಬಿ. ಕಾಲೋನಿ, ಮೊದಲನೇ ಹಂತ, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

# ಸೃಜನಾತ್ಮಕ ಕಲಾ ಚಿಂತನೆಯ ಕಿಶೋರ್ ಕುಮಾರ್



ಕಥೆ ಹೇಳುವ ಬೊಂಬೆ ಆಕ್ರಿಲಿಕ್ ಚಿತ್ರ



ಒಬ್ಬ ಕಲಾಕಾರನ ಕೃತಿಗಳನ್ನು ನೋಡಿದಾಗ ಕ್ಷಣ ಕ್ಷಣಕ್ಕೂ ಬದಲಾಗುತ್ತಿರುವ ಪ್ರಾಯೋಗಿಕ ಕಲಾ ಚಿಂತನೆ, ಕಲಾ ಸಂಘಟನೆ ಮತ್ತು ಸೃಜನಾತ್ಮಕ ಚಿತ್ರ ಹೊಸ ಹೊಸ ಪ್ರಯೋಗ, ವೈವಿಧ್ಯತೆಗಳಿಗೆ ಮುಂದಾಗುತ್ತದೆ. ಈ ದಿಸೆಯಲ್ಲಿ ತನ್ನ ವೈಯಕ್ತಿಕ ಶೈಲಿಯಿಂದ ಸೃಜನಶೀಲ ಕಲಾಕೃತಿಗಳಲ್ಲಿ ತೊಡಗಿ ಕೊಂಡಿರುವ ತುಮಕೂರಿನ ರವೀಂದ್ರ ಕಲಾನಿಕೇತನದ ಹಿರಿಯ ಉಪನ್ಯಾಸಕರಾದ ಕಿಶೋರ್ ಕುಮಾರ್ ಗಮನ ಸೆಳೆಯುತ್ತಾರೆ.

ತಮ್ಮ ಕಲಾ ಪ್ರತಿಭೆಯನ್ನು ವಿವಿಧೆಡೆ ನಿರಂತರವಾಗಿ ಪ್ರದರ್ಶಿಸುತ್ತಾ ಬೆಳೆಯುತ್ತಿದ್ದಾರೆ. ಕಲಾವಿದ ಯಾವುದೋ ಒಂದು ಶೈಲಿಗೆ ಅಥವಾ ವಿಷಯಕ್ಕೆ ಅಂಟಿಕೊಂಡಾಗ, ಏನೋ ಒಂದು ರೀತಿಯ ನಿರ್ಲಿಪ್ತತೆ, ಏಕತಾನತೆ ಅಂತಹವರ ಕೃತಿಗಳಲ್ಲಿ ಎದ್ದುಕಾಣುತ್ತದೆ. ಹಾಗಾಗಿ ಕಲಾವಿದನು ಯಾವಾಗಲೂ ಚಿಂತನಾಶೀಲನಾಗಿರಬೇಕು, ನಿತ್ಯ ನೂತನವಾದುದನ್ನು ನೀಡುತ್ತಿರಬೇಕು ಎಂಬುದು ಕಿಶೋರ ಕುಮಾರ್ ಅವರ ವಾದ. ಆದ್ದರಿಂದಲೇ ಅವರು ತಾವು ರಚಿಸುವ ಕಲಾಕೃತಿಗಳಲ್ಲಿ ವಿಭಿನ್ನತೆಯನ್ನು ಮೆರೆಯುತ್ತಾರೆ.

'ಬುದ್ಧ ಅಹಿಂಸೆಯನ್ನು ಬೋಧಿಸುವ ತತ್ವಗಳು', 'ಹೆಣ್ಣು ಮತ್ತು ಕುದುರೆ', 'ಕಥೆ ಹೇಳುವ ಬೊಂಬೆಗಳು' ಮುಂತಾದ ಇವರ ಕೃತಿಗಳಲ್ಲಿ ಸ್ತ್ರೀ ಸಂವೇದನೆಯ ಕಲ್ಪನೆಯು ಸಾಕ್ಷಾತ್ಕಾರಗೊಂಡಿದೆ.

ಕಿಶೋರ್ ಕುಮಾರ್ ಮೂಲತಃ ಗುಲ್ಬರ್ಗ ಜಿಲ್ಲೆಯ ಶಹಾಪೂರ ತಾಲ್ಲೂಕಿನ ಗೋಗಿ ಗ್ರಾಮದಲ್ಲಿ ಜನಿಸಿದವರು. ಸ್ವಂತ ಊರಿನಲ್ಲಿ ಪ್ರೌಢಶಾಲೆ ಶಿಕ್ಷಣ ಮುಗಿಸಿ ಕಲೆಯ ವ್ಯಾಮೋಹಕ್ಕೆ ಒಳಗಾಗಿ ಗುಲ್ಬರ್ಗಾದ ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆಗೆ ಸೇರಿದರು. ಖ್ಯಾತ ಕಲಾವಿದ ಪ್ರೊ॥ ವಿ. ಜಿ. ಅಂದಾನಿ ಮತ್ತು ಎಂ. ಬಿ. ಲೋಹದ ಅವರ ಮಾರ್ಗದರ್ಶನ ಹಾಗೂ ಸತತ ಪರಿಶ್ರಮದಿಂದ ಇವರು ಪ್ರತಿಭಾವಂತ ಕಲಾವಿದರಾಗಿ ರೂಪಗೊಳ್ಳಲು ಸಹಕಾರಿ ಯಾದವು. ಇವರು ಏಕವ್ಯಕ್ತಿ ಪ್ರದರ್ಶನಗಳೇ ಅಲ್ಲದೆ ಬೆಂಗಳೂರು, ಮಂಗಳೂರು, ತುಮಕೂರು ಗಳಲ್ಲಿ ಗುಂಪು ಪ್ರದರ್ಶನಗಳನ್ನು ನೀಡಿದ್ದಾರೆ. ದೆಹಲಿ, ಕೇರಳ, ಮುಂಬೈ, ಹೈದರಾಬಾದ್, ಗೋವಾ, ರಾಜಸ್ಥಾನ, ಮದ್ರಾಸ್, ಕಲ್ಕತ್ತ ಮುಂತಾದೆಡೆಗಳಲ್ಲಿ ಪ್ರದರ್ಶನಗಳನ್ನು ನೀಡಿದ್ದಾರೆ. ಅಲ್ಲದೆ, ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ, ಭಾರತ ಆರ್ಟ್ ಪ್ರದರ್ಶನ ನಾಗಪೂರ್ ಪ್ರಶಸ್ತಿ, ಅಖಿಲ ಭಾರತ ಮೈಸೂರು ದಸರಾ ಪ್ರದರ್ಶನದಲ್ಲಿ ೮ ಬಾರಿ ಪ್ರಶಸ್ತಿ ಹಾಗೂ ಜಿಲ್ಲಾ ರಾಜ್ಯೋತ್ಸವ ಪ್ರಶಸ್ತಿ ಮುಂತಾದ ಅನೇಕ ಪ್ರಶಸ್ತಿ ಪುರಸ್ಕಾರ ಗಳು ಅವರನ್ನು ಅರಸಿ ಕೊಂಡು ಬಂದಿವೆ.

**ಟಿ. ಆರ್. ರೇವಣ್ಣ**
ನಂ. ೪೮೫ ಎ
ಬಿ. ಎಚ್. ರಸ್ತೆ
ಗಣಪತಿ ದೇವಸ್ಥಾನದ ಹತ್ತಿರ
ವಿನೋಬ ನಗರ
ತುಮಕೂರು - ೫೭೨ ೧೦೧



ಜಾನಪದ ನೃತ್ಯ ತೈಲ ಚಿತ್ರ



ಕಥೆ ಹೇಳುವ ಬೊಂಬೆ ತೈಲ ಚಿತ್ರ



ಕುದುರೆ ಮತ್ತು ಮಹಿಳೆ ತೈಲ ಚಿತ್ರ

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /February 2010 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614.